ಶ್ರೀ

॥ ಶ್ರೀ ರಂಗಾಂಜನೇಯರು ಕಾಯಲಿ ॥

ಎನ್. ಮಂಜುನಾಥರವರಿಂದ ರಚಿಸಲ್ಪಟ್ಟ



# ಮೂರೂ ಬಿಟ್ಟವರು

(ಸಾಮಾಜಿಕ, ಹಾಸ್ಯ, ಕುತೂಹಲಭರಿತ ನಾಟಕ)



ಪ್ರಕಾಶಕರು, ಮುದ್ರಕರು

ಶ್ರೀ ವೀರೇಶ ಪ್ರಕಾಶನ

ಬವಸ್ಯಾಪುರ ಓಣಿ, ಹುಬ್ಬಳ್ಳಿ–28.

ಬೆಲೆ: 15-00

## ಹವ್ಯಾಸಿ ಕಲಾವಿದರ ಗಮನಕ್ಕೆ

ಹವ್ಯಾಸಿ ಕಲಾವಿದರು ಈ ನಾಟಕವನ್ನು ಆಡುವಾಗ, ನನ್ನ ಗಮನಕ್ಕೆ ತಂದು ಆಡುವುದು ಒಳ್ಳೆಯದು. ಆದರೆ, ಯಾವ ಗೌರವ ಧನವನ್ನೂ ನೀವು ಕೊಡಬೇಕಾಗಿಲ್ಲ. ಅದು ನಿಮ್ಮ ನಿಮ್ಮ ಅಂತರಂಗಕ್ಕೆ ಬಿಟ್ಟದ್ದು. ಅಕಸ್ಮಾತ್ ನನ್ನ ಗಮನಕ್ಕೆ ತರದೆ ಆಡಿದರೂ, ಕೃತಿಯನ್ನು ಮೊದಲು ಕೂಲಂಕುಷವಾಗಿ ಅಭ್ಯಾಸ ಮಾಡಿ, ಬೇಕಾಗುವ ಸಾಮಗ್ರಿಗಳನ್ನು ಒದಗಿಸಿಕೊಂಡು ನಾಟಕದ ಮೂಲ ಅರ್ಥಕ್ಕೆ ಸಮರ್ಥ ಶ್ರೇಯಸ್ಸು ತರಬೇಕೆಂದು ಕಳ-ಕಳಿಯಿಂದ ಪ್ರಾರ್ಥಿಸುವ.

ನಿಮ್ಮ

**ಎನ್. ಮಂಜುನಾಥ**

---

## [illegible]ಭೂಮಿಯ ಮಾಲೀಕರ ಗಮನಕ್ಕೆ

[illegible] ನಾಟಕವನ್ನು [illegible]ರಂಗಭೂಮಿಯ ಮೇಲೆ ಅಭಿನಯಿಸಲು ಇಚ್ಛಿ[illegible]ವರು. ನನ್ನ ಅಧಿಕ[illegible] ಪಡೆದು, ಲಿಖಿತ ಒಪ್ಪಂದ ಮಾಡಿಕೊಂಡು ಪ್ರಯೋ[illegible]ಂದು [illegible]ನನ್ನ ಅನುಮತಿ ಇಲ್ಲದೆ ಆಡುವುದು ಕಂಡು ಬಂ[illegible]ಸೂಕ್ತ ಕ್ರಮ ಕೈ[illegible]ಳ್ಳಬೇಕಾಗುತ್ತದೆ. ಇದಕ್ಕೆ ಕಾನೂನು [illegible]ರತಿಲ್ಲ.


[illegible]ಳಾಸ :

**ಕೆ. ಎನ್. [illegible]ನಾಥ, ಕವಿಗಳು** ಸ್ವೀ

ಮುಕ್ಕಾಂ – ಕುಂದೂರ ಪೋಸ್ಟ–ಕುಂದೂರ

ತಾಲ್ಲೂಕ್–ಹೊನ್ನಾಳಿ ಜಿಲ್ಲಾ– ಶಿವಮೊಗ್ಗ

ಪಿ. ನಂ.–577219.


---

॥ ಶ್ರೀ ರಂಗಾಂಜನೇಯರು ಕಾಯಲಿ ॥

# ಅರ್ಪಣೆ

ಸ್ವರ್ಗಸ್ಥರಾದರೂ ನನ್ನ ಹೃದ್ಭೂಮಿಯಲ್ಲಿ ಸ್ಥಿರವಾಗಿ, ಚಿರರೂಪದಲ್ಲಿ ಪ್ರತಿಬಿಂಬಿಸುತ್ತಿರುವ "ಪೂಜ್ಯ ತಂದೆ"...,

ನನಗೆ ಸ್ಫೂರ್ತಿಯಾಗಿ, ಚೈತನ್ಯವಾಗಿದ್ದು, ಅನಿರೀಕ್ಷಿತ ಘಟನೆಯಿಂದ ಮುತ್ತೈದೆ ಸಾವು ಪಡೆದು, ನನ್ನ ಕಣ್ಣ ಕಂಬನಿಗಳಲ್ಲಿ, ತನ್ನ ಬಿಂಬ ಬಿಂಬಿಸುತ್ತಾ ನಿರಂತರ ಅಂತರಂಗದಲ್ಲಿ ನೆನಪಿನ ತರಂಗಗಳನ್ನು ಸೃಷ್ಟಿಸುತ್ತಿರುವ "ನನ್ನ ಅಕ್ಕ"...,

ಬಾಳಿನುದ್ದಕ್ಕೂ ಬರೀ ಬವಣೆ ಪಡುತ್ತ ಬದುಕುತ್ತಿದ್ದರೂ, ನನ್ನ ಬದುಕಿಗೆ ಭದ್ರ ಬುನಾದಿ ಒದಗಿಸಲು ಹೆಣಗುತ್ತಿರುವ "ನನ್ನ ತಾಯಿ"...!

ಇವರನ್ನು ಸ್ಮರಿಸಿ, ಶ್ರೀರಕ್ಷೆ ಬಯಸಿ.... ಆಘಾತಗಳನ್ನು ಎದುರಿಸಲು ಅಸಮರ್ಥನಾಗಿ ಸಾವಿಗೆ ಶರಣು ಹೋಗಲು ಸಿದ್ಧನಾಗಿದ್ದಾಗ "ಜೀಗಾಪಲಾಗಿ ನಾನಿದ್ದೇನೆ" ಎಂದು ಭುಜ ತಟ್ಟಿ, ಬವಣೆ ಮೆಟ್ಟಿ ನಿಲ್ಲಲು ಪ್ರೇರೇಪಿಸಿ, ಬದುಕಿಸಿ, ಬದುಕುಳಿಸುತ್ತಿರುವ ನನ್ನ ಆತ್ಮೀಯ ಮಿತ್ರ ಸಹೋದರ "ಶ್ರೀಯುತ ಕೆ. ಹೆಚ್. ರಾಜಣ್ಣ" ಇವರಿಗೆ ಈ ಕೃತಿಯನ್ನು ಪ್ರೀತಿ–ಪೂರ್ವಕ ಅರ್ಪಿಸುತ್ತೇನೆ.

**ಕೆ. ಎನ್. ಮಂಜುನಾಥ**

ಕುಂದೂರು

# ಸೀನರಿಗಳು

1) ರಸ್ತಾ
2) ಉದ್ಯಾನವನ
3) ವನಜಾಳ ಬಂಗಲೆ
4) ಆಸ್ಪತ್ರೆ
5) ಜಂಗಲ್ ರಸ್ತಾ
6) ಕಟ್ ಜಂಗಲ್
7) ಮಿಲ್ಲಿರುವ ಪರದೆ, ಮಿಲ್ ಕಂಪೌಂಡ್ ಮಿಲ್ಲಿನ (ವನಜಾ ಕಾಟನ್ ಮಿಲ್) ಹೆಸರಿರುವ ಗೇಟ್
8) ಧರ್ಮಯ್ಯನವರ ಶಿಲಾಮೂರ್ತಿ
9) ಸುಡುಗಾಡು ಸೀನಿನ ಪರದೆ

# — ಪಾತ್ರಗಳ ಪರಿಚಯ —

## — ಪುರುಷರ ಪಾತ್ರಗಳು —

| | | | |
|---|---|---|---|
| 1) | ಧರ್ಮಯ್ಯ | — | ಸಾತ್ವಿಕ, ಜವಾಬ್ದಾರಿ ವ್ಯಕ್ತಿ |
| 2) | ಭೋಜರಾಜ | — | ವಿಷಘಾತುಕ, ವಿಕ್ರಂನ ತಂದೆ, ವನಜಾಳ ಸೋದರ ಮಾವ |
| 3) | ವಿಕ್ರಂ | — | ಭೋಜರಾಜನ ಮಗ (ಡೂಪ್ಲಿಕೇಟ್)ತಂದೆಯ ಪ್ರತಿಗುಣದವನು |
| 4) | ಅರವಿಂದ | — | ಡಾಕ್ಟರ್ ವನಜಾಳ ಪ್ರಿಯಕರ ಕಪಟ |
| 5) | ರಂಗ | — | ಡ್ರೈವರ್ |
| 6) | ಮೂರ್ತಿ | — | ಕಾರಕೂನ |
| 7) | ಜಗ್ಗು | — | ಕಂಪೌಂಡರ್, ತಲೆ ಹಿಡುಕ |
| 8) | ವಕೀಲ | — | ವನಜಾಳ ಹಿತ ಚಿಂತಕ |

## ಸ್ತ್ರೀಯರ ಪಾತ್ರಗಳು —

| | | | |
|---|---|---|---|
| 1) | ವಿಶಾಲ | — | ಅತ್ಯಾಚಾರಕ್ಕೆ ಒಳಗಾದ ಹೆಣ್ಣು |
| 2) | ವನಜ | — | ಮಿಲ್ಲಿನ ಒಡತಿ |
| 3) | ಲಿಲ್ಲಿ | — | ಟೈಪಿಸ್ಟ್ |

# ಮೂರೂ ಬಿಟ್ಟವರು

## ಪ್ರಥಮ ದೃಶ್ಯ

### ರಸ್ತೆ

(ಕೈಯಲ್ಲಿ ಪತ್ರ ಹಿಡಿದ ಧರ್ಮಯ್ಯನು ಭೋಜರಾಜನನ್ನು ಹಿಂಬಾಲಿಸಿ ಬಂದು)

ಧರ್ಮಯ್ಯ– ಯಜಮಾನ್ರೆ

ಭೋಜರಾಜ– (ನಿಂತು) ಯಾರು?... ಓ ಧರ್ಮಯ್ಯ! ಬಂದ ವಿಷಯವೇನು?

ಧರ್ಮಯ್ಯ– ತಮ್ಮಗ ವಿಕ್ರಂ ಪತ್ರ ಬರೆದಿದ್ದಾರೆ.

ಭೋಜರಾಜ– ಏನಂತ ಬರೆದಿದ್ದಾನೆ?

ಧರ್ಮಯ್ಯ– ತುರ್ತಾಗಿ ಎರಡು ಸಾವಿರ ರೂಪಾಯಿ ಕಳಿಸಿ ಕೊಡಿ ಅಂತ ಬರೆದಿದ್ದಾರೆ.

ಭೋಜರಾಜ– ಕಳಿಸ್ಬೇಕಾಗಿತ್ತು. ಅದನ್ನ ನನ್ನಿಂದೆ ತಿಳ್ಸೋ ಅವಶ್ಯವೇನಿತ್ತು?

ಧರ್ಮಯ್ಯ– ನೋಡಿ, ನಾನೀ ರೀತಿ ಹೇಳ್ತೀನಿ ಅಂತ ತಪ್ಪು ಭಾವಿಸಬಾರದು. "ವನಜಾ ಕಾಟನ್ ಮಿಲ್ಲಿನ" ಸಂಪೂರ್ಣ ಜವಾಬ್ದಾರಿಯನ್ನು ನನಗ ವಹಿಸಿಕೊಟ್ಟು ವನಜಮ್ಮನವರು ಡೆಲ್ಲಿಗ್ಹೋಗಿದ್ದಾರೆ. ಅವರು ಮರಳಿ ಬರುವತನಕ ಆದಾಯವನ್ನು, ಸಂಬಂಧಪಟ್ಟ ವ್ಯವಹಾರಗಳಿಗೆ ಮಾತ್ರ ಬಳಸಬೇಕಾದ ಪರಿಸ್ಥಿತಿ ನನಗೆ ಅನಿವಾರ್ಯವಾಗಿದೆ. ಹೀಗಿದ್ದಾಗ ತಮ್ಮಗ ಹಣಕ್ಕಾಗಿ ಮೇಲಿಂದ ಮೇಲೆ ಪತ್ರ ಬರೆಯುತ್ತಿದ್ದರೆ ಹೇಗೆ? ಆದಾಗ್ಯೂ ಈ ತಿಂಗಳಲ್ಲಿ ಅವರಿಗೆ ಕಳಿಸಿರುವ ಹಣವೆಷ್ಟು ಗೊತ್ತೇ?

ಭೋಜರಾಜ– ಹೇಳ್ತಾಯಿದಿಯಲ್ಲಾ ಮುಂದುವರಿಸು.

ಧರ್ಮಯ್ಯ– ಹತ್ತು ಸಾವಿರ ರೂಪಾಯಿಗಳು. ನಿಮ್ಮಗ ಹೋಗಿರುವುದು ವಿದ್ಯಾಭ್ಯಾಸಕ್ಕಾಗಿಯೆಂದಾಗ, ಹಣವನ್ನು ಈ ರೀತಿ ದುಂದು ವೆಚ್ಚ ಮಾಡೋ ಅವಶ್ಯವಾದರೂ ಏನಿದೆ?

ಭೋಜರಾಜ– ಅವಶ್ಯವಿದ್ದೇ ಅವನು ಹಣ ಖರ್ಚು ಮಾಡ್ತಿರೋದು. ಅವನು ನನ್ಮಗ, ಒಂದಿನಕ್ಕೆ ಐವತ್ತು ಸಾವಿರ ಖರ್ಚು ಮಾಡ್ತಾನೆ. ಇಷ್ಟಬಂದ ರೀತಿ ಮಜಾ ಮಾಡ್ತಾನೆ. ಅದನ್ನ ಕೇಳೋಕೆ ನಿನಗೇನು ಅಧಿಕಾರವಿದೆ?

ಧರ್ಮಯ್ಯ– ಇದು ಅಧಿಕಾರವಲ್ಲ ಯಜಮಾನ್ರೆ. ಮಿಲ್ಲಿನ ಸಧ್ಯದ ವ್ಯವಹಾರಗಳ ಬಗ್ಗೆ ನನಗಿರುವ ಜವಾಬ್ದಾರಿ.

ಭೋಜರಾಜ– ಇರ್ಬಹುದು. ಆದ್ರೆ ಈ ನಿನ್ನ ಜವಾಬ್ದಾರಿ ನನ್ನ ಅಧಿಕಾರದ ಕೆಳಗಿದೆ ಅನ್ನೋದನ್ನ ಮರಿಬೇಡ. ವನಜಾ ನಿನಗೂ, ಮಿಲ್ಲಿಗೂ ಒಡತಿಯಿರಬಹುದು. ನನಗಲ್ಲ. ಅವಳು ನನ್ನ ತಂಗಿ ಮಗಳು. ತಂದೆ, ತಾಯಿ ಇಬ್ಬರನ್ನೂ ಕಳೆದುಕೊಂಡು ತಬ್ಬಲಿಯಾದ ಅವಳನ್ನು ಹೂವಿನಂತೆ ಜೋಪಾನ ಮಾಡಿಕೊಂಡು ಬಂದವನು ನಾನೆಂದಾಗ ನಿನಗೂ, ಮಿಲ್ಲಿಗೂ ಅಷ್ಟೆ ಅಲ್ಲ ನಿನ್ನೊಡತಿಗೂ ನಾನೇ ಅಧಿಕಾರಿ. ಅವಳಿಡೀ ಸಂಪತ್ತನ್ನೇ ಖರ್ಚು ಮಾಡೋ ಹಕ್ಕು ನನಗಿದೆ. ಇದೇ ಕೊನೆ ನಿನ್ಗೆ. ನನ್ನ ಮಗನ ಖರ್ಚಿನ ಲೆಕ್ಕವನ್ನು ಪುಸ್ತಕದಲ್ಲಷ್ಟೇ ಬರೆದಿಡುವ ಕೆಲಸ ಮಾಡು. ಅದನ್ನ ಬಿಟ್ಟು ನನ್ಮುಂದೆ ಖರ್ಚಿನ ವಿವರಣೆ ಕೇಳೋ ಮೂರ್ಖತನ ಮಾಡಬೇಡ. "ಬೀಜದಂತೆ ಫಲ, ತಂದೆಯಂತೆ ಮಗ" ನೆನಪಿರ್ಲಿ ಬರ್ತೀನಿ. (ಹೋಗುವಾಗ ನಿಂತು) ಆಂ..., ಧರ್ಮಯ್ಯ, ಟೈಪಿಸ್ಟ್ ಲಿಲ್ಲಿ ಇವತ್ತು ಕೆಲ್ಸಕ್ಕೆ ರಾಜೀನಾಮೆ ಕೊಟ್ಟಿದ್ದಾಳೆ.

ಧರ್ಮಯ್ಯ– (ಆಶ್ಚರ್ಯವಾಗಿ) ಏನಂದ್ರಿ? ಟೈಪಿಸ್ಟ್ ಲಿಲ್ಲಿ ಕೆಲಸಕ್ಕೆ ರಾಜೀನಾಮೆ ಕೊಟ್ಟಿದ್ದಾಳಾ? (ಸಂಶಯ ದೃಷ್ಟಿ) ಕಾರಣ?

ಭೋಜರಾಜ– ವಿನಾಕಾರಣ ಒಟ್ಟು ರಾಜೀನಾಮೆ ಕೊಟ್ಟಿದ್ದಾಳೆ. ಅವಳ ಜಾಗಕ್ಕೆ ಬೇರೆಯವರನ್ನ ನಾನು ಭರ್ತಿ ಮಾಡ್ತೀನಿ. ನೀನು ಮಾತ್ರ ಈ ವಿಷಯದಲ್ಲಿ ತಲೆ ಹಾಕದಂಗ ತೆಪ್ಪಗಿದ್ದುಬಿಡು. ಹುಷಾರಿ, ಇದು ಎಚ್ಚರಿಕೆ, ಮರ್ತೀಯಾ? (ಹೋಗುವನು)

ಧರ್ಮಯ್ಯ– ಎಚ್ಚರಿಕೆ ಮರ್ತ್ತೀಯಾ?... ಭೋಜರಾಜ, ನೀನಾಡಿದ ಮಾತು ಮರೆತರೂ, ಮಾಡಿದ ಕೃತ್ಯ ನನ್ನ ಹೃದಯದಲ್ಲಿ ಲಾವಾರಸವಾಗಿ ಹರಿಯುತ್ತಿದೆ ಅಂದಾಗ, ನಿನ್ನನ್ನು ಜೀವಂತ ಸಮಾಧಿ ಮಾಡಬೇಕೆಂದಿರುವ ನನ್ನರಿವೆಗೆ ಮರೆವಾಗಲು ಅದೆಂತು ಸಾಧ್ಯ ಭೋಜರಾಜ ? ತಂದೆ–ಮಗ ಕೂಡಿಕೊಂಡು ನನ್ನ ಮಗಳ ಶೀಲಗೆಡಿಸಿ, ಸಾಯಿಸಿ, ಇತಿಹಾಸ ಪುಟದಲ್ಲಿ ವಿಚಿತ್ರ ಚಿತ್ರ ಮೂಡಿಸಿರುವ ನಿಮ್ಮ ಬಿಸಿ ಗುಂಡಿಗೆಯ ರಕ್ತ ಚಿಮ್ಮಿಸುವುದನ್ನು ನಾನೆಂತು ಮರೆಯಲಿ ? ನನ್ನ ಮಗಳು ನಿಮ್ಮಿಬ್ಬರ ಹೆಸರು ಸೂಚಿಸಿ, ಪತ್ರ ಬರೆದಿಟ್ಟು, ನೇಣು ಹಾಕಿಕೊಂಡು ಸತ್ತ ಅಂದಿನ ದೃಶ್ಯ, ನನ್ನ ಕಣ್ಣುಗಳಲ್ಲಿ ಇಂದಿಗೂ ಜ್ವಾಲಾಮುಖಿಯಾಗಿ ಹೊಗೆಯಾಡುತ್ತಿದೆ. ಆದರೂ ಹೊಟ್ಟೆಯ ಕಿಚ್ಚಿಗೆ ತಣ್ಣೀರು ಸುರುವಿಕೊಂಡು, ಸಮಯಕ್ಕಾಗಿ, ಸಂದರ್ಭಕ್ಕಾಗಿ ಕಾಯ್ತು ತ್ತಿದ್ದೇನೆ, ತತ್ತರಿಸುತ್ತಿದ್ದೇನೆ.

(ಲಿಲ್ಲಿ ಬರುವಳು)

ಲಿಲ್ಲಿ– ನಮಸ್ಕಾರ ಸಾರ್.

ಧರ್ಮಯ್ಯ– ನಮಸ್ಕಾರ. ಮತ್ತೇನಮ್ಮ ಲಿಲ್ಲಿ, ನೀನು ಕೆಲಸಕ್ಕೆ ರಾಜೀನಾಮೆ ಕೊಟ್ಟಿರುವೆಯಂತೆ ನಿಜವೇ ?

ಲಿಲ್ಲಿ– ನಿಜ ಸಾರ್.

ಧರ್ಮಯ್ಯ– ಕಾರಣ ?

ಲಿಲ್ಲಿ– ಹೇಳಿದ್ರೆ ನೀವು ನಂಬ್ತಿರೋ ಇಲ್ವೋ ? ಯಾಕಂದ್ರೆ ಜಗತ್ತಿಗೇ ದೇವರಾದವನು, ನನಗೆ ದೆವ್ವಾಗಿ ಕಾಡ್ತಾನೆ ಅಂದ್ರೆ ಯಾರು ನಂಬ್ತಾರೆ ?

ಧರ್ಮಯ್ಯ– ವಿಷಯಾನ ಬಿಡಿಸಿ ಹೇಳಮ್ಮ.

ಲಿಲ್ಲಿ– ಆಫೀಸಿನ ಕೆಲ್ಸ ಮುಗ್ಸಿ, ಮನೆಗೆ ಹೋಗಾಕ ಅಣಿಯಾಗಿದ್ದೆ. ಅಷ್ಟೊತ್ತಿಗೆ ಅಲ್ಲಿಗೆ ಬಂದ ಭೋಜರಾಜರು ನೋಡಮ್ಮಾ, ಮುಖ್ಯವಾದ ವ್ಯವಹಾರಕ್ಕೆ ಸಂಬಂಧಪಟ್ಟ ಪತ್ರಗಳಿವು. ಸಧ್ಯ ಟೈಪ್ ಮಾಡಿಟ್ಟೇ ಮನೆಗೋಗಂತ, ನನ್ನ ಟೇಬಲ್ ಮೇಲೆ ಪತ್ರ ಇಟ್ಟು ಹೊರಗೋದ್ರು. ನನಗದು

ಕೆ. ಎನ್. ಮಂಜುನಾಥ ಕವಿ ವಿರಚಿತ

# ಮೂರೂ ಬಿಟ್ಟವರು





ಶ್ರೀ ವೀರೇಶ ಪ್ರಕಾಶನ, ಹುಬ್ಬಳ್ಳಿ

ಶ್ರೀ

॥ ಶ್ರೀ ರಂಗಾಂಜನೇಯರು ಕಾಯಲಿ ॥

ಎಸ್. ಮಂಜುನಾಥರವರಿಂದ ರಚಿಸಲ್ಪಟ್ಟ.



# ಮೂರೂ ಬಿಟ್ಟವರು

(ಸಾಮಾಜಿಕ, ಹಾಸ್ಯ, ಕುತೂಹಲಭರಿತ ನಾಟಕ)



ಪ್ರಕಾಶಕರು, ಮುದ್ರಕರು

**ಶ್ರೀ ವೀರೇಶ ಪ್ರಕಾಶನ**

**ಬಮ್ಮಾಪುರ ಓಣಿ, ಹುಬ್ಬಳ್ಳಿ-28.**

**ಬೆಲೆ: 15-00**

## ಹವ್ಯಾಸಿ ಕಲಾವಿದರ ಗಮನಕ್ಕೆ

ಹವ್ಯಾಸಿ ಕಲಾವಿದರು ಈ ನಾಟಕವನ್ನು ಆಡುವಾಗ, ನನ್ನ ಗಮನಕ್ಕೆ ತಂದು ಆಡುವುದು ಒಳ್ಳೆಯದು. ಆದರೆ, ಯಾವ ಗೌರವ ಧನವನ್ನೂ ನೀವು ಕೊಡಬೇಕಾಗಿಲ್ಲ. ಅದು ನಿಮ್ಮ ನಿಮ್ಮ ಅಂತರಂಗಕ್ಕೆ ಬಿಟ್ಟದ್ದು. ಅಕಸ್ಮಾತ್ ನನ್ನ ಗಮನಕ್ಕೆ ತರದೆ ಆಡಿದರೂ, ಕೃತಿಯನ್ನು ಮೊದಲು ಕೂಲಂಕುಷವಾಗಿ ಅಭ್ಯಾಸ ಮಾಡಿ, ಬೇಕಾಗುವ ಸಾಮಗ್ರಿಗಳನ್ನು ಒದಗಿಸಿಕೊಂಡು ನಾಟಕದ ಮೂಲ ಅರ್ಥಕ್ಕೆ ಸಮರ್ಥ ಶ್ರೇಯಸ್ಸು ತರಬೇಕೆಂದು ಕಳ-ಕಳಿಯಿಂದ ಪ್ರಾರ್ಥಿಸುವ.

ನಿಮ್ಮ

**ಎನ್. ಮಂಜುನಾಥ**

---

## [illegible]ಭೂಮಿಯ ಮಾಲೀಕರ ಗಮನಕ್ಕೆ

ಈ ನಾಟಕವನ್ನು [illegible] ರಂಗಭೂಮಿಯ ಮೇಲೆ ಅಭಿನಯಿಸಲು ಇಚ್ಛಿಸುವವರು, ನನ್ನ ಅಧಿಕ[illegible] ಪಡೆದು, ಲಿಖಿತ ಒಪ್ಪಂದ ಮಾಡಿಕೊಂಡು ಪ್ರಯೋ[illegible]ಂದು [illegible] ನನ್ನ ಅನುಮತಿ ಇಲ್ಲದೆ ಆಡುವುದು ಕಂಡು ಬಂ[illegible]ತ್ತ ಕ್ರಮ ಕೈ[illegible]ಳ್ಳಬೇಕಾಗುತ್ತದೆ. ಇದಕ್ಕೆ ಕಾನೂನು [illegible]ರತಿಲ್ಲ.

[illegible]ಳಾಸ :

**ಕೆ. ಎನ್. [illegible]ನಾಥ, ಕವಿಗಳು**

ಮುಕ್ಕಾಂ – ಕುಂದೂರ    ಪೋಸ್ಟ–ಕುಂದೂರ

ತಾಲ್ಲೂಕ್–ಹೊನ್ನಾಳಿ    ಜಿಲ್ಲಾ– ಶಿವಮೊಗ್ಗ

ಪಿ. ನಂ.–577219.

---

॥ ಶ್ರೀ ರಂಗಾಂಜನೇಯರು ಕಾಯಲಿ ॥

## ಅರ್ಪಣೆ

ಸ್ವರ್ಗಸ್ಥರಾದರೂ ನನ್ನ ಹೃದ್ಭೂಮಿಯಲ್ಲಿ ಸ್ಥಿರವಾಗಿ, ಚಿರರೂಪದಲ್ಲಿ ಪ್ರತಿಬಿಂಬಿಸುತ್ತಿರುವ "ಪೂಜ್ಯ ತಂದೆ"...,

ನನಗೆ ಸ್ಫೂರ್ತಿಯಾಗಿ, ಚೈತನ್ಯವಾಗಿದ್ದು, ಅನಿರೀಕ್ಷಿತ ಘಟನೆಯಿಂದ ಮುತ್ತೈದೆ ಸಾವು ಪಡೆದು, ನನ್ನ ಕಣ್ಣ ಕೊಳಬನಿಗಳಲ್ಲಿ, ತನ್ನ ಬಿಂಬ ಬಿಂಬಿಸುತ್ತಾ ನಿರಂತರ ಅಂತರಂಗದಲ್ಲಿ ನೆನಪಿನ ತರಂಗಗಳನ್ನು ಸೃಷ್ಟಿಸುತ್ತಿರುವ "ನನ್ನ ಅಕ್ಕ"...,

ಬಾಳಿನುದ್ದಕ್ಕೂ ಬರೀ ಬವಣೆ ಪಡುತ್ತ ಬದುಕುತ್ತಿದ್ದರೂ, ನನ್ನ ಬದುಕಿಗೆ ಭದ್ರ ಬುನಾದಿ ಒದಗಿಸಲು ಹೆಣಗುತ್ತಿರುವ "ನನ್ನ ತಾಯಿ"...!

ಇವರನ್ನು ಸ್ಮರಿಸಿ, ಶ್ರೀರಕ್ಷೆ ಬಯಸಿ.... ಆಘಾತಗಳನ್ನು ಎದುರಿಸಲು ಅಸಮರ್ಥನಾಗಿ ಸಾವಿಗೆ ಶರಣು ಹೋಗಲು ಸಿದ್ಧನಾಗಿದ್ದಾಗ "ಜೊತೆಯಲಾಗಿ ನಾನಿದ್ದೇನೆ" ಎಂದು ಭುಜ ತಟ್ಟಿ, ಬವಣೆ ಮೆಟ್ಟಿ ನಿಲ್ಲಲು ಪ್ರೇರೇಪಿಸಿ, ಬದುಕಿಸಿ, ಬದುಕುಳಿಸುತ್ತಿರುವ ನನ್ನ ಆತ್ಮೀಯ ಮಿತ್ರ ಸಹೋದರ "ಶ್ರೀಯುತ ಕೆ. ಹೆಚ್. ರಾಜಣ್ಣ" ಇವರಿಗೆ ಈ ಕೃತಿಯನ್ನು ಪ್ರೀತಿ–ಪೂರ್ವಕ ಅರ್ಪಿಸುತ್ತೇನೆ.

**ಕೆ. ಎನ್. ಮಂಜುನಾಥ**

ಕುಂದೂರು

## ಸೀನರಿಗಳು

1) ರಸ್ತಾ
2) ಉದ್ಯಾನವನ
3) ವನಜಾಳ ಬಂಗಲೆ
4) ಆಸ್ಪತ್ರೆ
5) ಜಂಗಲ್ ರಸ್ತಾ
6) ಕಟ್ ಜಂಗಲ್
7) ಮಿಲ್ಲಿರುವ ಪರದೆ, ಮಿಲ್ ಕಂಪೌಂಡ್ ಮಿಲ್ಲಿನ (ವನಜಾ ಕಾಟನ್ ಮಿಲ್) ಹೆಸರಿರುವ ಗೇಟ್
8) ಧರ್ಮಯ್ಯನವರ ಶಿಲಾಮೂರ್ತಿ
9) ಸುಡುಗಾಡು ಸೀನಿನ ಪರದೆ

## — ಪಾತ್ರಗಳ ಪರಿಚಯ —

### — ಪುರುಷರ ಪಾತ್ರಗಳು —

| | | | |
|---|---|---|---|
| 1) | ಧರ್ಮಯ್ಯ | — | ಸಾತ್ವಿಕ, ಜವಾಬ್ದಾರಿ ವ್ಯಕ್ತಿ |
| 2) | ಭೋಜರಾಜ | — | ವಿಷಘಾತುಕ, ವಿಕ್ರಮನ ತಂದೆ, ವನಜಾಳ ಸೋದರ ಮಾವ |
| 3) | ವಿಕ್ರಂ | — | ಭೋಜರಾಜನ ಮಗ (ಡೂಪ್ಲಿಕೇಟ್)ತಂದೆಯ ಪ್ರತಿಗುಣದವನು |
| 4) | ಅರವಿಂದ | — | ಡಾಕ್ಟರ್ ವನಜಾಳ ಪ್ರಿಯಕರ ಕಪಟ |
| 5) | ರಂಗ | — | ಡ್ರೈವರ್ |
| 6) | ಮೂರ್ತಿ | — | ಕಾರಕೂನ |
| 7) | ಜಗ್ಗು | — | ಕಂಪೌಂಡರ್, ತಲೆ ಹಿಡುಕ |
| 8) | ವಕೀಲ | — | ವನಜಾಳ ಹಿತ ಚಿಂತಕ |

### ಸ್ತ್ರೀಯರ ಪಾತ್ರಗಳು —

| | | | |
|---|---|---|---|
| 1) | ವಿಶಾಲ | — | ಅತ್ಯಾಚಾರಕ್ಕೆ ಒಳಗಾದ ಹೆಣ್ಣು |
| 2) | ವನಜ | — | ಮಿಲ್ಲಿನ ಒಡತಿ |
| 3) | ಲಿಲ್ಲಿ | — | ಟೈಪಿಸ್ಟ್ |

॥ ಶ್ರೀ ಗಣೇಶಾಯ ನಮಃ ॥



# ಮೂರೂ ಬಿಟ್ಟವರು

## ಪ್ರಥಮ ದೃಶ್ಯ

### ರಸ್ತೆ

(ಕೈಯಲ್ಲಿ ಪತ್ರ ಹಿಡಿದ ಧರ್ಮಯ್ಯನು ಭೋಜರಾಜನನ್ನು ಹಿಂಬಾಲಿಸಿ ಬಂದು)

ಧರ್ಮಯ್ಯ– ಯಜಮಾನ್ರೆ

ಭೋಜರಾಜ– (ನಿಂತು) ಯಾರು?... ಓ ಧರ್ಮಯ್ಯ! ಬಂದ ವಿಷಯವೇನು?

ಧರ್ಮಯ್ಯ– ತಮ್ಮಗ ವಿಕ್ರಂ ಪತ್ರ ಬರೆದಿದ್ದಾರೆ.

ಭೋಜರಾಜ– ಏನಂತ ಬರೆದಿದ್ದಾನೆ?

ಧರ್ಮಯ್ಯ– ತುರ್ತಾಗಿ ಎರಡು ಸಾವಿರ ರೂಪಾಯಿ ಕಳಿಸಿ ಕೊಡಿ ಅಂತ ಬರೆದಿದ್ದಾರೆ.

ಭೋಜರಾಜ– ಕಳಿಸ್ಬೇಕಾಗಿತ್ತು. ಅದನ್ನ ನನ್ಮುಂದೆ ತಿಳ್ಸೋ ಅವಶ್ಯವೇನಿತ್ತು?

ಧರ್ಮಯ್ಯ– ನೋಡಿ, ನಾನೀ ರೀತಿ ಹೇಳ್ತೀನಿ ಅಂತ ತಪ್ಪು ಭಾವಿಸಬಾರದು. "ವನಜಾ ಕಾಟನ್ ಮಿಲ್ಲಿನ" ಸಂಪೂರ್ಣ ಜವಾಬ್ದಾರಿಯನ್ನು ನನಗ ವಹಿಸಿಕೊಟ್ಟು ವನಜಮ್ಮನವರು ಡೆಲ್ಲಿಗ್ಹೋಗಿದ್ದಾರೆ. ಅವರು ಮರಳಿ ಬರುವ ತನಕ ಆದಾಯವನ್ನು, ಸಂಬಂಧಪಟ್ಟ ವ್ಯವಹಾರಗಳಿಗೆ ಮಾತ್ರ ಬಳಸಬೇಕಾದ ಪರಿಸ್ಥಿತಿ ನನಗೆ ಅನಿವಾರ್ಯವಾಗಿದೆ. ಹೀಗಿದ್ದಾಗ ತಮ್ಮಗ ಹಣಕ್ಕಾಗಿ ಮೇಲಿಂದ ಮೇಲೆ ಪತ್ರ ಬರೆಯುತ್ತಿದ್ದರೆ ಹೇಗೆ? ಆದಾಗ್ಯೂ ಈ ತಿಂಗಳಲ್ಲಿ ಅವರಿಗೆ ಕಳಿಸಿರುವ ಹಣವೆಷ್ಟು ಗೊತ್ತೇ?

ಭೋಜರಾಜ– ಹೇಳ್ತಾಯಿದಿಯಲ್ಲಾ ಮುಂದುವರಿಸು.

ಧರ್ಮಯ್ಯ– ಹತ್ತು ಸಾವಿರ ರೂಪಾಯಿಗಳು. ನಿಮ್ಮಗ ಹೋಗಿರುವುದು ವಿದ್ಯಾಭ್ಯಾಸಕ್ಕಾಗಿಯೆಂದಾಗ, ಹಣವನ್ನು ಈ ರೀತಿ ದುಂದು ವೆಚ್ಚ ಮಾಡೋ ಅವಶ್ಯವಾದರೂ ಏನಿದೆ?

ಭೋಜರಾಜ– ಅವಶ್ಯವಿದ್ದೇ ಅವನು ಹಣ ಖರ್ಚು ಮಾಡ್ತಿರೋದು. ಅವನು ನನ್ಮಗ, ಒಂದಿನಕ್ಕೆ ಐವತ್ತು ಸಾವಿರ ಖರ್ಚು ಮಾಡ್ತಾನೆ. ಇಷ್ಟ ಬಂದ ರೀತಿ ಮಜಾ ಮಾಡ್ತಾನೆ. ಅದನ್ನ ಕೇಳೋಕೆ ನಿನಗೇನು ಅಧಿಕಾರವಿದೆ?

ಧರ್ಮಯ್ಯ– ಇದು ಅಧಿಕಾರವಲ್ಲ ಯಜಮಾನ್ರೆ. ಮಿಲ್ಲಿನ ಸಧ್ಯದ ವ್ಯವಹಾರಗಳ ಬಗ್ಗೆ ನನಗಿರುವ ಜವಾಬ್ದಾರಿ.

ಭೋಜರಾಜ– ಇರ್ಬಹುದು. ಆದ್ರೆ ಈ ನಿನ್ನ ಜವಾಬ್ದಾರಿ ನನ್ನ ಅಧಿಕಾರದ ಕೆಳಗಿದೆ ಅನ್ನೋದನ್ನ ಮರಿಬೇಡ. ವನಜಾ ನಿನಗೂ, ಮಿಲ್ಲಿಗೂ ಒಡತಿಯಿರಬಹುದು. ನನಗಲ್ಲ. ಅವಳು ನನ್ನ ತಂಗಿ ಮಗಳು. ತಂದೆ, ತಾಯಿ ಇಬ್ಬರನ್ನೂ ಕಳೆದುಕೊಂಡು ತಬ್ಬಲಿಯಾದ ಅವಳನ್ನು ಹೂವಿನಂತೆ ಜೋಪಾನ ಮಾಡಿಕೊಂಡು ಬಂದವನು ನಾನೆಂದಾಗ ನಿನಗೂ, ಮಿಲ್ಲಿಗೂ ಅಷ್ಟೆ ಅಲ್ಲ ನಿನ್ನೊಡತಿಗೂ ನಾನೇ ಅಧಿಕಾರಿ. ಅವಳಿಡೀ ಸಂಪತ್ತನ್ನೇ ಖರ್ಚು ಮಾಡೋ ಹಕ್ಕು ನನಗಿದೆ. ಇದೇ ಕೊನೆ ನನ್ನ. ನನ್ನ ಮಗನ ಖರ್ಚಿನ ಲೆಕ್ಕವನ್ನು ಪುಸ್ತಕದಲ್ಲಷ್ಟೇ ಬರೆದಿಡುವ ಕೆಲಸ ಮಾಡು. ಅದನ್ನ ಬಿಟ್ಟು ನನ್ಮುಂದೆ ಖರ್ಚಿನ ವಿವರಣೆ ಕೇಳೋ ಮೂರ್ಖತನ ಮಾಡಬೇಡ. "ಬೀಜದಂತೆ ಫಲ, ತಂದೆಯಂತೆ ಮಗ" ನೆನಪಿರ್ಲಿ ಬರ್ತೀನಿ. (ಹೋಗುವಾಗ ನಿಂತು) ಆಂ...., ಧರ್ಮಯ್ಯ, ಟೈಪಿಸ್ಟ್ ಲಿಲ್ಲಿ ಇವತ್ತು ಕೆಲ್ಸಕ್ಕೆ ರಾಜೀನಾಮೆ ಕೊಟ್ಟಿದ್ದಾಳೆ.

ಧರ್ಮಯ್ಯ– (ಆಶ್ಚರ್ಯವಾಗಿ) ಏನಂದ್ರಿ? ಟೈಪಿಸ್ಟ್ ಲಿಲ್ಲಿ ಕೆಲಸಕ್ಕೆ ರಾಜೀನಾಮೆ ಕೊಟ್ಟಿದ್ದಾಳಾ? (ಸಂಶಯ ದೃಷ್ಟಿ) ಕಾರಣ?

ಭೋಜರಾಜ– ವಿನಾಕಾರಣ ಒಟ್ಟು ರಾಜೀನಾಮೆ ಕೊಟ್ಟಿದ್ದಾಳೆ. ಅವಳ ಜಾಗಕ್ಕೆ ಬೇರೆಯವರನ್ನು ನಾನು ಭರ್ತಿ ಮಾಡ್ತೀನಿ. ನೀನು ಮಾತ್ರ ಈ ವಿಷಯದಲ್ಲಿ ತಲೆ ಹಾಕದೆಂಗ ತೆಪ್ಪಗಿದ್ದು ಬಿಡು. ಹುಷಾರಿ, ಇದು ಎಚ್ಚರಿಕೆ, ಮರ್ತೀಯಾ? (ಹೋಗುವನು)

ಧರ್ಮಯ್ಯ– ಎಚ್ಚರಿಕೆ ಮರ್ರೀಯಾ?... ಭೋಜರಾಜ, ನೀನಾಡಿದ ಮಾತು ಮರೆತರೂ, ಮಾಡಿದ ಕೃತ್ಯ ನನ್ನ ಹೃದಯದಲ್ಲಿ ಲಾವಾರಸವಾಗಿ ಹರಿಯುತ್ತಿದೆ ಅಂದಾಗ, ನಿನ್ನನ್ನು ಜೀವಂತ ಸಮಾಧಿ ಮಾಡಬೇಕೆಂದಿರುವ ನನ್ನರಿವೆಗೆ ಮರೆವಾಗಲು ಅದೆಂತು ಸಾಧ್ಯ ಭೋಜರಾಜ ? ತಂದೆ–ಮಗ ಕೂಡಿಕೊಂಡು ನನ್ನ ಮಗಳ ಶೀಲಗೆಡಿಸಿ, ಸಾಯಿಸಿ, ಇತಿಹಾಸ ಪುಟದಲ್ಲಿ ವಿಚಿತ್ರ ಚಿತ್ರ ಮೂಡಿಸಿರುವ ನಿಮ್ಮ ಬಿಸಿ ಗುಂಡಿಗೆಯ ರಕ್ತ ಚಿಮ್ಮಿಸುವುದನ್ನು ನಾನೆಂತು ಮರೆಯಲಿ ? ನನ್ನ ಮಗಳು ನಿಮ್ಮಿಬ್ಬರ ಹೆಸರು ಸೂಚಿಸಿ, ಪತ್ರ ಬರೆದಿಟ್ಟು, ನೇಣು ಹಾಕಿಕೊಂಡು ಸತ್ತ ಅಂದಿನ ದೃಶ್ಯ, ನನ್ನ ಕಣ್ಣುಗಳಲ್ಲಿ ಇಂದಿಗೂ ಜ್ವಾಲಾಮುಖಿಯಾಗಿ ಹೊಗೆಯಾಡುತ್ತಿದೆ. ಆದರೂ ಹೊಟ್ಟೆಯ ಕಿಚ್ಚಿಗೆ ತಣ್ಣೀರು ಸುರುವಿಕೊಂಡು, ಸಮಯಕ್ಕಾಗಿ, ಸಂದರ್ಭಕ್ಕಾಗಿ ಕಾಯ್ತು ತ್ತಿದ್ದೇನೆ, ತತ್ತರಿಸುತ್ತಿದ್ದೇನೆ.

(ಲಿಲ್ಲಿ ಬರುವಳು)

ಲಿಲ್ಲಿ– ನಮಸ್ಕಾರ ಸಾರ್.

ಧರ್ಮಯ್ಯ– ನಮಸ್ಕಾರ. ಮತ್ತೇನಮ್ಮ ಲಿಲ್ಲಿ, ನೀನು ಕೆಲಸಕ್ಕೆ ರಾಜೀನಾಮೆ ಕೊಟ್ಟಿರುವೆಯಂತೆ ನಿಜವೇ ?

ಲಿಲ್ಲಿ– ನಿಜ ಸಾರ್.

ಧರ್ಮಯ್ಯ– ಕಾರಣ ?

ಲಿಲ್ಲಿ– ಹೇಳಿದ್ರೆ ನೀವು ನಂಬ್ತೀರೋ ಇಲ್ವೊ ? ಯಾಕಂದ್ರೆ ಜಗತ್ತಿಗೇ ದೇವರಾದವನು, ನನಗೆ ದೆವ್ವಾಗಿ ಕಾಡ್ತಾನೆ ಅಂದ್ರೆ ಯಾರು ನಂಬ್ತಾರೆ ?

ಧರ್ಮಯ್ಯ– ವಿಷಯಾನ ಬಿಡಿಸಿ ಹೇಳಮ್ಮ.

ಲಿಲ್ಲಿ– ಆಫೀಸಿನ ಕೆಲ್ಸ ಮುಗ್ಸಿ, ಮನೆಗೆ ಹೋಗಾಕ ಅಣಿಯಾಗಿದ್ದೆ. ಅಷ್ಟೊತ್ತಿಗೆ ಅಲ್ಲಿಗೆ ಬಂದ ಭೋಜರಾಜರು ನೋಡಮ್ಮಾ, ಮುಖ್ಯವಾದ ವ್ಯವಹಾರಕ್ಕೆ ಸಂಬಂಧಪಟ್ಟ ಪತ್ರಗಳಿವು. ಸಧ್ಯ ಟೈಪ್ ಮಾಡಿಟ್ಟೇ ಮನೆಗೋಗಂತ, ನನ್ನ ಟೇಬಲ್ ಮೇಲೆ ಪತ್ರ ಇಟ್ಟು ಹೊರಗೋದ್ರು. ನನಗದು

ಅನಿವಾರ್ಯವಾಗಿ ಟೈಪ್ ಮಾಡಾಕ ಕುಂತಿದ್ದೆ. ಸೊಲ್ಪೊತ್ತಿಗೆ ಕುಡುದು, ಜೋಲಿ ಹೊಡಿತ ಬಂದ ಭೋಜರಾಜರು, ಹಣದಾಸೆ ತೋರ್ಸಿ, ನನ್ನ ಶೀಲ ಹಾಳು ಮಾಡಾಕ ಬಂದ್ರು.

ಧರ್ಮಯ್ಯ– ಏನಮ್ಮಾ...!? ಭೋಜರಾಜ ನಿನ್ನ ಶೀಲ ಹಾಳು ಮಾಡಾಕ ಬಂದಿದ್ನಾ?

ಲಿಲ್ಲಿ– ಹೌದು ಸಾರ್. ಆ ಸಮಯಕ್ಕೆ ಸರಿಯಾಗಿ ಡ್ರೈವರ್ ರಂಗ ಬರದಿದ್ರೆ, ನನ್ನ ಜೀವನಾನೇ ಹಾಳು ಮಾಡಿಬಿಡ್ತಿದ್ದ ಆ ಚಂಡಾಲ. ಸಾರ್, ಖರೆ ಹೇಳ್ಬೇಕಂದ್ರೆ, ಆ ಭೋಜರಾಜ ಮನುಷ್ಯನಲ್ಲ ಪಶು. ಯಜಮಾನ್ರೆ ಪಶು. ಇಂಥಾ ನೀಚ ವನಜಮ್ಮನವರ ನಂಬಿಗೆಯ ದೇವರಾಗಿದ್ದಾನೆ.

ಧರ್ಮಯ್ಯ– ವನಜಮ್ಮನವರ ಈ ನಂಬಿಗಿಯ ದೇವರು, ಕಳ್ಳ ದೇವರು. ಅಂತ ನನಗೆಂದೋ ಗೊತ್ತಾಗಿದೆಯಮ್ಮಾ. ಆದರೂ, ಇವನ ಕರುಳು ಬಗಿಯುವುದಕ್ಕಾಗಿ ನರಸಿಂಹನವತಾರವೆತ್ತಲು ಇದುವರೆಗೆ ನನಗೆ ಸಾಧ್ಯವಾಗಿಲ್ಲ. ಆಗುತ್ತೋ ಇಲ್ಲವೋ ಖಾತ್ರಿಯೂ ಇಲ್ಲ. ಯಾಕಂದ್ರೆ, ಹೊಸ್ತಿಲ ಮೇಲಿಟ್ಟು ಹೊಟ್ಟೆ ಬಗಿದರೆ ಬಗ್ಗುವ ದೇಹವಲ್ಲದು. ಕುಸ್ತಿಯ ಮೋಹ ತುಂಬಿಸಿ, ಗುದ್ದಿ ಸಿಗಿದು ಹಾಕಿದಾಗ ಮಾತ್ರ ಮಣ್ಣು ಕಾಣುವ ದೇಹವದು, ಅಂದಾಗ ಶಕ್ತಿಯ ಬದಲು ಯುಕ್ತಿಯ ಬಲೆ ಬೀಸುವುದೇ ಲೇಸು. ಆ ವಿಚಾರ ನನಗಿರಲಿ. ಈಗ ರಾಜೀನಾಮೆ ಕೊಟ್ಟಿರುವಿಯಲ್ಲಾ ಮುಂದೆ...

ಲಿಲ್ಲಿ– ನನ್ನ ಜೀವನದ ಗತಿ ಏನೂಂತ ವಿಚಾರ ಮಾಡ್ತಿರೇನು? ಅದಕ್ಯಾಕ ವಿಚಾರ ಮಾಡ್ತೀರಿ ಸಾರ್? ಕಿರಣ್ ಬಿಸ್ಕಿಟ್ ಫ್ಯಾಕ್ಟರಿಯಲ್ಲಿ ಒಂದ್ಕೆಲ್ಸ ಖಾಲಿಯಿದೆಯಂತೆ. ಅರ್ಜಿ ಹಾಕಿದ್ದೇನೆ. ದೈವ ಇದ್ರೆ ಸಿಕ್ಕೇ ಸಿಗುತ್ತೆ.

ಧರ್ಮಯ್ಯ– ಹಾಗಾದ್ರೆ ಚಿಂತ ತಪ್ತು ಬಿಡಮ್ಮಾ. ಆ ಫ್ಯಾಕ್ಟರಿ [illegible] ನನಗ ತುಂಬಾ ಆತ್ಮೀಯರು. ನಾನವರನ್ನು ಭೇಟಿಯಾಗಿ ಆ ಕೆಲಸವ ನಿನಗೇ ಕೊಡಸ್ತೀನಿ. ಮುಖ್ಯವಾಗಿ [illegible] ವನಜಮ್ಮ. [illegible]ರಲ್ಲಿ ಈ ನೀಚನ ದರಬಾರು ಇನ್ನೂ ಎಲ್ಲಿಗೆ ಮುಟ್ಟುತ್ತೋ ಗೊತ್ತಿಲ್ಲ [illegible]

ಇವನ ಮಗ ವಿಕ್ರಂ ಒಬ್ಬವನು ಬಂದ್ರಂತೂ ಮುಗಿದೇ ಹೋಯ್ತು. ಜೋಬಿನಲ್ಲಿದ್ದ ಚಿರತೆನ ಹೊರಗ ಬಿಟ್ಟಂತಾಗುತ್ತದೆ. ಬಾರಮ್ಮ ಬಾ, ಸಧ್ಯ ಅವನಿಗೆ ಹಣ ಕಳಿಸ್ಬೇಕಾಗಿದೆ.

(ಹೋಗುವರು)

## ಎರಡನೆಯ ದೃಶ್ಯ

## ಉದ್ಯಾನವನ

(ವಿಶಾಲ ವಿಕ್ರಂ ಬರುವರು)

ವಿಶಾಲ– ವಿಕ್ರಂ, ಇಷ್ಟವಸರವಾಗಿ ನನ್ನೇಕಿಲ್ಲಿಗೆ ಕರ್ಕೊಂಡ್ಬಂದ್ರಿ?

ವಿಕ್ರಂ– ನಿನಗೊಂದು ಮುಖ್ಯವಾದ ವಿಷಯ ತಿಳಿಸ್ಬೇಕಾಗಿತ್ತು, ಅದಕ್ಕಿಲ್ಲಿಗೆ ಕರ್ಕೊಂಡ್ಬಂದೆ.

ವಿಶಾಲ– ವಿಷಯ... ಸಿಹಿ ತಾನೆ?

ವಿಕ್ರಂ– ಅದು ಸಿಹಿಯೋ, ಕಹಿಯೋ? ನಾ ಬಾಯಿಬಿಟ್ಟಮೇಲೆ ನಿನಗೇ ಗೊತ್ತಾಗುತ್ತೆ. ಆದ್ರೇ...

ವಿಶಾಲ– ಆದ್ರೇನು ವಿಕ್ರಂ?

ವಿಕ್ರಂ– ನೀ ನಿರೀಕ್ಷೆ ಮಾಡದ ವಿಷಯಾನ ಇಂದು ನನ್ನ ಬಾಯಿಂದ ಕೇಳ್ತೀಯಾ. ಅದ್ರಿಂದ ನಿನ್ಮನಸ್ಸು ಅದುರುತ್ತೋ, ಬೆದರುತ್ತೊ ನನಗೊತ್ತಿಲ್ಲ.

ವಿಶಾಲ– ನನಗೆ ಬಾಳ್ಕೊಡೋ ದೇವರ ಬಾಯಿಂದ ನನ್ಮನ ಅದುರ್ಸೋ ಶಬ್ದಗಳು ಬರೋದಿಲ್ಲ ಅನ್ನೋ ನಂಬಿಕೆ ನನಗಿದೆ.

ವಿಕ್ರಂ– ಆ ನಂಬಿಕೆ ನಿನಗಿರಬೇಕಾದ್ದೆ. ಯಾಕಂದ್ರೆ ನೀನು..., ಹೆಣ್ಣು! ಈ ಹೆಣ್ಣು ಹಣ್ಣಾಗಿ ಈ ಪುರುಷನ ಬಾಯಿಗೆ ಈಗಾಗಲೇ ರುಚಿ ಕೊಟ್ಟುಬಿಟ್ಟಿದೆ. ಆದರೆ, ರುಚಿ ನೋಡಿರೋ ಈ ನಾಲಿಗೆಯಿಂದ ಬರೋ ವಿಷಯ [illegible], ಅಳಿಸುವುದೋ ನನಗೂ ತಿಳಿದಿಲ್ಲ ನಿನಗೂ ತಿಳಿದಿಲ್ಲ. ಕಾರಣ, ಆ ಮುಂದಿನ ನಾವು ಅಳಿವಿನ ಅರಿವು ನಮಗಾಗುವುದಕ್ಕಿಂತ

ಮೊದಲು ನಮ್ಮಿಬ್ಬರ ಪ್ರಥಮ ಮಿಲನದಂದು ಮೂಡಿ ಬಂದ ಪ್ರೇಮ ಗೀತೆಯನ್ನು ನನ್ನ ಮನಸ್ಸು ಮತ್ತೊಂದು ಬಯಸುತ್ತಿದೆ. ಆದಕ್ಕೆ ನೀನು ಸಮ್ಮತಿಸುವೆಯೋ? ಇಲ್ಲಾ ನಾ ಹೇಳಬೇಕೆಂದ ವಿಷಯವನ್ನು ಮೊದಲೇ ಕೇಳ ಬಯಸುವೆಯೋ?

ವಿಶಾಲ– ನೀವ್ಹೇಳುವ ವಿಷಯ ನನಗೆಂದೂ ವಿಷವಾಗದೆನ್ನುವ ವಿಶ್ವಾಸ ನನಗಿದೆ. ಕಾರಣ, ಮೊದಲು ನಿಮ್ಮ ಮನದ ಬಯಕೆಯನ್ನು ಮನ್ನಿಸುವುದೇ ನನಗೆ ಶ್ರೇಯಸ್ಸು.

ಪದ

(ಪದ ಮುಗಿದ ನಂತರ)

ವಿಕ್ರಂ– ವಿಶಾಲ...,
ವಿಶಾಲ– ಏನ್ವಿಕ್ರಂ?
ವಿಕ್ರಂ– ಈಗ ನಾ ಹೇಳೋ ವಿಷಯಾನ...?
ವಿಶಾಲ– ಕೇಳುವುದಕ್ಕೆ ಕಾತುರಳಾಗಿದ್ದೇನೆ.
ವಿಕ್ರಂ– ನೋಡು ವಿಶಾಲ, ನಾಳೆ ನಾ..., ಊರಿಗ್ಹೋಗ್ತೀನಿ.
ವಿಶಾಲ- (ಗಾಬರಿ) ಏನು? ನಾಳೆ ಊರಿಗ್ಹೋಗ್ತೀರಾ??
ವಿಕ್ರಂ- ಹೌದು ಪರೀಕ್ಷೆ ಮುಗಿತಲ್ಲ.

ವಿಶಾಲ- ಪರೀಕ್ಷೆಯೇನೋ ಮುಗೀತು. ಆದರೆ ನನ್ನ ನಿರೀಕ್ಷೆಗೆ ಶಿಕ್ಷೆ ಮಾತ್ರ ಕೊಟ್ಹೋಗ್ಬೇಡಿ.

ವಿಕ್ರಂ- ಅಂದ್ರೆ...?

ವಿಶಾಲ– (ಬಳಸಿ) ಅಂದ್ರೆ..., ಈ ಹೆಣ್ಣಿನ ಕೊರಳಿಗೆ ತಾಳಿಕಟ್ಟಿ, ನನ್ನೂ ನಿಮ್ಜೊತೆಯಲ್ಲೇ ಕರೆದುಕೊಂಡು ಹೋಗಿರೆಂದು ಹೇಳಿದೆ.

ವಿಕ್ರಂ ಏನಂದೆ?...ನಾನು..., ನಿನ್ನ ಕೊರಳಿಗೆ..., ತಾಳಿ ಕಟ್ಬೇಕಾ? ಯಾವ ಕಾರಣಕ್ಕಾಗಿ?

ವಿಶಾಲ– ಯಾವ ಕಾರಣಕ್ಕಾಗಿ?! ವಿಕ್ರಂ, ನೀವು..., ಎಚ್ಚರವಾಗಿದ್ದೀರಿ ತಾನೆ? ನನ್ನ ಮನಸ್ಸನ್ನು ಕದ್ದು ಪ್ರೀತಿ, ಪ್ರೇಮಗಳ ಪರಿಚಯ ಮಾಡಿಕೊಟ್ಟು, "ನಿನ್ನನ್ನು ಮದುವೆಯಾಗಿ, ವರದಕ್ಷಿಣೆ ರೋಗ ಪೀಡಿತ ಪುರುಷರ ಪಾಲಿಗೆ ಸೂಜಿಮೊನೆಯಾಗಿ ನಿಲ್ಲುತ್ತೇನೆ" ಅಂತ ಪ್ರತಿಜ್ಞೆ ಮಾಡಿದ ನೀವು..., ಇಂದು ಇಂಥಾ ಪ್ರಶ್ನೆ ಕೇಳುತ್ತಿರುವುದು ತಮಾಷೆಗಾದರೂ ನನಗೆ ನಿರಾಸೆಯಾಗುತ್ತಿದೆ.

ವಿಕ್ರಂ– ನಾ ತಮಾಷೆ ಮಾಡ್ತಾಯಿದೀನಿ ಅಂತ ನೀ ತಪ್ಪು ತಿಳ್ಕೊಂಡಿದಿ ವಿಶಾಲ. ನಿನಗೆ ಮೊದಲೇ ತಿಳಿಸಿಲ್ವೆ? ನಾ ಹೇಳೋ ವಿಷಯದಿಂದ ನಿನ್ನಾಸೆ ಚಿಗುರುತ್ತೋ, ಕಮರಿ ಹೋಗುತ್ತೋ ಗೊತ್ತಿಲ್ಲವೆಂದು? ಆದ್ರೆ ವಿಷಯ ನಿನ್ನ ಪಾಲಿಗೆ ವಿಷವಾಗುವ ಮೊದಲು ಪಾಪ್ಪಮನಸ್ಸು ಕೊನೆಗೊಮ್ಮೆ ಹರುಷಗೊಳ್ಳಲಿಯೆಂದು ನಿನ್ನೊಂದಿಗೆ ಹಾಡಿ, ಕುಣಿದು ನಂತರ ವಿಷಯ ತಿಳಿಸಿದ್ದು ನಿನಗೆ ನಿರಾಸೆಗೊಳಿಸಿದ್ದು.

ವಿಶಾಲ– ಅಂದ್ರೆ...ನಿಮ್ಮಾತಿನ ಅರ್ಥ?

ವಿಕ್ರಂ– ಅರ್ಥ? ನಿನ್ನ ಕೊರಳಿಗೆ ನಾ ತಾಳಿ ಕಟ್ಟಲು ಸಾಧ್ಯವಿಲ್ಲ ಅನ್ನೋದು ಅರ್ಧ ಸತ್ಯವಾದರೆ, ನೀ ನನ್ನ ಹೆಂಡತಿಯಾಗೋದು ಕನಸಿನ ಮಾತೆನ್ನುವುದು ಇನ್ನರ್ಧ ಸತ್ಯ.

ವಿಶಾಲ- ಪ್ಲೀಜ್ ವಿಕ್ರಂ ನಿಮಗೆ ಕೈ ಮುಗಿತಿನಿ ಈ ರೀತಿ ಮುಚ್ಚಿಟ್ಟಂತೆ ಮಾತಾಡಬೇಡಿ. (ದುಃಖ) ನನ್ನ ತಂದೆ ಬಡವನಾದರೂ ಹಿಂದು ಸಂಸ್ಕೃತಿಯ ಬಂಧನದಲ್ಲಿರಿಸಿ ಬೆಳೆಸಿದ್ದಾರೆ. ಮದುವೆಗೆ ಮೊದಲೇ ಮಕ್ಕಳ್ಹೇರುವ ಜಾತಿ ಹೀನೆ ನಾನಾಗುವುದಿಲ್ಲವೆಂದು ಭಾವಿಸಿದ್ದಾರೆ. ಆದರೆ ನಾನು?..., ಅವರ ಆಚಾರ, ವಿಚಾರಕ್ಕೆ ವಿಕಾರ ರೂಪ ಕೊಟ್ಟು ಬಿಟ್ಟಿದ್ದೇನೆ. ನಿಮ್ಮ ಪ್ರೀತಿ ಪ್ರೇಮಗಳ ವಶವಾಗಿ ಒಂದೇ ಒಂದು ಕ್ಷಣ ಮೈ ಮರೆತು ನಿಮ್ಮ ತೋಳ ಬಂಧನದಲ್ಲಿ ಸಿಲುಕಿದ ತಪ್ಪಿಗೆ ಇಂದು ನಿಮ್ಮ ಬೀಜದ ಫಲವನ್ನು ಹೊತ್ತು ನಿಂತಿದೆ ನನ್ನ ಹೊಟ್ಟೆ, ಮದುವೆಗಿಂತ ಮೊದಲೇ ಹೊಟ್ಟೆಯಲ್ಲಿ ನಾಗುವನ-

ಹೊತ್ತೆನಲ್ಲಾ ಅನ್ನುವ ನೋವಿದ್ದರೂ, ಮಗುವಿನ ತಂದೆ ಮರೆಯದೆ ಮಡದಿ ಸ್ಥಾನ ಕೊಡುತ್ತಾರೆ ಅನ್ನುವ ನೆಮ್ಮದಿಯಿಂದ ಬದುಕಿದ್ದೆ. ಈಗ ನೀವೇನಾದರೂ ನನ್ನನ್ನು ಕೈಬಿಟ್ರೆ ಖಂಡಿತ ಜೀವಿಸಿರಲಾರೆ ವಿಕ್ರಂ ಜೀವಿಸಿರಲಾರೆ. (ಅಳು)

ವಿಕ್ರಂ– ನೀನತ್ತು ಸತ್ತರೂ ನನಗಾವ ನಷ್ಟವೂ ಇಲ್ಲ ವಿಶಾಲ. ಯೌವನದಲ್ಲಿ ನಡೆಯೋ ಇಂಥಾ ಘಟನೆಗಳನ್ನು ಹುಡುಗಾಟವೆಂದು ತಿಳಿಯಬೇಕು. ತಕ್ಷಣ ಮರೆತು ಮುಂದಿನ ಜೀವನದಾಟಕ್ಕೆ ಸಿದ್ಧರಾಗಿ ನಿಲ್ಲಬೇಕು. ಅದು ಬುದ್ಧಿವಂತರ ಲಕ್ಷಣ.

ವಿಶಾಲ- (ಕೋಪದಿಂದ) ಏನಂದೇ ಪಾಪಿ? ನಿನ್ನನ್ನು ಮೋಹಿಸಿ, ಮಡದಿಯಾಗಬೇಕೆಂದು ಬಯಸಿ..., ಮೈ ಮನಗಳೆರಡನ್ನೂ ನಿನಗರ್ಪಿಸಿ. ನಿನ್ನ ವಂಶದ ಪಿಂಡ ಹೊತ್ತು ನಿಂತಿರುವ ನಾನು...? ಇದೆಲ್ಲವನ್ನೂ ಹುಡುಗಾಟವೆಂದು ತಿಳಿದುಕೊಳ್ಳಬೇಕೆ? ಥೂ ನರಪಿಶಾಚಿಯೇ..., ಮನುಷ್ಯತ್ವವಿದ್ದ ಪುರುಷನಾಗಿದ್ದರೆ ಈ ರೀತಿ ಮಾತಾಡುತ್ತಿದ್ದೆಯಾ? ನೀನಾಗಿ ನನ್ನನ್ನು ಬೆಂಬತ್ತಿ ಬಂದೆ, ನೀನಾಗಿ ನನ್ನಲ್ಲಿ ಪ್ರೇಮಭಿಕ್ಷೆ ಕೇಳಿದೆ, ನೀನಾಗಿಯೆ ನನಗೆ ಬಾಳು ಕೊಡುತ್ತೇನೆಂದು ದೇವರ ಮುಂದೆ ಪ್ರಮಾಣ ಮಾಡಿದೆ. ನನ್ನನ್ನು ನಂಬಿಸಿ, ಬೇಡವೆಂದರೂ ಒತ್ತಾಯಿಸಿ, ನನ್ನ ಶೀಲವನ್ನು ದೋಚಿದೆ. ಈಗ? ನನ್ನನ್ನು ಪ್ರೀತಿಸಿದ್ದು ಸುಳ್ಳು ಮೋಹಿಸಿದ್ದು ಸುಳ್ಳು, ನಿನ್ನ ವಂಶದ ಕುಡಿ ನನ್ನ ಹೊಟ್ಟೆಯಲ್ಲಿ ಬೆಳೆಯುತ್ತಿರುವುದು ಹುಡುಗಾಟದ ಪಿಂಡವೆಂದು ಮಾತಾಡುತ್ತಿರುವಿಯಲ್ಲಾ ನೀನು ಮನುಷ್ಯನೆ? ನಿನಗೆ ಹೃದಯವಿದೆಯೇ? ನಿನ್ನ ಹುಚ್ಚು ಹುಡುಗಾಟಕ್ಕೆ ನನ್ನ ದೇಹವೇ ನಿನಗೆ ಮೈದಾನವಾಗಬೇಕಿತ್ತೆ? ನಾನು ನಿನಗೇನು ದ್ರೋಹ ಬಗೆದಿದ್ದೇನೆಂದು ನನಗಿಂಥಾ ಶಿಕ್ಷೆ?

ವಿಕ್ರಂ- ನೋ, ನೋ ಖಂಡಿತ ನೀ ನನಗ ದ್ರೋಹ ಬಗೆದಿಲ್ಲ. ಆದರೆ, ನಿನ್ನ ಬದುಕಿಗೆ ನೀನೇ ದ್ರೋಹ ಬಗೆದುಕೊಂಡೆ. ಆ ತಪ್ಪಿಗೆ ನೀನಿಂದು ಶಿಕ್ಷೆ ಅನುಭವಿಸಲೇ ಬೇಕು.

ವಿಶಾಲ- (ಆಶ್ಚರ್ಯವಾಗಿ) ಏನಂದೆ?! ನನ್ನ ಬದುಕಿಗೆ ನಾನೇ ದ್ರೋಹ ಬಗೆದುಕೊಂಡೆನೆ?

ವಿಕ್ರಂ- ಮತ್ತಿನ್ನೇನು? ಹರೆಯದ ಹೆಣ್ಣನ್ನು ನೋಡುವ ಕಣ್ಣುಗಳು ನೂರಾರು, ಬಾಯಿಂದು ಕರೆಯುವ ಬಾಯಿಗಳು ಸಾವಿರಾರು, ಮದುವೆಯಾ ಗುತ್ತೇನೆಂದು ಮಾತುಕೊಟ್ಟು ಮಂಕುಬೂದಿ ಊದುವವರಂತೂ ಹಲವರು. ಆದರೆ, ಅವರು ಮಾತುಕೊಟ್ಟ ಮಾತ್ರಕ್ಕೆ ಮದುವೆಗೆ ಮುಂಚೆ ಮೈ ಅರ್ಪಿ ಸಿದ ತಪ್ಪು ನಿನ್ನದು. ಹೆಣ್ಣಿಗೆ ಶೀಲ ಮುಖ್ಯ. ಬದುಕಿನುದ್ದಕ್ಕೂ ಹೆಣ್ಣು ಕಾಪಾಡಿಕೊಂಡು ಹೋಗುವ ಸಂಪತ್ತೆಂದರೆ ಅದೊಂದೆ. ಆ ಪ್ರಜ್ಞೆ ನಿನಗಿದ್ದಿ ದ್ದರೆ ನೀನೇಕೆ ಕಾಲು ಜಾರುತ್ತಿದ್ದೆ? ಬಿಗಿದಪ್ಪಿದ ಗಂಡಿನ ಹಿಡಿತವನ್ನು ಮತ್ತಷ್ಟು ಬಿಗಿಗೊಳಿಸಲು ಪ್ರಚೋದಿಸಿ, ಅವನ ಸರಸದಾಟ ಯಶಸ್ವಿಯಾಗಿ ಸಾಗಲು ಅನುವು ಮಾಡಿಕೊಟ್ಟಿರಬೇಕಾದರೆ ನಿನಗೂ ಆ ಸುಖ ಹಿತವಾಗಿತ್ತು. ಅವಶ್ಯ ಬೇಕಾಗಿತ್ತು. ಅಂದಾಗ ನಿನ್ನಿಂದ ನನಗೆ ನನ್ನಿಂದ ನಿನಗೆ ಬಯಸಿದ ಸುಖ ಸಿಕ್ಕಿರಬೇಕಾದರೆ ಮದುವೆಗೆ ಒತ್ತಾಯಿಸುವ ಹಕ್ಕು ನಿನಗಿಲ್ಲ.

ವಿಶಾಲ– ಯಾಕಿಲ್ಲ ? ನಿಮ್ಮಿಚ್ಛೆ, ನನ್ನ ಮೆಚ್ಚಿಗೆ ಎರಡೂ ಕೂಡಿ ನಮ್ಮಿಬ್ಬರ ದೈಹಿಕ ಸಂಬಂಧಕ್ಕೆ ಕಾರಣೀಭೂತವಾಗಿದೆ. ಅಂದಾಗ, ನಿಮ್ಮೆದೆ ಹಿಡಿದು ಕೇಳೋ ಹಕ್ಕು ನನಗಿದೆ. ಅಲ್ಲದೆ, ನಾ ನಿಮಗೆ ಸೆರಗಾಸಿದ್ದು ನನ್ನ ಕಾಮದಾಹ ತೀರಿಸಿಕೊಳ್ಳುವದಕ್ಕಲ್ಲಾ, ಮೋಡಿ ತುಂಬಿದ ನಿಮ್ಮ ಪ್ರೀತಿ ಯನ್ನು ಪ್ರತಿಭಟಿಸುವ ಮೊಂಡುತನ ಮಾಡಬಾರದೆಂದು.

ವಿಕ್ರಂ– ಅಯ್ಯೋ ಮರುಳೆ, ಹಿತ ಸಿಕ್ಕಿದ್ದಕ್ಕೆ ಮೊಂಡುತನ ನಿನ್ಹತ್ತಿರ ಬಂದಿಲ್ಲ. ನೋಡು, ಕದ್ದು ಬಸಿರಾಗಿದ್ದನ್ನ ಸದ್ದು ಮಾಡಿ, ಸುಮ್ನೆ ಯಾಕ ಗಂಡಾಂತರ ತಂದ್ಕೊಳ್ತಿಯಾ ? ನಾನಂತೂ ನಿನಗೆ ದಕ್ಕೋದಿಲ್ಲ, ನನ್ನ ಸುದ್ದಿ ಬಿಟ್ಬಿಡು. ನಾ ಬಯಸಿದರೆ ಮೈತುಂಬಾ ಬಂಗಾರ ಹೇರಿಕೊಂಡು ನನ್ನ ಮನೆಯ ಹೊಸ್ತಿಲು ದಾಟಿ ಬರುವ ಹೆಣ್ಣುಗಳು ಸಾಕಷ್ಟಿದ್ದಾರೆ.

ವಿಶಾಲ– (ದುಃಖಾವೇಶದಿಂದ) ಹಾಗಿದ್ದ ನನ್ನನ್ನೇಕೆ ಬಯಸಿದಿರಿ, ನನ್ನ ಬಾಳನ್ನೇಕೆ ಹಾಳ್ಮಾಡಿದ್ರಿ ?

ವಿಕ್ರಂ– ನಾ ಮಾಡಿದ ಛಾಲೇಂಜ್‌ಗಾಗಿ.

ವಿಶಾಲ– ಏನು...? ಛಾಲೇಂಜ್ ಮಾಡಿದ್ರ್ಯಾ ?

ವಿಕ್ರಂ– ಹೌದು. ನಮ್ಮ ಕಾಲೇಜ್‌ನಲ್ಲಿ ಸೌಂದರ್ಯರಾಣಿಯೆಂದು ಕರೆಸಿಕೊಳ್ಳುತ್ತಿದ್ದ ಹೆಣ್ಣು ನೀನು. ನಿನ್ನನ್ನು ಬಯಸಿ ಅಪಮಾನ ಹೊಂದಿದ ನನ್ನ ಗೆಳೆಯರು ನನಗೆ ಛಲ ಹುಟ್ಟಿಸಿ ನಿನ್ಮೇಲೆ ಛೂ ಬಿಟ್ರು. "ಆ ಹೆಣ್ಣಿಗೆ ಕಣ್ಣೊಡೆದು ಮಣ್ಮುಕ್ಕಿಸಿ ಬಂದು ನಮ್ಮೆದುರು ನಿಲ್ಲು" ಎಂದು ನನ್ನ ಗಂಡು ತನಕ್ಕೆ ಸವಾಲ್ಹಾಕಿದರು. ಆ ಕಾರಣಕ್ಕಾಗಿ ನಿನ್ನನ್ನು ಪ್ರೀತಿಸಿ, ಮೋಹಿಸಿ ದೇಹ ಸುಖವನ್ನೂ ಸವಿದೆ. (ತಿರಸ್ಕಾರದಿಂದ) ಇದೆಲ್ಲಾ ನನ್ನ ಮೋಜಿನಾಟಕ್ಕೇ ಹೊರತು, ಮದುವೆ ಮಾಡಿಕೊಳ್ಳುವ ಮೂರ್ಖತನಕ್ಕಲ್ಲ ಮರಿ.

ವಿಶಾಲ– ನಿನ್ನ ಜೂಜು, ಮೋಜಿನಾಟದಲ್ಲಿ ನಾನು ಕಳೆದುಕೊಂಡಿರುವ ಶೀಲಕ್ಕೆ ನೀನೇ ಹೊಣೆಗಾರ.

ವಿಕ್ರಂ– ಅದನ್ನ ಕನಸಲ್ಲೂ ಭಾವಿಸಬೇಡ. ನಾನೊಬ್ಬ ಪ್ರಯಾಣಿಕ. ಕಂಡ ಬಸ್ಸಿಗೆ ಕೈ ತೋರಿಸ್ತೀನಿ, ನಿಂತ ಬಸ್ಸನ್ನು ಹತ್ತಿ ಮುಂದೆ ಸಾಗ್ತೀನಿ, ನಾನ್ಹೋಗೋ ದಾರಿ ಬಿಟ್ಟು ಬೇರೆ ದಾರಿ ಹಿಡಿದಾಗ ಇಳಿತೇನಿ, ಮತ್ತೊಂದು ಬಸ್ಸಿಗಾಗಿ ಕಾಯ್ತೇನಿ. ಇದು ನನ್ನ ಪ್ರಿನ್ಸಿಪಲ್ ಏನಂತಿಯಾ ?

ವಿಶಾಲ– ಅಯ್ಯೋ ಪಾಪಿ. ನನ್ನನ್ನು ಪ್ರಯಾಣಿಕರನ್ನು ಸಾಗಿಸುವ ಬಸ್ಸಿಗ್ಹೋಲಿಸಿ ಮಾತಾಡ್ತಿಯಾ ?

ವಿಕ್ರಂ– ಅರೆ... ಆ..., ಬಸ್ಸು ಅಂದ್ರೆ ನೀನು ಎಕ್ಸ್‌ಪ್ರೆಸ್ ಅಲ್ಲ. ಆರ್ಡಿನರಿ ಬಸ್ಸು. ಈ ಬಸ್ಸು ಯಾರೆಲ್ಲೇ ಕೈ ತೋರ್ಸಿದ್ರೂ ನಿಂತು ಮುಂದ್ಹೋಗುತ್ತದೆ. ಆದರೆ ಎಕ್ಸ್‌ಪ್ರೆಸ್ ಹಾಗಲ್ಲ. ತಾನೆಲ್ಲಿಂದ ಹೊರಟು, ಎಲ್ಲಿ ನಿಲ್ಲಬೇಕೆನ್ನುವುದನ್ನು ನಿಗದಿ ಪಡಿಸಿಕೊಂಡೇ ಹೊರಡುತ್ತದೆ. ಆ ರೀತಿ



ನೀನಾಗಲಿಲ್ಲ. ಕೈ ಮಾಡಿದಲ್ಲಿ ನಿಂತು, ಹತ್ತಿಸಿಕೊಂಡು ಹೋಗುವ ಆರ್ಡಿನರಿ ಬಸ್ಸಾದೆ.

ವಿಶಾಲ– ಬಾಯಿ ಬಿಗಿ ಹಿಡಿದು ಮಾತಾಡು ನೀಚ. ಪ್ರೀತಿಸುವವರೆಲ್ಲ ಹೆಣ್ಣಿನ ಪಾಲಿಗೆ ಪ್ರಯಾಣಿಕರಾಗಿದ್ದರೆ, ಹಿಂದೂ ಧರ್ಮದಲ್ಲಿ "ಗರತಿ" ಅನ್ನುವ ಶಬ್ದವೇ ಇರುತ್ತಿರಲಿಲ್ಲ. ಮಡದಿಯಾಗಬೇಕಾದವಳು ಮೈಮರೆತು ಅಪ್ಪಿಕೊಂಡರೆ, ನಿನ್ನ ದೃಷ್ಟಿಯಲ್ಲಿ ಆರ್ಡಿನರಿ ಬಸ್ಸಾಗುತ್ತಾಳಲ್ಲವೆ ? ಹಾಗಾದರೆ, ನಿನಗೆ ಜನ್ಮ ಕೊಟ್ಟವಳೂ ಆರ್ಡಿನರಿ ಬಸ್ಸೇ ಇರಬೇಕಲ್ಲ ?

ವಿಕ್ರಂ– ಏನಂದೇ...?

ವಿಶಾಲ– ಹಾಂ... ಶಾಂತವಾಗಿ ನೀನೇ ವಿಚಾರ ಮಾಡಿನೋಡು. ನಿಮ್ಮಾಯಿ ಒಂದ್ವೇಳೆ ಎಕ್ಸ್‌ಪ್ರೆಸ್ ಬಸ್ಸಾಗಿದ್ರೆ, ನಿನ್ನ ತಂದೆಗೆ ಹತ್ತಲು ಸಾಧ್ಯವಾಗುತ್ತಿದ್ದಿಲ್ಲ: ನೀನು ಈ ಭೂಮಿಯ ಬೆಳಕನ್ನೂ ಕಾಣುತ್ತಿದ್ದಿಲ್ಲ. ಅಂದಾಗ, ನಿಮ್ಮಾಯಿ ಕಂಡವರು ಕಂಡಲ್ಲಿ ಕೈ ಮಾಡಿ ಹತ್ತುವ ಆರ್ಡಿನರಿ ಬಸ್ಸೆನ್ನುವುದಕ್ಕೆ ಈ ಒಂದು ನಿದರ್ಶನ ಸಾಕಿಲ್ಲವೆ?

ವಿಕ್ರಂ– ಮುಚ್ಚು ಬಾಯಿ ಹೆಚ್ಚು ಮಾತಾಡಬೇಡ. ಉಚ್ಚರಿಸೋ ನಿನ್ನ ಪ್ರತಿಯೊಂದು ಶಬ್ದಕ್ಕೂ ನಂದೊಂದೇ ಉತ್ತರ ಈ ಜನ್ಮದಲ್ಲಿ ನೀ ನನ್ನ ಹೆಂಡತಿಯಾಗಲಾರೆಯೆಂದು.

ವಿಶಾಲ- ಹಾಗಾದ್ರೆ ನನ್ನೊಟ್ಟೆಯಲ್ಲಿ ಬೆಳೆಯುತ್ತಿರುವ ನಿನ್ನ ವಂಶದ ಕುಡಿಗೆ ಏನೆಂದು ಉತ್ತರಿಸುವಿ?

ವಿಕ್ರಂ- ಅದು ನನ್ನ ವಂಶದ ಕುಡಿಯೆಂದು ಸಾಧಿಸಲು ನಿನ್ನಲ್ಲಿ ಯಾವ ಸಾಕ್ಷಿಯಿದೆ, ಯಾವ ಆಧಾರವಿದೆ? ಅಯ್ಯೋ ಮಂಕುದಿಣ್ಣೆ,... ಇಂದಿನ ಸಮಾಜದಲ್ಲಿ ದುಡ್ಡಿದ್ದವನೇ ದೊಡ್ಡವನು. ಒಂದು ಹೆಣ್ಣಿನ ಅತ್ಯಾಚಾರ ಮಾಡಲಿ, ಒಬ್ಬ ವ್ಯಕ್ತಿಯ ಕೊಲೆ ಮಾಡಲಿ ದುಡ್ಡಿನ ದೊಡ್ಡತನ ಸೆಡ್ಡೊ ನ್ನು ಜಯಿಸಿ ಬಿಡುತ್ತದೆ. ಇಂಥಾ ಆಧುನಿಕ ವೈಜ್ಞಾನಿಕ ಯುಗದಲ್ಲಿ ಹುಟ್ಟಿದ

ನಿನಗೆ ಈ ಸಣ್ಣ ಗರ್ಭ ಕರಗಿಸಿಕೊಳ್ಳಲು ಸಾಧ್ಯವಿಲ್ಲವೇ? ವಿಚಾರ ಮಾಡ ಬೇಡ (ಹಣ ತೆಗೆದು) ಈ ಹಣ ಅವ್ನೋ ಜಾಣ ನಿನ್ನ ಕೈಯಲ್ಲಿದ್ರೆ, ನಿನ್ನ ಸಮಸ್ಯೆ ನಿನಗರಿವಿಲ್ಲದೆ ಖುಲಾಸೆಯಾಗಿಬಿಡುತ್ತದೆ. (ಒಗೆದು) ತಗೋ ಆ ಹಣವನ್ನ. ಇದು ನಿನ್ನಿಂದ ನಾ ಪಡೆದ ಸುಖ ಹಾಗೂ ಆ ಸುಖದ ಶಾಖ ದಿಂದ ಮತ್ತೊಂದು ಮುಖ ರೂಪಗೊಳ್ಳುತ್ತಿರುವುದನ್ನು ಕತ್ತರಿಸಿ ತೆಗೆಯು ದಕ್ಕಾಗಿ ಹಳೆಯದನ್ನು ಮರೆತು ಹೊಸ ಬದುಕಿನ ಕಡೆ ವಿಚಾರ ಹರಿಸು, ಬರ್‍ತೀನಿ ಗಾಡ್ ಬ್ಲೆಸ್ ಯು (ಹೋಗುವನು)

ವಿಶಾಲ- (ಚೀರಿ) ವಿಕ್ರಂ......???!

—ಹಿನ್ನೆಲೆ—

## ಮೂರನೆಯ ದೃಶ್ಯ

### ರಸ್ತೆ

(ಡಾಕ್ಟರ್ ಅರವಿಂದ ಬಂದು)

ಅರವಿಂದ— ದೇವರ ಸೃಷ್ಟಿ ಎಂತ ವಿಚಿತ್ರ! ಮನುಷ್ಯನಿಗೆ ಮತ್ತೆ ಮತ್ತೆ ತನ್ನ ಮಾಯೆಯ ಛಾಯೆಯಿಂದ ಆಸೆಗಳ ಮಿತಿಯನ್ನು ತಪ್ಪಿಸಿ ಅತಿಯಾಗು ವಂತೆ ಮಾಡುತ್ತಲೇ ಇರುತ್ತಾನೆ. ಅದಕ್ಕೆ ಉದಾಹರಣೆ ನಾನೇ. ವೃತ್ತಿಯಲ್ಲಿ ಡಾಕ್ಟ್ರಾದ ನನಗೆ ಕುಳಿತುಂಡರೂ ಕರಗದಷ್ಟು ಧನಕನಕವಿದ್ದರೂ. ಆ ಮಿಲ್ಲಿನ ಒಡತಿ ವನಜಾಳ ಆಸ್ತಿಗೆ ಅಧಿಕಾರಿಯಾಗಬೇಕೆಂದು ನನ್ನ ಮನ ಬಯಸಿದೆ. ಈಗಾಗಲೇ ನನ್ನ ಪ್ರೇಮ ಪಂಜರದಲ್ಲಿ ಬಂಧಿಯಾಗಿರುವ ವನಜಾ. ವಾರಸು ದಾರರಿಲ್ಲದ ಆಸ್ತಿಯ ಒಡತಿ. ತಾಳಿ ಕಟ್ಟಿದವನ ಕೊರಳಿಗೆ ಹೂಮಾಲೆಯಾಗಿ ಸೇರೊ ಅವಳಾಸ್ತಿಯನ್ನು ಆಸೆ ಪಡದವರಾರು? ದಿನಕ್ಕೊಂದು ಹೆಣ್ಣಿನ ಜೊತೆಗೆ ಸರಸವಾಡುವ ನನಗೆ ಈಗ ಹೆಣ್ಣಿನ ಜೊತೆಗೆ ಹೊನ್ನಿನ ಕವಚವೂ ದಕ್ಕುವ ಸುಯೋಗ ಒದಗಿ ಬಂದಿದೆ. ಡೆಲ್ಲಿಗ್ಹೋಗಿರೋ ವನಜಾ ಊರಿಗೆ ಮರಳಿ ಬಂದ ತಕ್ಷಣ ಆದಷ್ಟು ಬೇಗ ಮದುವೆಯಾಗಲು ಒತ್ತಾಯಿಸಿ, ನನ್ನ

ಛಲ ಸಾಧಿಸಿಕೊಳ್ಳುತ್ತೇನೆ. ಆದರೆ ಸಧ್ಯದ ನನ್ನ ಕಾಮದಾಹ ತಣಿಸಲು ಯಾವ ಹೆಣ್ಣನ್ನು ಹಾರಿಸಿಕೊಂಡು ಬಂದಿದ್ದಾನೋ ಆ ಕಂಪೌಂಡು ಜಗ್ಗು, ನೋಡ್ಬೇಕು. (ಭೋಜರಾಜ, ಮೂರ್ತಿ ಎದುರಾಗುವರು)

ಭೋಜರಾಜ– ಏನ್ ಡಾಕ್ಟ್ರೆ, ಯಾವ್ದೊ ಗಹನವಾದ ವಿಚಾರ ನಡಿಸಿರಲ್ಲ ರಸ್ತೆಮ್ಯಾಲೆ ?

ಅರವಿಂದ– ಅಂತಾ ಗಹನವಾದ ವಿಚಾರವೇನಿಲ್ಲ ಬನ್ನಿ. ಈಗ ತಾನೆ ಒಂದು ಆಪ್ರೇಷನ್ ಮುಗಿಸಿ ಬಂದೆ. ಆದ್ರೆ ಪೇಷಂಟ್ ಬಹಳ ವೀಕು. ಹೀಗಾಗಿ...

ಮೂರ್ತಿ– ಆ ಪೇಷಂಟ್ ಬದುಕುತ್ತೊ, ಇಲ್ಲೋ ಅಂತ ವಿಚಾರಕ್ಕ ಬಿದ್ದಿರೇನು ?

ಅರವಿಂದ– ಏನಂತ ಮಾತಾಡ್ತಿಯೋ ಮೂರ್ತಿ. ನನ್ನ ಕೈಯಿಂದ ಆಪ್ರೇಷನ್ ಆದವರು ಇದುವರೆಗು ಯಾರೂ ಸತ್ತಿಲ್ಲ.

ಮೂರ್ತಿ– ಸತ್ತಿಲ್ಲ. ಇದ್ದು ಸತ್ತವರ್ಗತಿ ಬದುಕ್ಯಾರ.

ಭೋಜರಾಜ– ಏನ್ಲೆ ಹಂಗ್ಯಾತಾಡಿದ್ರೆ ?

ಮೂರ್ತಿ– ಇದ್ದ ಹೇಳ್ತತ್ತ ಮಾತಾಡೇನ್ರಿ. ಖರೆ ಹೇಳ್ಬೇಕಂದ್ರ ಇತ್ತೀತ್ಲಾಗಂತು ದವಾಖಾನಿ, ಡಾಕ್ಟ್ರು ಅಂದ್ರ ಸಾಕು ನನಗ ನಡುಗ ಶುರುವಾಗುತ್ತ.

ಅರವಿಂದ– ಯಾಕಪಾ, ದವಾಖಾನಿ ಅಂದ್ರ ನಿನ್ನ ಪಾಲಿಗೆ...?

ಮೂರ್ತಿ– ನರಕ ಲೋಕ.

ಭೋಜರಾಜ– ಡಾಕ್ಟ್ರಂದ್ರ ?

ಮೂರ್ತಿ– ಯಮ... ಯಮ ಇದ್ದಂಗ.

ಅರವಿಂದ– ಅಂದ್ರೇನಪಾ, ಡಾಕ್ಟ್ರೆಲ್ಲಾ ಸೇರಿ ನಿನ್ನ ಜೀವ ತಗಿಯಾಕ ನಿಂತಾರಂತ ತಿಳದಿಯೇನು ?

ಮೂರ್ತಿ– ಎಲ್ಲಾ ಡಾಕ್ಟ್ರಗೂ ಹಂಗಂದ್ರ, ನನ್ನಿಡಿದು ಸಾದ್ಯಾರು. ಕೆಲ-ಕೆಲ ಡಾಕ್ಟ್ರಿಂದ ಇತ್ತೀತ್ಲಾಗಾಗೇವಲ್ರಿ ಆಪ್ರೇಷನ್ ಮರ್ಡರ್ ಪ್ರಕರಣಗಳು. ಇವು ನಮಗ ಭಯೋತ್ಪಾದನೆ ಮಾಡಿಬಿಟ್ಟಾವ. ನಿಮಗೊತ್ತಿಲ್ಲ್ಯಾ ?

ಮನ್ನೆ ಮನ್ನೆರ ಪೇಪರ್ನ್ಯಾಗ ಒಂದು ಪ್ರಕರಣ ಫೋಟೋದ ಸಮೇತ ಬಂದಿತ್ತಲ್ರಿ.

ಭೋಜರಾಜ– ಯಾವ ಪ್ರಕರ್ಣಲೇ ಅದು ?

ಮೂರ್ತಿ– ಒಂದೆಂಟ್ಹತ್ತು ವರ್ಷದ ಸಣ್ಣ ಹುಡುಗಿರ್ಬೇಕ್ರಿ ಪಾಪ. ಎಡಗಡೆ ಚಪ್ಪಿಮ್ಯಾಲ ಕುರು ಆಗೇತಿ. ನಾನಾ ನಮೂನಿ ಔಷಧಿ ಹಾಕಿದ್ರೂ ವಾಸ್ಯಾಗಿಲ್ಲ. ಹೆಪ್ಗಟ್ಟಿ ಗಡ್ಡಿ ಹಂಗ್ನ ಉಳುದು ಬಿಟ್ಟೆತಿ. ಕಡಿಕ ಆ ಹುಡುಗನಪ್ಪ ದವಾಖಾನಿಗೆ ಕರ್ಕೊಂಡ್ಬಂದು ಡಾಕ್ಟ್ರಿಗೆ ತೋರ್ಸಿದ. ಆ ಡಾಕ್ಟ್ರ ನೋಡಿದವನ ಇದನ್ನ ಆಫ್ರೇಷನ್ ಮಾಡೇ ಗಡ್ಡಿ ತಗಿಬೇಕಂತ ಹೇಳಿಬಿಟ್ಟಾನ. ಪಾಪ ಅವನರ ಬಡವ. ಆದ್ರೂ ಮಗನ ಕುರು ವಾಸ್ಯಾದ್ರ ಸಾಕಂತ ಕೂಲಿನಾಲಿ ಮಾಡಿ ಕೂಡ್ಸಿಟ್ಟ ರೊಕ್ಕ ತಂದವನ ಆ ಡಾಕ್ಟ್ರಣಕ್ಕ ಒಡ್ಡಿ ಮಗನ್ನವರ ಕೈಗೊಪ್ಪಿದ, ಆ ಡಾಕ್ಟ್ರಪ್ಪಾ ಆಫ್ರೇಷನ್ನೂ ಮಾಡಿದ.

ಭೋಜರಾಜ– ಕುರ ವಾಸ್ಯಾಗಿರ್ಬೇಕು ?

ಮೂರ್ತಿ– ವಾಸ್ಯಾಗ್ಲಿಲ್ಲ, ಮತ್ತಷ್ಟು ಘಾಸಾತು.

ಭೋಜರಾಜ– ಘಾಸ್ಯಾತು ?! ಯಾಕಲೇ ?

ಮೂರ್ತಿ– ಆ ಹುಡುಗ್ಗ ಕುರ ಆಗಿದ್ದು ಯಾವ ಭಾಗದಾಗ ?

ಭೋಜರಾಜ– ಎಡಗಡೆ ಚಪ್ಪಿಮ್ಯಾಗ.

ಮೂರ್ತಿ– ಆದ್ರೀ, ಡಾಕ್ಟ್ರ ಆಫ್ರೇಷನ್ ಮಾಡಿದ್ದು ಬಲಗಡೆ ಚಪ್ಪಿಮ್ಯಾಗ.

ಅರವಿಂದ– ಅವಿವೇಕಿ. ಕುರ ಆದ ಜಗಾ ಬಿಟ್ಟು ಬೇರೆ ಜಗದಾಗ ಹೆಂಗ ಆಫ್ರೇಷನ್ ಮಾಡ್ತಾರೋ ?

ಮೂರ್ತಿ– ಹೆಂಗ ? ಕಂಠಪೂರ್ತಿ ಕುಡುದ್ಬಂದು ಆಫ್ರೇಷನ್ನಿಗೆ ನಿಂತ. ಎಡಕ್ಕಿದ್ದ ಕುರ ಬಲಕ್ಕ್ಯಾಂಗಾತು, ಪುಣ್ಯಾತ್ಮ ಛಲೋ ಚರ್ಮದ ಎಳ್ಳಿ ಕೊಯ್ದುಬಿಟ್ಟಾನ.

ಅರವಿಂದ– ಅವನ್ಯಾರೋ ಒಬ್ಬ ಅಯೋಗ್ಯ ಹಂಗ್ಮಾಡಿದ ಅಂದ್ರೆ, ಎಲ್ರೂ ಹಂಗ್ನ ಮಾಡ್ತಾರೇನು ?

ಮೂರ್ತಿ– ಎಲ್ಲಾರ ಸುದ್ದಿ ನಾ ಎಲ್ಲಿ ಹೇಳೇನ್ರಿ ? ಇದ್ರಾಗ್ಲೆ ಇಂತಾ ಕುಡುಕ ಡಾಕ್ಟ್ರು, ಈ ಮಕ್ಕಳ ಪರೀಕ್ಷಿಸ್ತಾರೆ ಹೆಣ್ಣುಕಳಿದೆ. ಒಂದ್ಮಾತ್ಹೇಳ್ಬೇಕಂದ್ರ, ರೋಗ ಬಡುಕೊಂಡವರು ದವಾಖಾನಿಗೆ ಹೋದ್ರ. ಮೊದಲು ಡಾಕ್ಟರ್ನ್ನ ಚಕ್ ಮಾಡಿ ಮನುಷ್ಯ ಆರಾಮದಾನಿಲ್ಲೋ ಅನ್ನೋದು ಖಾತ್ರಿ ಮಾಡ್ಕೊಂಡು. ಆಮ್ಯಾಲ ತಾವು ಚಕ್ ಮಾಡಿಸ್ಕೋಬೇಕು. ಇದು ನನ್ನ ಸಣ್ಣ ಸಲಹೆ.

ಅರವಿಂದ– ಅಂತೂ ನಮ್ಮನ್ನ ಯಮನ ಸ್ನೇಹಿತನ್ನ ಮಾಡ್ಬಿಟ್ಟಿಲ್ಲಪ್ಪ

ಮೂರ್ತಿ– ನಾನ್ಯಾಕ್ರಿ ಒಬ್ಬ ಸಂಸ್ಕೃತ ಕವಿ. "ನಮೋ ಎಂಬೆ ಎಲೇ ವೈದ್ಯರಾಜನೆ, ಯಮರಾಜನ ಹಿರಿ ಸೋದರನೇ, ಯಮನು ಹೀರಿದರೆ ಪ್ರಾಣ ಮಾತ್ರವನು. ನೀ ಸೆಳೆಯುವೆ ಕಾಂಚಾಣವನೂ ಅಂತ್ಹೇಳ್ಯಾನ.

ಭೋಜರಾಜ– ಆ ಕವಿ ಹೇಳಿದ, ಈ ಕಪಿ ಒದರಿದ. ಸಾಕು ಸುಮ್ನಿರಲೆ.

ಅರವಿಂದ– ಪರವಾಗಿಲ್ಲ ಬಿಡಿ ಸಾರ್ ನಮ್ಮ ನಡೆ ಹೇಗಿರುತ್ತೋ, ಹೆಸರು ಹಾಗಿರುತ್ತೆ. ಅದಕ್ಕುದಾಹರಣೆ ನೀವೆ. ತಾಲ್ಲೂಕು, ಜಿಲ್ಲಾ ಅಷ್ಟೆ ಯಾಕೆ? ರಾಜ್ಯಮಟ್ಟದಲ್ಲಿ ಸೈತ ನಿಮ್ಮ ವರ್ಚಸ್ಸು ಪ್ರಭಾವ ಬೀರಿದೆ.

ಭೋಜರಾಜ– ಇದೆಲ್ಲಾ ಜನಾನುರಾಗ ಡಾಕ್ಟ್ರೆ. ನಾ ಹುಟ್ಟಿರೋದೆ ಸಮಾಜ ಕಲ್ಯಾಣಕ್ಕಾಗಿ, ಸ್ತ್ರೀ ಕುಲದ ಉದ್ಧಾರಕ್ಕಾಗಿ.

ಮೂರ್ತಿ– ಕಣ್ಣಿಗ್ಬಿದ್ದ ಯಾವ ಹೆಣ್ಣೂ ಸರಳ ಮನಿ ಸೇರಿಲ್ಲ.

ಅರವಿಂದ– ತಾವು ದೊಡ್ಡವರು ತಮ್ಮನುಕಂಪ ಸದಾ ಈ ಬಡವನ್ಮೇಲಿದ್ರೆ ಸಾಕು, ಬರ್ತೀನ್ರಿ. (ಹೋಗುವನು)

ಮೂರ್ತಿ– ಇವನ್ಮಲಿ ಸರಿಯಿದ್ದ್ಹಂಗ ಕಾಣುದಿಲ್ಲ.

ಭೋಜರಾಜ– ಯಾಕಂತಿ?

ಮೂರ್ತಿ– ಹೋಗಿ ಹೋಗಿ ನಿಮ್ಮನುಕಂಪ ಬೇಡಿದ್ನಲ್ಲಾ ಅದಕ್ಕ. ಯಾಕಂದ್ರ, ನಿಮ್ಮನುಕಂಪ ಭೂಕಂಪಿದ್ದ್ಹಂಗ. ಇದೀ ನುಗ್ಗಾ ಗೊತ್ತೇ ಇಲ್ಲ.

ಭೋಜರಾಜ– ನನ್ನನ್ನ ಪೂಜಿಸಿದವರ ಪಾಲಿಗೆ ನನ್ನನುಕಂಪ, ತಂಪು ಕೊಡೋ ಮರ ಇದ್ದ್ಹಂಗಲೆ. ಆದ್ರ, ನನಗೆದುರಾಗಿ ಘರ್ಜಿಸಿದವರ ಪಾಲಿಗೆ

ಅದ್ದ ಅನುಕಂಪ ಭೂಕಂಪವಾಗಿ ಬಿಡುತ್ತದೆ. ಸಧ್ಯ. ಆ ಡ್ರೈವರ್ ರಂಗನ್ನ ನನ್ನ ಭೂಕಂಪಕ್ಕೆ ಬಲಿಪಶು ಮಾಡಬೇಕು ಅಂತೀನಿ...

ಮೂರ್ತಿ– ದಮ್ಮಿಲ್ಲಂತ ಸುಮ್ನ ದೀರಿ.

ಭೋಜರಾಜ– ದಮ್ಮ್ಯಾಕಿಲ್ಲ, ಅವರಪ್ಪನಷ್ಟೈತಿ.

ಮೂರ್ತಿ- ಸ್ವಾಧ್ಯನೇ ಇಲ್ರಿ ಅವರಪ್ಪ ನಿಮಗಿಂತಾನು ಬಾಳಿತ್ತಂತ್ರಿ ದಮ್ಮು. ಕೊನಿಗೆ ಅದ ದಮ್ಮಿನ್ಯಾಗ ಕೆಮ್ಮಿ ಕೆಮ್ಮಿ ಉಸುರು ಸಿಕ್ಕು ಸತ್ನಂತ್ರಿ

ಭೋಜರಾಜ- ಮೂರ್ತಿ, ಸಧ್ಯ ನೀನೀಗ ಯಾವ ದಮ್ಮಿನ ವಿಷಯ ಹೇಳಿದೆಪ?

ಮೂರ್ತಿ- ಅದ ಗೂರ್ಲತ್ತಿದ ದಮ್ರಿ (ಕೆಮ್ಮಿ ತೋರಿಸುವನು)

ಭೋಜರಾಜ– ನನ,ಗನೇ. ನಾ ಹೇಳಿದ್ದು ಆ ದಮ್ಮಲ್ಲ, ತಾಕತ್ತಿನ ದಮು

ಮೂರ್ತಿ- ಯಾಕ ಮಾತಾಡ್ತೀರ್ರಿ? ಆ ರಂಗ್ಯಾನ ಕತಿ ಮುಗುಸ್ತೀನಿ ಮುಗುಸ್ತೀನಂತ ಅಂತೀರೆ ಹೊರ್ತು, ಅರಿವದೊಂದು ಕೂದ್ಲ ಅಲ್ಲಾಡ್ಯಾಕ ಸಾಧ್ಯಾಗಿಲ್ಲ ನಿಮಗ. ನಿಮ್ಮ ಜಾಗದಾಗೇನರ ನಾನಿದ್ದಿದ್ರೆ, ಅವನ್ನ ತಿಗಣಿ ವರದಂಗ ವರದ್ಬಿಡ್ತಿದ್ದೆ.

ಭೋಜರಾಜ– ಆ ಕೆಲ್ಸ ಅಷ್ಟು ಸುಲಭಲ್ಲಲೇ ಮೂರ್ತಿ. ಯಾಕಂದ್ರ. ನಮ್ಮ ವನಜಾಳ ಬಲಗೈ ಈ ಮಗ. ಇವನ ಮಾತು ಅವಳಿಗೆ ವೇದವಾಕ್ಯ

ಮೂರ್ತಿ- ಈ ಮಗಾ ಅವರಿಗೆ ಮಾಟ ಮಾಡ್ಸಿರ್ಬೇಕ್ರಿ. ಯಾಕಂದ್ರ ನಿಂಬಿಹಣ್ಣಿನ ಮಾರ್ಕೆಟ್ಟಿನ್ಯಾಗಿ ಬಾಳಿರ್ತಾನವನು. ಅದರಾಗದ್ರಾಗ, ಅವನ ಮಾರ್ಯ್ಯಾಗ ಒಂದು ನಮೂನಿ ಅಟ್ರ್ಯಾಕ್ಷನ್ ಪವರ್ ಐತ್ರಿ. ಅಲ್ರಿ, ಆ ಟೈಪಿಸ್ಟ್ ಲಿಲ್ಲಿ ನನ್ನೂಡ ಎಷ್ಟು ಚೆಂದ ನಕ್ಕೊಂತ ಮಾತಾಡ್ತಿರ್ತಾಳೆ. ಇವ ನೌನು ಬಂದು ಮಾರಿ ತೋರ್ಸೂದ ತಡ, ನನ್ನ ಕತ್ತಿಗಿಂತ ಕಡಿ _ ಮಾಡ್ತಾಳ, ಅವನ ಬೆನ್ಹತ್ತಾಳ. ಅಲ್ಲಾ ನೀವ ವಿಚಾರ ಮಾಡ್ರಿ· ಯಾಕಂದ್ರ ಮನ್ನೆ ನಿಮಗೂ ಅನುಭವಾಗೇತಿ,



ಭೋಜರಾಜ– ಮೂರ್ತಿ, ಬಾಯ್ಮುಚ್ಕೊಂಡು ಮನಿಗೆ ನಡಿ ಮಗನ. (ಹೋಗುವಾಗ, ಟೆಲಿಗ್ರಾಂ ಹಿಡಿದು ಧರ್ಮಯ್ಯ ಬರುವನು)

ಧರ್ಮಯ್ಯ– ಯಜಮಾನ್ರೆ ನಿಮ್ಮಗ ವಿಕ್ರಂನಿಂದ ಟೆಲಿಗ್ರಾಂ ಬಂದಿದೆ.

ಭೋಜರಾಜ– (ಗಾಬರಿಯಾಗಿ) ಯಾಕೆ...! ಏನಾಗಿದೆಯಂತೆ?

ಧರ್ಮಯ್ಯ– ಗಾಬರಿಯಾಗ್ಬೇಡ್ರಿ ಅವರಿಗೇನೂ ಆಗಿಲ್ಲ. ಪರೀಕ್ಷೆ ಮುಗಿತು, ನಾಳೆ ಬರ್ತೀನಂತ ಟೆಲಿಗ್ರಾಂ ಕೊಟ್ಟಿದ್ದಾರಷ್ಟೆ.

ಭೋಜರಾಜ– ಹೌದ...? ಸರಿ ಬಿಡು ಡೆಲ್ಲಿಯಿಂದ ವನಜಾಳ ವಿಷಯವೇನಾದ್ರೂ ಬಂದಿದೆಯೇನು?

ಧರ್ಮಯ್ಯ– ಇಲ್ರಿ, ಯಾವ ವಿಷಯಾನು ಬಂದಿಲ್ಲ,

ಭೋಜರಾಜ– ನೋಡು, ಅವಳು ಬರೋ ವಿಷಯ ನಿನಗ ತಿಳಿದ ತಕ್ಷಣ, ಬಂದು ನನಗ ತಿಳಿಸ್ಬೇಕು.

ಧರ್ಮಯ್ಯ– ಆಯ್ತು, ಬರ್ತೀನ್ರಿ. (ಹೋಗುವಾಗ)

ಮೂರ್ತಿ– ಅಲ್ಲಾ, ಧರ್ಮಯ್ಯನವರ ಆ ಟೈಪಿಸ್ಟ್ ಲಿಲ್ಲಿ ಬಗ್ಗೆ ಏನರ ವಿಚಾರ ಮಾಡಿರೇನು?

ಧರ್ಮಯ್ಯ– ವಿಚಾರ......!!?

ಲಿಲ್ಲಿ ಧ್ವನಿ– ಹೌದು ಸಾರ್ ಆ ಸಮಯಕ್ಕೆ ಸರಿಯಾಗಿ ಡ್ರೈವರ್ ರಂಗ ಬರದಿದ್ರೆ, ನನ್ನ ಜೀವನಾನೆ ಹಾಳು ಮಾಡ್ಬಿಡ್ತಿದ್ದ ಆ ಚಂಡಾಲ. ಸಾರ್, ಖರೆ ಹೇಳ್ಬೇಕಂದ್ರೆ ಆ ಭೋಜರಾಜ ಮನುಷ್ಯನಲ್ಲ, ಪಶು ಯಜಮಾನ್ರೆ ಪಶು.

ಧರ್ಮಯ್ಯ– (ಆವೇಶದಿಂದ) ಹೌದಮ್ಮಾ ಇವರು ಮನುಷ್ಯರಲ್ಲ, ಪಶುಗಳು.

ಭೋಜರಾಜ– ಯಾರು ಪಶುಗಳು?

ಧರ್ಮಯ್ಯ– ಅಸಹಾಯಕ ಹೆಣ್ಣಿನ ಜೀವನಾನ ಹಾಳ್ಮಾಡಿದವರು. ಸುವಾಸನೆ ಕೊಡೋ ಹೂವೊಂದು ಗಿಡದಲ್ಲಿ ಅರಳಿದ್ರೆ ನೋಡೋರ ಭಾವನೆ

ಹಲವಾರು ತರವಿರುತ್ತೆ. ವಿಚಾರವಾದಿಯೊಬ್ಬ ಆ ಹೂವನ್ನು ಗಿಡದಲ್ಲೇ ನೋಡಿ ಕಣ್ಣುಗಳಿಗೆ ತೃಪ್ತಿ ಪಡಿಸಿದ್ರೆ ಬುದ್ಧಿವಂತನೊಬ್ಬ ಅರಳಿರೋ ಹೂವು ನೆಲಕ್ಕೆ ಬೀಳ್ಬಾರ್ದು, ಅದರ ಸೌಂದರ್ಯ ಸದುಪಯೋಗವಾಗ್ಲಿ ಅಂತ. ದೇವರಡಿಗೋ ಇಲ್ಲಾ ತನ್ನ ಅತಿ ಪ್ರೀತಿಯ (ಹೆಣ್ಣಿನ) ಮುಡಿಗೋ ಸೇರಿಸಿ ಸಂತೋಷಪಡ್ತಾನೆ. ಇಂಥಾ ಗುಣವಿದ್ದವರ ಕಣ್ಣಿಗೆ ಬಿದ್ರಾಗ ಮಾತ್ರ ಆ ಹೂವು ತನ್ನ ಬೆಲೆಯನ್ನು ಉಳಿಸಿಕೊಂಡು, ಅವರ ಪ್ರೀತಿಯ ಒಲೆಯಲ್ಲಿ ನೆಲೆಯಾಗುತ್ತದೆ. ಆದರೆ, ಕುದುರೆಯಂತೆ ಕಾಣುವ ಕತ್ತೆಯನ್ನೇ ಬಳಸಿಕೊಂಡು ಸವಾರಿ ಮಾಡುವ ಕೆಲ ಅಯೋಗ್ಯರ ಹಾವಳಿ ಇವತ್ತಿನ ಸಮಾಜದಲ್ಲಿ ಅತಿಯಾಗಿಬಿಟ್ಟಿದೆ. ಇವ್ರಿಗೆ ಕುದುರೆಯಾದ್ರೇನು, ಕತ್ತೆಯಾದ್ರೇನು ಒಟ್ನಲ್ಲಿ ಸವಾರಿ ಮಾಡ್ಬೇಕನ್ನೋ ಹುಚ್ಚು ತುಂಬಿರುತ್ತದೆ. ಇಂಥಾ ಬುದ್ಧಿಗೇಡಿಗಳ ಕಣ್ಣಿಗೇನಾದ್ರೂ ಆ ಸುಂದರವಾದ ಹೂ ಕಂಡ್ರೆ, ಅದರ ಕಥೆ ಮುಗಿದಂತೆಯೇ ಸರಿ. ಸ್ವಲ್ಪವೂ ಕನಿಕರವಿಲ್ಲದೆ. ಒಂದೊಂದೇ ಪಕಳೆಗಳನ್ನು ಕಿತ್ತು ನೆಲಕ್ಕೆ ಚೆಲ್ಲಿ ಬಿಡ್ತಾರೆ. ಅದರ ಅಂದವನ್ನು ಕಣ್ಣಲ್ಲಿ ಸೆರೆ ಹಿಡಿಯೋ ಬುದ್ಧಿಯಾಗಲೀ, ಸುವಾಸನೆ ಸವಿಯೋ ವಿಚಾರವಾಗಲೀ ಈ ಮೂರ್ಖರಿಗೆ ಬರೋದಿಲ್ಲ. ಇಂಥವರನ್ನು ಬಗ್ಗು ಬಡಿಯಲು ಸಮಯ ಕೂಡಿ ಬರ್ಬೇಕು. ಅಲ್ಲೀವರಿಗೂ ಯಾರಪ್ಪನಿಗೂ ಈ ಮುಂಡೇ ಮಕ್ಳು ಬಗ್ಗೋದಿಲ. ಬರ್ತೀನಿ.

(ಹೋಗುವನು)

ಮೂರ್ತಿ– ಹೊಗ್ಗೊ ಇವನೌನ. ದುಡ್ಕೊಟ್ಟು ಗುದ್ದಿಸಿಕೊಂಡಂಗಾತು ನಮ್ಮ ಬಾಳೇವು. ಮಾರಾಯ ಮಾತಿಗೆ ನಿಂತವನು ನಮಗಸ್ಟೈತ ಮಾತಾಡಾಕ ಗ್ಯಾಪ್ ಕೊಡ್ಲಿಲ್ಲ. ಹಂಗ ಮಾತಾಡಿದ. ಮತ್ತದ್ರಾಗ, "ಯಾರಪ್ಪನ್ಗೂ ಬಗ್ಗಾದಿಲ್ಲ ಮುಂಡೇ ಮಕ್ಳು" ಅನ್ನೋ ಸಸ್ಪೆನ್ಸಿಟ್ಟು, ನಿದ್ದಿಗಣ್ಣಾಗ ಸೈತ ಮುಟ್ಟಿ ನೋಡಿಕೊಂಡಿರ್ಬೇಕು ಅಂತ ಗೂಟನ ಜಡ್ದು ಹೋದ, ಇಷ್ಟೇನು ರಂಗ್ಯಾಗಂದ್ನೋ? ನಿಮಗಂದ್ನೋ?... ನಿಮ್ಮಿಬ್ರನ್ನೂ ಬಿಟ್ಟು ನನಗ ಅಂದ್ನೋದ್ನೋ? ಒಟ್ಟು ತಿಳಿದಂಗಾತಿದು. (ಭೋಜರಾಜನಿಗೆ) ಅಲ್ಲಾ ನೀವು ಗೇನರ ಈ ಸಸ್ಪೆನ್ಸಿನ ಅರ್ಥ ತಿಳಿತೇನು?

ಭೋಜರಾಜ– ಮೂರ್ತಿಣ್ಣಾ ನೀ ನನಗ ಕಾರಕೂನಾಗಿರೋದಷ್ಟು



ವಿಚಾರ ಮಾಡು. ಆದ್ರ ಒಮ್ಮಿಗೆ ನಮ್ಮ ರಹಸ್ಯದ ಮೂಲ ಬೇರಿಗೆ ಕೈ ಹಾಕಾಕ ಹೋಗ್ಬೇಡ. ತಿಳಿತಿಲ್ಲೋ? ನಡಿ ಮನಿಗೆ (ಹೋಗುವನು)

ಮೂರ್ತಿ– ಹುಚ್ಚರ ಸಂತ್ಯಾಗ್ನಿಂತು ಹೊಯ್ಕೊಳ್ಳುವಂಗಾತಿದು. ಆ ಧರ್ಮಯ್ಯ ಒಂದ ನಮೂನಿ ಮಾತಾಡಿ ಸಸ್ಪೆನ್ಸ್ ಗೂಟ ಜಡದಿದ್ದ. ಈಗಿವ ನೊಂದು ನಮೂನಿ ಮಾತಾಡಿ ದೊಡ್ಡ ಗೂಟನ ಜಡ್ದು ಹೋದ. ಇನ್ನು ಮನಿ ಮುಟ್ಟೋದ್ರಾಗ ಯಾರ್ಯಾರು ಏಸೇಸು ಗೂಟ ಬಡಿತಾರೋ ಯಾರಿ ಗ್ಗೊತ್ತು. (ಹೋಗುವಾಗ ನಿಂತು) ಬಂದ್ಲಲ್ಲಾ ನನ್ನ ಕನಸಿನರಾಣಿ ಟೈಪಿಸ್ಟ್ ಲಿಲ್ಲಿ. (ಲಿಲ್ಲಿ ಬರುವಳು) ಬಾ ಹೃದಯೇಶ್ವರಿ, ಎಲ್ಲವೂ ಕುಶಲವೆ?

ಲಿಲ್ಲಿ– ಹಂದಿಗಳಿದ್ದ ಹಾಳೂರಪೆ ಬಿಟು ಬಂದ್ಮೇಲೆ ಕುಶಲವಾಗಿದ್ದೇನೆ ಮುಷ್ಕೇಶ್ವರ.

ಮೂರ್ತಿ– ತಗಾ. ಇಕಿನೂ ನನಗ ಜಡದ್ಲು. ಅಂದ್ರ.... ನಾನು ಹಂದಿ ಜಾತಿಯವನ?

ಲಿಲ್ಲಿ– ಅದಕ್ಕಿಂತ ಕಡಿ, ಆ ಹಂದಿಗೆ ಜೀವಿದ್ರೂ ಬೆಲಿ ಐತಿ, ಸತ್ರೂ ಬೆಲಿ ಐತಿ. ಅದರ್ಮ್ಯಾಂದ ನಿನ್ನ ಗ್ರೇಡ್ ಪೂರಾ ಡೌನ್.

ಮೂರ್ತಿ– ನನ್ನೆದಕ್ಕರ ಹೋಲ್ಸೋ ಪಿಚಾರ್ಯಾತಿ ನಿನಗ?

ಲಿಲ್ಲಿ– ಇನ್ನೆದಕ್ಕ ಹಂದಿ ತಿನ್ನುತ್ತಲ್ಲ...

ಮೂರ್ತಿ– ಸ್ಟಾಪ್, ಮುಂದಿಂದು ನೀಯೇನು ಬಿಡಿಸಿ ಹೇಳ್ಬ್ಯಾಡ. ನಾ ಶ್ಯಾಣ್ಯ ಅದೇನಿ. ತಿಳ್ಕೋತೀನಿ.

ಲಿಲ್ಲಿ– ತಿಳ್ಕೊಂಡಿಲ್ಲೊ, ದಾರಿ ಬಿಡಂಗಾರ

ಮೂರ್ತಿ– ಹೋಗುವಂತಿ ತಡಿ. ಯಾಕಪ್ಪರ ಮಾಡ್ತಿ. ನಿನ್ನ ಸಲುವಾಗಿ ತಲಿ ಕೆಡಿಸಿಕೊಂಡಿರೋ ಈ ಪ್ರಿಯಕರನ ಮುಂದೆ, ನಿನ್ನ ಮಾತಿನ ಮುತ್ತು ಸುರಿಸಿ ಹೋಗಬಾರದೆ ಪ್ರಿಯೆ ?

ಲಿಲ್ಲಿ– ನನ್ನ ಸಲುವಾಗಿ ತಲಿ ಕೆಡಿಸಿಕೊಳ್ಳಾಕ ನಿನಗ್ಯಾರ್ಹೇಳಿದ್ರು.

ಮೂರ್ತಿ– ವಯಸ್ಸು

ಲಿಲ್ಲಿ– ಯಾರಿಗೂ ಇಲ್ಲದ ವಯಸ್ಸು ನಿನಗ ಐತೇನು ?

ಮೂರ್ತಿ– ಮತ್ತೊಬ್ಬರ ವಯಸ್ಸು ತಗೊಂಡು ನಾಯೇನ್ಮಾಡ್ಲಿ

ಸಧ್ಯ ನಾ ವಯಸ್ಸಿಗೆ ಬಂದೇನಿ. ನನ್ನ ವಯಸ್ಸಿನ ರೂಲ್ಸ್ ಪ್ರಕಾರ ಹ್ವಂಟೇನಿ. ತೀರಾ ಒತ್ರಕ್ಕ ಬಂದ ಮನುಷಾ ನಾನು. ಆದ್ರೂ ಕಂಟ್ರೋಲ್ ಕೆಪ್ಯಾಸಿಟಿ ಐತಿ ಅಂತ ಇಲ್ಲೀತನ ತಡಕೊಂಡೀನಿ. ನಿನ್ನ ನೆನಪಾದ್ರ ಸಾಕು, ಹಾಡ್ಹಗಲ ಸೈತ ಕಣ್ಣು ಕಾಣುದಿಲ್ಲ ನನಗ. ಮುನ್ನೆರ ಮುಳ್ಳ ಕಂಟ್ಯಾಗ ಬಿದ್ದು ಮೂರ್‍ರ್ಯಾಸು ಗುದ್ಯಾಡಿ ಹೊರಗ್ಬಂದೀನಿ ಗೊತ್ತೆನು ? ಅದನ್ನ ನೆನಸ್ಕೊಂಡ್ರೆ ಇಲ್ಲೇ ನಿನ್ನ ಗಲ್ಲಕ್ಕೊಂದು ಮುತ್ತು ಕೊಡಬೇಕು ಅನಿಸುತ್ತ.

ಲಿಲ್ಲಿ– ಛಪ್ಪರೆ ಗಂಡ್ಸ. ನನ್ನ ಗಲ್ಲಕ್ಕ ಮುತ್ತು ಕೊಡ್ತಿಯಾ?

ಮೂರ್ತಿ– ಕೊಡಬೇಕಂತ ವಿಚಾರಿಟ್ಟೇನಿ.

ಲಿಲ್ಲಿ– ಆ ದಮ್ಮ್ಯ್ಯತೆನು ? ಇದ್ರ ಬಾರಲೆ. ಅದ್ಹೆಂಗ ಮುತ್ತು ಕೊಡ್ತಿ ನೋಡೇ ಬಿಡ್ತೀನಿ. (ಬಳೆ ಏರಿಸುವಳು)

ಮೂರ್ತಿ– ಆ... ಬಳಿ ಯಾಕೇರಸ್ತಿ ನೀನು ?

ಲಿಲ್ಲಿ– ಮುತ್ತು ಕೊಡಾಕ ಅನುಕೂಲಾಗ್ಲಿ ಅಂತ.

ಮೂರ್ತಿ– ಅಂದ್ರೆ ನಾ ಕೈಯಿಗೆ ಮುತ್ತು ಕೊಡ್ತೀನಂತ ತಿಳದಿ ಯೇನು ?

ಲಿಲ್ಲಿ– ಹಂಗಲ್ಲ ರಾಜಾ. ನೀ ನನಗ ಮುತ್ತು ಕೊಡ್ತಿ ಅಂದಾಗ ನಾನು ನಿನಗ...

ಮೂರ್ತಿ– ಮುತ್ತು ಕೊಡ್ತಿ ಅಂದಂಗಾತು. ಮತ್ಯಾಕ ತಡ. ಬಾ ಹಂಗಾರ ಮುತ್ತಿನ ಮಳೆ ಸುರ್‍ಸೋನ (ಲಿಲ್ಲಿಯನ್ನು ಹಿಡಿಯಲು ಹೋದಾಗ ಕಪಾಳಕ್ಕೆ ಹೊಡೆಯುವಳು) ಯೇನಾತೆ ನಿನಗ. ಮುತ್ತು ಕೊಡು ಅಂತ ಕರೆದು, ಕತ್ತಿಗ್ಹೊಡದಂಗ ಹೊಡಿಶಿಯಲ್ಲ.

ಲಿಲ್ಲಿ– ಮತ್ತೇನರ ಮೈಮುಟ್ಟಾಕ ಬಂದ್ರ, ಹಾದಿಗೆ ಒಡ್ದಂಗ ಬಡೀತಿನಿ. ಏನಂತ ತಿಳದಿ ನನ್ನ ?

ಮೂರ್ತಿ– ಶ್ರೀದೇವಿ ಅಂತ ತಿಳದೇನಿ. ಹಂಗ ನೀನೂ ನನ್ನ ಜಿತೇಂದ್ರ ಅಂತ ತಿಳಿ. ಇಬ್ರೂಕೂಡಿ ಬ್ರೆಕ್ ಡ್ಯಾನ್ಸ್ ಮಾಡಾನ.

ಲಿಲ್ಲಿ– ನೀ ಜಿತೇಂದ್ರಿದ್ದಂಗದಿಯಾ? ಒಮ್ಮೆರ ನಿನ್ನ ಅಪರೂಪದ ಮುಸುಡಿ ನೋಡ್ಕೊಂಡಿಯೇನು?

ಮೂರ್ತಿ— ರಗಡ ಸಲ ನೋಡ್ಕೊಂಡೀನಿ. ಜಿತೇಂದ್ರನ ತದ್ರೂಪನೆ ಐತಿ ನನ್ನ ಫಿಗರ್. ಮತ್ತ ನಿನಗೇನರ ರಾಜ್‌ಕುಮಾರ ಇಲ್ಲಾ ಕಮಲಹಾಸನ್ ಕಂಡಂಗ ಕಾಣ್ತೇವೇನು ?

ಲಿಲ್ಲಿ— ಇಲ್ಲ ನಮ್ಮಪ್ಪನಪ್ಪ ಅಂದ್ರ ನಮ್ಮಜ್ಜನಂಗ ಕಾಣ್ತಿ.

ಮೂರ್ತಿ— ನಿಮ್ಮಜ್ಜನಂಗ?... ಛಳ್ಳ, ನಕಲಿ ಮಾಡ್ತಿಯೇನು? ಪ್ರೀತಿ ಉಕ್ಕಿ ಬಂದಾಗ, ಪ್ರೀತಿ ವಸ್ತುವಿನ ಗತಿ ಇದ ಅನ್ನಾದು ನನಗೊತ್ತು. ಬಾ ಬಾ ಲೈಲಾ ಮಜನೂ ಪಾರ್ಕಿನ್ಯಾಗ ಐಸ್‌ಕ್ರೀಂ ತಿನಕೊಂತ ಮಾತಾಡಾನ.

ಲಿಲ್ಲಿ— ಖಬರ್ದಾರ್. ದೂರ್ನಿಂತು ಮಾತಾಡು. ನಿನಕೂಡ ಐಸ್‌ಕ್ರೀಂ ತಿನಕೊಂತ ಮಾತಾಡಾಕ ನಾನಿನ್ನ ಪ್ರೇಯಸಿಯಲ್ಲ, ನೀ ನನ್ನ ಪ್ರಿಯತಮನೂ ಅಲ್ಲ. ನನ್ನ ನಿನ್ನ ನಡುವೆ ಯಾವ ಸಂಬಂಧನೂ ಇಲ್ಲ. ಆದ್ರೂ, ನಮ್ಮಜ್ಜ ನಂಗ ಕಾಣ್ತೇಯಲ್ಲ ಅಂತ ಮರ್ಯಾದಿ ಕೊಟ್ಟೇನಿ, ಸರಳ ದಾರಿ ಬಿಡು.

ಮೂರ್ತಿ— ಬಿಡದಿಲ್ಲ. ಏನೇ ಮಾಡ್ತಿ? ನನ್ನೀ ಫಿಗರ್ ನೋಡಿ ರಗಡು ಹುಡುಗೇರು ತಲಿ ಕೆಡಿಸಿಕೊಂಡು ಕಂಡ ಕಂಡಲ್ಲಿ ತೆಕ್ಕಿ ಬಡಿಯಾಕ ಬರ್ತಾರ. ಅಂಥಾ ಈ ಪುನಸ್ಥನ ಮಾರಿ ನಿನಗ ನಿಮ್ಮಜ್ಜನಂಗ ಕಾಣುತ್ತ? ಅಲ್ಲ ನೀನ್ಯಾ ಕ್ಹಿಂಗ ಮಾತಾಡ್ತಿಯಂತ ನನಗೊತ್ತೈತಿ, ಆ ನನ್ನ ಮಗಾ ರಂಗ್ಯಾ ನಿನ್ನ ತಲಿ ಕೆಡಿಸಿಬಿಟ್ಟಾನ. ಅದಕ ನೀನವನ ಬೆನ್ಹತ್ತಿ ತಿರುಗ್ತೀದಿ. ನೋಡು, ಅವನು ಬಾಳ ಡೆಂಜರ್ ಮನುಷ್ಯಾ ಅದಾನ. ಹೆಣ್ಣು ಸಿಕ್ರ ಹಣ್ಣು ತಿಂದಂಗ ತಿಂದು ಒಗದು ಬಿಡ್ತಾನ. ಸುಮ್ಮನ ಅವನ ಸಲುವಾಗಿ ತಲಿಕೆಡಿಸಿಕೋ ಬ್ಯಾಡ.

ಲಿಲ್ಲಿ— ನಾ ಕೆಡಿಸಿಕೊಂತೀನಿ.

ಮೂರ್ತಿ— ಬ್ಯಾಡೆ ಲಿಲ್ಲಿ.

ಲಿಲ್ಲಿ— ನನಗ್ಬೇಕೋ ಯಜ್ಜಾ

ಮೂರ್ತಿ— ನಿನ್ನೌನು, ಅಜ್ಜ ಅನಬ್ಯಾಡ, ಜೀತೇಂದ್ರ ರಾಜಾ ಅನು

ಲಿಲ್ಲಿ— (ಬಳೆ, ಸೀರಿ ಏರಿಸುತ್ತಾ) ಬಾ ಹಂಗಾರ, ರಾಜಾ ಮಹಾರಾಜಾ

ಮೂರ್ತಿ– ಬ್ಯಾಡ ನೀ ಬಳಿ ಏರ್ಸ್ಸೂದು, ಸೀರಿ ಏರ್ಸ್ಸೂದು ಮಾಡ್ತಿ ಯಂದಾಗ ನೀನಿಲ್ಲೆ ನಿಂತಿರು, ನಾನು ಮಸಿಗ್ಹೋದವನ ಎಣ್ಣೆ ಹಚ್ಚಿಕೊಂಡು ಹೊಳ್ಳಿ ಬರ್ತೀನಿ. (ಹೋಗುವನು)

ಲಿಲ್ಲಿ– ಬಾರೋ ನನ್ನ ಮನ್ಮಥರಾಜಾ, ನೆನಪಿನ ಕಾಣಿಕೆ ಕೊಟ್ಟು ಕಳಿಸ್ತೀನಿ. ಅಯ್ಯೋ ನೀಚ, ನಿನ್ನ ಯೋಗ್ಯತೆ ನನಗೊತ್ತಿಲ್ಲೇನೋ? ಈ ಊರಿಗೆ ಟೀಚರಾಗಿ ಬಂದಿದ್ದ ನನ್ನ ಗೆಳತಿಗೆ ಮದಿವ್ಯಾಗ್ತಿನಂತ ನಂಬ್ಸಿ, ಶೀಲ ಹಾಳ್ಮಾಡಿ, ಹೊಟ್ಟೀಲಾದಾಗ ಕೈ ಕೊಟ್ಟೆ. ಅಕಿ, ಮಾನಕ್ಕಂಜಿ ಹೊಳಿಗೆ ಬಿದ್ದು ಸತ್ಲು. ಈಗ ನನ್ನ ಬೆನ್ನು ಬಿದ್ದೀದಿ ಅಂದಾಗ. ನಿನಗೊಂದು ಗತಿ ಕಾಣಸದಿದ್ರ ಸತ್ತು ಸ್ವರ್ಗ ಸೇರಿರೊ ನನ್ನ ಗೆಳತಿ ಆತ್ಮಕ್ಕ ಶಾಂತೆರ ಸಿಕ್ಕಿತೇನು? ಹೌದು, ಇವತ್ತು ನನ್ನ ಮನದಿನಿಯನ ದರ್ಶನವೇ ಆಗ್ಲಿಲ್ವಲ್ಲಾ ಮಾತಾಡ್ಸಿದ್ರ ಸಿಡ್ದು ಬೀಳ್ತಾನ. ಅದಕ ನೋಡೆರ ತೃಪ್ತಿ ಪಡಬೇಕಾಗೇತಿ ರಂಗು, ಆಯ್ ಲವ್ ಯು, ಆಯ್ ಲವ್ ಯು ಟು ಮಚ್!!

(ಹೋಗುವಳು, ವಿಶಾಲ ಬರುವಳು)

ವಿಶಾಲ– ಹೆತ್ತವರ ಹೆಸರಿಗೆ ಕಳಂಕದ ಕಳಸವಿಟ್ಟ ಕುಲಹೀನೆ ನಾನು. ನನಗಾದ ಅನ್ಯಾಯವನ್ನು ಕೇಳಿ, ನನ್ನ ತಂದೆ ಎದೆಒಡೆದು ಸತ್ತ. ನಾ ಮಾಡಿದ ಪಾಪ. ನಿರಪರಾಧಿ ನನ್ನ ತಂದೆಗೆ ಶಾಪವಾಯಿತು. ಮದುವೆಗೆ ಮುಂಚೇನೆ ಗರ್ಭ ಹೊತ್ತಿರುವ ನಾನು, ತಂದೆಯ ಸಾವಿನ ನೋವನ್ನು ಸಹಿಸಿಕೊಳ್ಳಲೇ? ಮುಂದಿನ ಭವಿಷ್ಯದ ಬಗ್ಗೆ ಆಲೋಚಿಸಲೇ? ಇಲ್ಲಾ, ಮಾನಕ್ಕಂಜಿ ಆತ್ಮಹತ್ಯೆ ಮಾಡಿಕೊಳ್ಳಲೆ? (ವಿಚಾರಿಸಿ) ಛೇ ಛೇ, ಕಳಂಕದ ಅಪವಾದ ಹೊತ್ತು ಸಾಯುವುದಕ್ಕಿಂತ, ಶೀಲ ಹಾಳು ಮಾಡಿದವನ ಕಾಲು ಹಿಡಿದಾದರೂ ಬಾಳು ಕೊಡೆಂದು ಕೇಳುವುದು ಲೇಸು, ಹೌದು, ಈಗದೇ ನನಗುಳಿದಿರುವ ಮಾರ್ಗ.

(ಹೋಗುವಳು)

## ನಾಲ್ಕನೆಯ ದೃಶ್ಯ

### ವನಜಾಳ ಭವ್ಯ ಬಂಗಲೆ

(ರಂಗ ಹೊರಗಿನಿಂದ ಪ್ರವೇಶ ಮಾಡಿ, ಒಳಗಡೆ ಹೋಗಿ ಬಂದು)

ರಂಗ– ಥತ್ ಹಲ್ಕಾ ನನ್ನ ಮಕ್ಳು, ವನಜಮ್ಮ ಊರಲ್ಲಿಲ್ಲ. ಜವಾಬ್ದಾರಿ ಮನುಷ್ಯಾರು ಇನ್ನೂ ಬೇಜವಾಬ್ದಾರಿ ನಿದ್ದಿ ಮಾಡ್ತಾರ. ಅವ್ವಾವ್ರ ಫೋನ್ ನಂಬರ್ ತಿಳದಿದ್ರ ಇವರ ಹಕೀಕತ್ತರ ತಿಳ್ಯಾಕ ಬರ್ತಿತ್ತು. (ಕುಳಿತು ಫೋನ್ ಕೈಗೆತ್ತಿಕೊಳ್ಳುವನು) ಡಾರ್ಲಿಂಗ್ ಅರಾಮಾದಿಯಾ? ಅಂದಂಗ ಆ ಡಿಸ್ಕೋಶಾಂತಿ, ಅನುರಾಧ, ನಿನ್ನಮ್ಯಾಲೆ ಬಟ್ಟೆ ಅಂಗಡಿಯವರು ಕೇಸ್ ಹಾಕಿದ್ರಂತಲ್ಲ ಏನಾತದು?. ಆ...ಆ... ಹೌದಾ? ಹಂಗಾರೆ, ನಾಳೆ ನೀವು ಮೂವರೂ ನನ್ನಾಫೀಸಿಗೆ ಬರ್ರಿ. ಒಂದು ಗುಡ್ ನ್ಯೂಸ್ ಹೇಳ್ತೀನಿ.

ಭೋಜರಾಜ– (ಒಳಗಿನಿಂದ ನೈಟ್ ಡ್ರೆಸ್ನಲ್ಲಿ ಬಂದು) ರಂಗಾ...

ರಂಗ– ಯಾರವನು? ಸಧ್ಯ ನನಗ ಪುರುಸೊತ್ತಿಲ್ಲ. ಒಂದು ವಾರ ತಡದು ಬರ್ರಿ ಮಗನ. ನಿನಗಲ್ಲ ಡಾರ್ಲಿಂಗ್ ನಾ ಅಂದಿದ್ದು. ಇಲ್ಲ್ಯಾವನೋ ಬೇವರ್ಸಿ ನನ ಮಗ ಬಂದಿದ್ದ ಅವನಿಗಂಡೆ. ಏನು...? ಗುಡ್‌ನ್ಯೂಸಿನ ವಿಷಯಾನ? ಅಂದ್ರ, ಸಧ್ಯ ನಾನೊಂದು ರೆಡಿಮೇಡ್ ಬಟ್ಟೆ ಅಂಗಡಿ ತಗಿಯೋ ವಿಚಾರ ಮಾಡೇನಿ. ಅದರಾಗ ನಿಮ್ಮಕಳತಿ ಡ್ರೆಸ್ ನೈತ ರೆಡಿ ಇಟ್ಟಿರ್ತೀನಿ.

ಭೋಜರಾಜ– ಲೇ ರಂಗಾ...

ರಂಗ– ಸುಮ್ನ ನಿಂದರ್ರಿ ಯಾಕ ಕಾಡ್ತೀರಿ? ಹಲೋ... ಏನಂದಿ? ಅಳತೆ ಕಳಸ್ತೀಯಾ? ಮತ್ಯಾಕ ಅಳತೆ ಕಳಸ್ತೀರಿ ನಿಮ್ಮೆಲ್ಲರ ಅಳತಿನೂ ನನಗ ಪಕ್ಕಾ ಗೊತ್ತೈತಿ. ಸಧ್ಯ ನ್ಯೂ ಟೈಪ್ ಮೂರು ಚಡ್ಡಿ ಕಳಸ್ತೀನಿ ಹಾಕ್ಕೊಂಡು ನೋಡ್ರಿ. ರಿಕ್ ಅಂತ ಕುಂತ್ರ ಹೌದು ಅನ್ರಿ ಮತ್ತೇನು?

ಭೋಜರಾಜ– ಈ ಮಗ ಬಾಳ ದೂರದ ವಿಚಾರದಾಗದಾನ. ಅಪ್ಪಾ ಮಹಾನುಭಾವ ರಂಗಸ್ವಾಮಿ..

ರಂಗ– ಇನ್ನು ಮಾರಿ ಕೆತ್ತ್ಯಾವಂಗ ಬಡಿಸಿಕೊಂತಿ ತಮ್ಮ(ಸುಮ್ನನಿಂದ್ರು) ಹಲೋ ಛಿಛೀ ನಿನಗಲ್ಲ ಪ್ರಿಯೆ. ಇಲ್ಲಿ ನನಗೊಬ್ಬಾಂವ ಶನಿಯಾಗಿ ಬೆನ್ನ ಹತ್ಯಾನ ಅವ್ನಿಗೆ. ಹಲೋ... ಚಡ್ಡಿ ಯಾವ ನಮೂನಿ ಅದಾವಂದೇನು? ಏರ್‌ಕೂಲ್ಡ್ ಚಡ್ಡಿ ಡಾರ್ಲಿಂಗ್ ಎಷ್ಟು ಕುಣುದ್ರೂ ಒಟ್ಟ ಕಾವಾಗದಿಲ್ಲ. ಗಾಳಿ ಧಾರಾಳವಾಗಿ ನುಗ್ಗುತ್ತ.

ಭೋಜರಾಜ– ಭಪ್ಪರೆ ಮಗನೆ ಏರ್‌ಕೂಲ್ಡ್ ಚಡ್ಡಿ, ಗಾಳಿ ಧಾರಾಳವಾಗಿ ನುಗ್ಗುತ್ತಂತ. ಅಂದ್ರ ಸೊಳ್ಳಿ ಪರ್ರಾದಾಗ ಹೊಲಸ್ಯಾನೇನಿ ಚಡ್ಡೀನ? (ಡುಬ್ಬ ಚಪ್ಪರಿಸಿ) ಅವಿವೇಕಿ ಏಳೊ ಮೇಲೆ.

ರಂಗ– ಥೋ ಎಲ್ಲಿಯವನು ಗಂಟು ಬಿದ್ನಪಾ ಅಂತೀನಿ. ಯಾರ್ಲೆ ನೀನು?

ಭೋಜರಾಜ– ನಿಮ್ಮಪ್ಪ.

ರಂಗ– ನಮ್ಮಪ್ಪ ಸತ್ತ್ಯಾನ, ನೀನ್ಯಾರೋ ಬೆಪ್ಪ ? (ತಿರುಗಿ ನೋಡಿ) ನೀ... ನೀವೇನು ?

ಭೋಜರಾಜ– ಮಗನ್ನ, ಜಯಮಾಲಿನಿ ನಿನಗ ಫೋನ್ ಮಾಡಿದ್ಲಾ ? ಡಿಸ್ಕೊಶಾಂತಿ. ಅನುರಾಧಾಗೆ ಏರ್‌ಕೂಲ್ಡ್ ಚಡ್ಡಿ ಹೊಲ್ದು ಕೊಡ್ತಿಯಾ ?

ರಂಗ– ಊನ್ರಿ. ಬೇಕಂದ್ರ ನಿಮಗೂ ಹೊಲ್ದು ಕೊಡ್ತೀನ್ರಿ ಏರ್ ಕಂಡೀಷನ್ ಕಾಚಾನ: ಹೆಂಗೂ ನಿಮ್ಮಳತಿನೂ ನನಗ ಪಕ್ಕಾ ಗೊತ್ತಾಗೇತಿ.

ಭೋಜರಾಜ– ಮುಚ್ಚಾಯಿ. ಎರಡು ದಿನದಾಗ ಬರ್ತೀನಂತ ಊರಿ ಗೋದವನು, ನಾಕದಿನಕ್ಕ ಬಂದಿಯಲ್ಲ, ಸಂಬ್ರೇನು ಪುಗ್ಸೆಟ್ಟಿ ಬರ್ತೇನು ?

ರಂಗ– ನಾ ದೌಡ್ಲ ಹ್ವಂಟಿದ್ರಿ.

ಭೋಜರಾಜ– ಯಾರರ ಸತ್ರೇನು ?

ರಂಗ– ಊನ್ರಿ.

ಭೋಜರಾಜ– ಯಾರ ನಿಮ್ಮಜ್ಜನ ?

ರಂಗ– ಅಲ್ರಿ. ನಮ್ಮೂರ ಗೌಡ್ರ ಮನಿ ಕ್ಯಾಣ.

ಭೋಜರಾಜ– ಗಾಡ್ರೆ ಮನಿ ಕ್ಯಾಣ ಸತ್ರೆ ನಿಂದೇನರೆ ಕೆಲಸ ?

ರಂಗ– ವಿಚಾರಿಲ್ಲಂಗ ಮಾತಾಡ್ತೀರಲ್ಲ ನೀವು. ನಮ್ಮೂರಾಗಿದ್ದುದು ಅದ ಒಂದ ಕ್ಯಾಣ. ಸುತ್ತು ಹಳ್ಳ್ಯಾಗ ಮತ್ತೊಂದಿಲ್ಲ. ಅಂದಾಗ ಆ ಕ್ಯಾಣ ಸತ್ತಿಂವ ಮುಂದ ನಮ್ಮೂರ ಎಮ್ಮಿಗಳ ಗತಿ ಏನಾಗಿರಬ್ಯಾಕ. ನೀವ ವಿಚಾರ ಮಾಡ್ರಿ.

ಭೋಜರಾಜ– ಎಷ್ಟು ದೂರ ವಿಚಾರ ಮಾಡಿಯಲ್ಲಲೇ ಮಗನ ?

ರಂಗ– ಹೌದ್ರಿ. ಮನುಷ್ಯಾರಾದ್ರ ನಮಗಿಂತಾದು ಹರಕ್ಕತ್ತಾಗೇತಂತ ಬಾಯ್ಬಿಟ್ಟು ಹೇಳ್ತಾರ. ಪಾಪ! ಮೂಕ ಪ್ರಾಣಿಗಳು ನಮಗಿಂತ ತ್ರಾಸಾಗೇತಂತ ಹೆಂಗ್ಹೇಳ್ತಾವ್ರಿ

ಭೋಜರಾಜ– ಒಟ್ಟೇಗ ಕ್ಯಾಣನ ವ್ಯವಸ್ಥೆ ಮಾಡೇ ಬಂದಿ ?

ರಂಗ– ಊನ್ರಿ. ಮತ್ತ ನಿಮಗೇನರ ಬೇಕಾಗೇತೇನ್ರಿ ಕ್ಯಾಣ ?

ಭೋಜರಾಜ– ನನಗೆದಕೋಲೆ ?

ರಂಗ– ಅದೂ ಖರೇನ. ನೀವ್ನ ಒಂದ ಕ್ಯಾಣದಂಗದೀರಿ.

ಭೋಜರಾಜ– ಏನಂದೇ... ?

ರಂಗ– ಆ ಟೈಪಿಸ್ಟ್ ಲಲ್ಲಿಗೇನೋ ಮಾಡಾಕ ಹೋಗಿದ್ರೆಲ್ಲಾ ಅಂದೆ.

ಭೋಜರಾಜ– ರಂಗಣ್ಣ, ಈ ತಿಂಗ್ಳು ನೂರು ರೂಪಾಯಿ ಜಾಸ್ತಿ ಹಾಕ್ತೀನಿ ನಿನ್ನ ಸಂಬ್ಳಾನ. ಆದ್ರೀ ವಿಷಯ ಮಾತ್ರ ಎಲ್ಲೂ ಬಾಯ್ಬಿಡ್ಬೇಡ. ಅಂತೂವಿಕ್ಕ ಬಾಯ್ಬಿಟ್ಟೀ, ನಿನ್ನ ಜೀವಂತ ಸುಡಿಸಿ ಬಿಡ್ತೀನಿ.

(ಒಳಗಿನಿಂದ ನೈಟ್ ಡ್ರೆಸ್‌ನಲ್ಲಿ ವಿಕ್ರಂ ಬರುವನು)

ವಿಕ್ರಂ– ಗುಡ್ ಮಾರ್ನಿಂಗ್ ಡ್ಯಾಡಿ!

ಭೋಜರಾಜ– ವೆರಿ ಗುಡ್ ಮಾರ್ನಿಂಗ್ ಮೈ ಸನ್!! ನಿದ್ದಿ ಆರಾಮ ಹತ್ತಿತ್ಲ್ಯ?

ರಂಗ– ಆಗ್ಲೆ ಏನ್ಯಾಕಹುತ್ರಿ? ಇವರೇನು ನಿಮ್ಮಂಗ ವಯಸ್ಸು ಹೋದ ಹಳೆ!

ವಿಕ್ರಂ— ನಮ್ಮ ಡ್ಯಾಡಿಗೇನು ಮಹಾ ವಯಸ್ಸಾಗಿದೆಯೋ? ವ್ಯವಹಾರದ ಒತ್ತಡ ಜಾಸ್ತಿಯಾಗಿ ಹಂಗ ಕಾಣ್ತಾರಷ್ಟೆ. ಇನ್ನೂ ಇಪ್ಪತ್ತು ವರ್ಷ ವಯಸ್ಸಿನ ಹುಡುಗ್ರಿಗೆ ಛಾಲೇಂಜ್ ಮಾಡ್ತಾರೆ, ನಮ್ಮ ಡ್ಯಾಡಿ.

ಭೋಜರಾಜ— ಈ ಮಗನಿಗೇನು ಗೊತ್ತು. ನನ್ನ ದೇಹದಲ್ಲಿನ್ನೂ ಬಿಸಿಯ ರಕ್ತ ಹರದಾಡ್ತಿದೆ ಅಂತ.

ರಂಗ— ಯಾಕ ಗೊತ್ತಿಲ್ರಿ. ಎಲ್ಲಾ ಗೊತ್ತೈತಿ. ಅದಾಳಲ್ಲ ಆ ರಂಡ ಮುಂಡಿ ಬಸಜ್ಜಿ, ನಿಮ ಹರೇವಷ್ಟೈತಿ ಅನ್ನಾದಲ್ಲ ನನ್ಮುಂಥ ಹೇಳ್ತಾಳ.

ಭೋಜರಾಜ— ಅಪ್ಪಾ ಮಹಾನುಭಾವ. ಮೊದಲಿಲ್ಲಿಂದ ದಯ ಮಾಡ್ಸು.

ರಂಗ— ಹೋಕ್ಕಾನಿ ಬಿಡ್ರಿ; ನೀವೆಷ್ಟು ಸಿಟ್ಟಿಗ್ಬರ್ತೀರಿ. (ಹೋಗುವನು)

ಭೋಜರಾಜ— ಬಾ ವಿಕ್ರಂ ಮೊದಲು ಸ್ವಲ್ಪ ಡ್ರಿಂಕ್ಸ್ ಮಾಡೋಣ, ನಂತರ ಮುಂದಿನ ವಿಚಾರ.

ವಿಕ್ರಂ— ಕಮಾನ್ ಡ್ಯಾಡಿ. ನಿಮ್ಮ ಕಂಪನಿ ಇಲ್ದೆ ಬಹಳ ದಿವಸಾಯ್ತು. ಆದ್ರೆ...

ಭೋಜರಾಜ— ಆದ್ರೇನೋ?

ವಿಕ್ರಂ— ವನಜಾ ಊರಲ್ಲಿಲ್ಲ. ಅವಳು ಬಂದ್ರೆ ನಮ್ಮೆಲ್ಲಾ ಚಟಕ್ಕೂ ಕತ್ರಿ ಹಾಕ್ತಾಳೆ ಕಾರಣ, ಇವತ್ತೊಂದಿನಾ

ಭೋಜರಾಜ— ವಿಕ್ರಂ. ನಾನು ನಿಮ್ಮಪ್ಪ. ನಿನ್ನವಶ್ಯಕತೆ ಏನನ್ನೋದು ನನಗೊತ್ತಿದೆ. ಬಾ ಕೂತ್ಕೋ...ವೀಣಾ..., ಕಮಾನ್ ಕ್ವಿಕ್! (ಇಬ್ಬರೂ ಕುಡಿಯುತ್ತಿರುವಾಗ ಡ್ಯಾನ್ಸ್ ನಡೆಯುವುದು, ನಂತರ) ಡಿಯರ್ ಸನ್, ನೀನು ನನ್ಮಗ. ಆದ್ರೂ ಸ್ನೇಹಿತನಿದ್ದಂತೆ. ನನ್ನ ಹತ್ರ ಯಾವ ಸಂಕೋಚನೂ ಇಟ್ಕೊಬೇಡ.

ವಿಕ್ರಂ— ನಾನ್ಯಾಕ ಸಂಕೋಚ ಪಡ್ತೀನಿ ಡ್ಯಾಡಿ? ನೀವೇ ನನಗೆ ಉಪದೇಶ ಮಾಡಿಲ್ವೆ? ನಾವಿಬ್ರೂ ತಂದೆ ಮಗನಾದ್ರೂ, ಮನಸ್ಸಿಗೆ ಹಿತ, ದೇಹಕ್ಕೆ ಸುಖ ಕೊಡೋ ವಸ್ತುವನ್ನು, ಸ್ನೇಹಿತರಂತೆ ಹಂಚಿಕೊಂಡು ಖುಷಿ ಪಡೋಣ

ಅಂತ. ಮಾಡಿದ ಉಪದೇಶದಂತೆ, ಅಂದು ನಾನು ಧರ್ಮಯ್ಯನ ಮಗಳನ್ನು ಬಲತ್ಕಾರ ಮಾಡಿದಾಗ, ನೀವೂ ಒತ್ತಾಯಿಸಿ ಸುಖ ಪಡಲಿಲ್ಲವೆ?

ಭೋಜರಾಜ– ನಿಜ ವಿಕ್ರಂ. ಆ ಹೆಣ್ಣಿನ ಸಹವಾಸ ಅದೆಷ್ಟು ಸುಖ, ಅದೆಷ್ಟು ಹಿತವಿತ್ತು. ಮತ್ತೊಮ್ಮೆ ಅನುಭವಿಸಬೇಕೆನ್ನುವುದ್ರಲ್ಲಿ ಮಾನಕ್ಕಂಜಿ ಪ್ರಾಣ ಬಿಟ್ಟು ಬಿಟ್ಲು ಪಾಪ.

"ವಿಕ್ರಂ– ಆ ವಿಚಾರ ಹೋಗ್ಲಿ ಬಿಡಿ. ಬಹಳ ದಿನದಿಂದ ನಿಮಗೊಂದು ಪ್ರಶ್ನೆ ಕೇಳ್ಬೇಕೂ ಅಂತಿದ್ದೆ. ಇವತ್ತು ಕೇಳ್ತೀನಿ ಉತ್ತರ ಕೊಡ್ತೀರಾ ಡ್ಯಾಡಿ?

ಭೋಜರಾಜ– ಯಾವ ಪ್ರಶ್ನೆ ಕೇಳು ಇವತ್ತೆಲ್ಲಾ ಹೇಳ್ಬಿಡ್ತೀನಿ.

ವಿಕ್ರಂ– ನೀವು ಅತ್ತೆ, ಮಾವನನ್ನು ಕೊಲೆ ಮಾಡಿದ್ದು ಈ ಸಮಸ್ತ ಆಸ್ತಿಯನ್ನು ದಕ್ಕಿಸಿಕೊಳ್ಳುವುದಕ್ಕಲ್ಲವೇ?

ಭೋಜರಾಜ– ಯಸ್ ಮೈ ಸನ್, ಯಸ್!

ವಿಕ್ರಂ– ಆದರೆ, ಈ ಆಸ್ತಿಯೆಲ್ಲ ವನಜಾಳ ಹೆಸರಿಗಿದೆಯಲ್ಲ ಡ್ಯಾಡಿ?

ಭೋಜರಾಜ– ಸರಿಯಾದ ಪ್ರಶ್ನೇನೆ ಕೇಳಿದೆ. ನೋಡು ವಿಕ್ರಂ, ನಾನೇ ಬುದ್ಧಿವಂತ ಅಂದ್ರೆ, ವನಜಾಳ ತಂದೆ ನನಗಿಂತಲೂ ಮಹಾ ಬುದ್ಧಿವಂತ. "ನನ್ನ ಮಗಳು ಮೇಜಾರ್ಟಿಗೆ ಬಂದ ನಂತರ ಈ ಆಸ್ತಿಯನ್ನು ತನ್ನಿಚ್ಛೆ ಬಂದಂತೆ ಬಳಸಬಹುದು. ವಿಧಿವಶಾತ್ ಮೇಜಾರ್ಟಿಗೆ ಬರುವ ಮುಂಚೆ, ಅಥವಾ ಮದುವೆಗಿಂತ ಮುಂಚೇನೆ ಸತ್ತರೆ, ಈ ಆಸ್ತಿಯಲ್ಲಾ ಮಿಲ್ಲಿನ ಕಾರ್ಮಿಕರಿಗೆ ಹಂಚಿ ಹೋಗತಕ್ಕದ್ದು" ಅಂತ ವಿಲ್ ಬರೆದಿಟ್ಟಿದ್ದಾನೆ. ಈ ವಿಚಾರ ತಿಳಿಯದೆ ಅಂದು ವನಜಾಳನ್ನು ಕೊಂದುಬಿಟ್ಟಿದ್ರೆ, ಈ ಬೆಟ್ಟದಂತಾ ಆಸ್ತಿ, ಯಾರ್‍ರ್ದೊ ಸೊತ್ತಾಗಿರ್‍ತಿತ್ತು. ನಾವು ಭಿಕ್ಷೆ ಬೇಡಿ ತಿನ್ಬೇಕಾಗಿರ್‍ತಿತ್ತು. ಕಾರಣ, ಅವಳ ಕೂದಲೆಳೆಗೂ ಕೊಂಕಾಗದಂತೆ, ಇದುವರೆಗೂ ನಾವೇ ಕಾಪಾಡಿಕೊಂಡು ಬಂದಿದ್ದೇನೆ.

ವಿಕ್ರಂ– ಭಲೇ ಡ್ಯಾಡಿ, ನಿಮ್ಮ ಬುದ್ಧಿವಂತಿಕೆಯನ್ನು ಮೆಚ್ಚಬೇಕು.

ಭೋಜರಾಜ– ನನ್ನ ಬುದ್ಧಿವಂತಿಕೆಯನ್ನು ಮೆಚ್ಚುವುದಕ್ಕಿಂತ ಸಧ್ಯ ನಿನ್ನ ಬುದ್ಧಿವಂತಿಕೆಯ ಪ್ರದರ್ಶನವಾಗಬೇಕಾಗಿದೆ.

ವಿಕ್ರಂ– ಅಂದ್ರೆ?

ಭೋಜರಾಜ– ವಿಶಾಲ ಹರಿಯುವ [illegible], ದೀರ್ಘವಾಗಿ ಪ್ರವಾಹನ ಕಡೆಗೆ ಹರಿಯದಂತೆ, ನಿನ್ನ ಮೋಡಿಯು ಪ್ರೀತಿ ತೀರ ಹಿಡಿಯಬೇಕು. ನಿನ್ನ ಕೈಯಿಂದ ತಾಳಿ ಕಟ್ಟಿಸಿಕೊಂಡ್ರೆ ಸಾಕು. ಈ ಸರ್ವ ಸಂಪತ್ತಿಗೆ ನಾವೇ ಅಧಿಪತಿಗಳಾಗ್ತೀವಿ.

ವಿಕ್ರಂ– ಅವಳ ವಿಷಯ ನನಗ್ಬಿಡಿ. ಊರಿಗೊಂದು ಬರ್ಲಿ. ಹೆಚ್ಚು ಕಿತ್ತಿಡುವುದಕ್ಕೂ ನನ್ನಾಜ್ಞೆಗೆ ಎದುರು ಹೋಡ್ಬೇಕು, ಹಾಗ್ಮಾಡ್ತೀನಿ.

ಭೋಜರಾಜ– (ನಗುತ್ತಾ ಭುಜ ತಟ್ಟಿ) ಎಷ್ಟೇ ಆಗಲಿ ನೀನು ನನ್ನ ಮಗನಲ್ಲವೆ?

ವಿಕ್ರಂ– ರಕ್ತದ ಗುಣವೂ ಒಂದೇ ಅಲ್ಲವೇ?

(ಇಬ್ಬರೂ ನಗುತ್ತಿರುವಾಗ ವಿಶಾಲ ಬರುವಳು)

ವಿಶಾಲ– ವಿಕ್ರಂ...

ವಿಕ್ರಂ– ಯಾರು?... ನೀನಾ? ಮತ್ಯಾಕಿಲ್ಲಿಗ್ಬಂದೆ? ಅವತ್ತೇ ನಿನ್ಲೆಕ್ಕ ಚುಕ್ತ ಮಾಡಿ ಬಂದಿದ್ದೇನಲ್ಲ?

ವಿಶಾಲ– ನನಗೆ ತಾಳಿ ಕಟ್ಟುವತನಕ ಲೆಕ್ಕ ಚುಕ್ತವಾಗುವುದಿಲ್ಲ ವಿಕ್ರಂ.

ವಿಕ್ರಂ– ತಾಳಿ ಕಟ್ಟಿಸಿಕೊಳ್ಳುವ ಹುಚ್ಚು ನಿನಗಿನ್ನೂ ಬಿಟ್ಟಿಲ್ಲವೇ?

ವಿಶಾಲ– ಶೀಲ ಕಳೆದುಕೊಂಡ ಹೆಣ್ಣು, ತಾಳಿ ಕಟ್ಟಿಸಿಕೊಳ್ಳಲು ಬಯಸೋದು ಹುಚ್ಚಲ್ಲ ವಿಕ್ರಂ, ಗರತಿಯಾಗಿ ಬಾಳ್ಬೇಕೆನ್ನುವ ಕೆಚ್ಚು.

ವಿಕ್ರಂ– ನಿನ್ನೀ ಹುಚ್ಚು ಕೆಚ್ಚು ನನ್ನನ್ನು ರೊಚ್ಚಿಗೆಬ್ಬಿಸುತ್ತಿದೆ ನೋಡು ಮಾಗಿದ ಹಣ್ಣು ರುಚಿಯಿದೆಯೆಂದು ಅದರ ರಸ ಕೈಗಂಟುವತನಕ ತಿನ್ನುವ ಮೂರ್ಖತನ ಮಾಡುವವನಲ್ಲ ನಾನು. ರುಚಿ ತಿಳಿಯುವುದಕ್ಕೆಷ್ಟು ಬೇಕೋ ಅಷ್ಟ್ಮಾತ್ರ ತಿಂದು ಮಿಕ್ಕಿದ್ದನ್ನ ಬಿಸಾಕಿ ಬಿಡ್ತೀನಿ. ಮತ್ತೆಂದೂ ನಾನದನ್ನು ಚಿಂತಿಸುವುದಿಲ್ಲ. ಇದು ನನ್ನ ಸ್ಪೆಷಾಲಿಟಿ.

ವಿಶಾಲ– ಇದು ನಿಮ್ಮ ಸ್ಪೆಷಾಲಿಟಿ ಇರ್ಬಹುದು. ಆದ್ರೆ, ಬಿದ್ದ ಜಾಗದಲ್ಲಿ ಬಿದ್ದು ಕೊಳೆಯಲು ನಾನು ಮಾರ್ಕೆಟ್‌ನಲ್ಲಿ ಮಾರುವ ಹಣ್ಣಲ್ಲ. ಮೈಮನಸ ಕದ್ದವನ ಮಡದಿಯಾಗಿ ಬಾಳಬೇಕೆಂದು ಬಂದಿರುವ ಮಾನವಂತ ಹೆಣ್ಣು.

ವಿಕ್ರಂ– ಮಾನವಂತ ಹೆಣ್ಣು? (ನಗು) ಮದುವೆಗೆ ಮುಂಚೇನೇ ಮಗು ಹುಟ್ಟಿ ಹೊತ್ತಿರುವ ನೀನು, ಮಾನವಂತ ಹೆಣ್ಣೆ?

ವಿಶಾಲ– ಅದು ನಿನ್ನ ಪ್ರೀತಿಯ ಫಲ.

ವಿಕ್ರಂ– ನೆವ್ಹರ್! ನನ್ನ ಪ್ರೀತಿಯ ಫಲವಲ್ಲಾ, ನಿನ್ನ ಅನೀತಿಯ ಫಲ! ಹುಚ್ಚು ಯೌವನ ಗಂಡಸಿನ ಸಂಪರ್ಕ ಬಯಸ್ತು. ನಿನ್ನ ಹೆಣ್ತನವನ್ನೇ ಮರೆತು ನನಗ ವ್ಯೆ ಅರ್ಪಿಸಿದೆ, ಈ ಪಾಪದ ಫಲ ಪಡೆದೆ. ನಿನ್ನೀ ಪಾಪದ ಫಲಕ್ಕೆ ಕರುಣೆ ತೋರಿ ಕೈಲಾದಷ್ಟು ಸಹಾಯ ಮಾಡ್ತೀನೆ ಹೊರತು, ತಾಳಿ ಕಟ್ಟಿ ಬಾಳು ಕೊಡಲಾರೆ.

ವಿಶಾಲ– ದಯವಿಟ್ಟು ಹಾಗನ್ಬೇಡಿ ವಿಕ್ರಂ. ಮ್ಯೆ ಕದ್ದ ನೀವು ಮಡದಿ ಸ್ಥಾನ ಕೊಡದಿದ್ದರೆ ಖಂಡಿತ ನಾನು ಆತ್ಮಹತ್ಯೆ ಮಾಡಿಕೊಳ್ತೀನಿ.

ಭೋಜರಾಜ– ಮಹಾ ಅನ್ಯಾಯವಿದು. ಮೆಚ್ಚಿದವನನ್ನು ಮದುವೆಯಾಗಲು ಬಂದು, ಆತ್ಮಹತ್ಯೆ ಮಾಡಿಕೊಳ್ಳಲು ನಾನವಕಾಶ ಕೊಡುವುದಿಲ್ಲ.

ವಿಶಾಲ– ನೀವೂ...?

ಭೋಜರಾಜ– ನಿನ್ನ ಪ್ರಿಯಕರನನ್ನು ಈ ಭೂಮಿಗೆ ಪರಿಚಯಿಸಿ ಕೊಟ್ಟವನು. ಅಂದ್ರೆ ಇವನ ತಂದೆ. ಸಧ್ಯ ನಿನ್ನ ಮಾವ.

ವಿಶಾಲ– ಸಾರ್, ನಿಮ್ಮಗನ ಹೆಂಡತಿಯಾಗಿ ಬಾಳೋ ಅವಕಾಶ ಮಾಡಿಕೊಟ್ಟು, ನನಗೆ ನ್ಯಾಯ ದೊರಕಿಸಿಕೊಡಿ, ನಿಮ್ಮ ಕಾಲಿಗೆ ಬೀಳ್ತೀನಿ. (ಕಾಲಿಗೆ ಬೀಳುವಳು. ಭೋಜರಾಜ ಎಬ್ಬಿಸುತ್ತಾ)

ಭೋಜರಾಜ– ಹುಚ್ಚಿ! ಏಳಮ್ಮಾ ಏಳು, ನಾನು ನಿಮ್ಮಾವ. ನಗನ್ಯಾಯವಾದ್ರೆ ಸುಮ್ಮನಿರ್ತೀನೇನಮ್ಮಾ?

ವಿಕ್ರಂ– ಡ್ಯಾಡಿ ನೀವೂ...?!

ಭೋಜರಾಜ– ಮುಚ್ಚು ಬಾಯಿ (ಪಕ್ಕಕ್ಕೆ ಸರಿದು) ಅವಿವೇಕಿ. ಈ ಕೆಂಪು ಗುಲಾಬಿಯಂತ ಹೆಣ್ಣನ್ನು ನನಗೆ ಪರಿಚಯ ಮಾಡಿ ಕೊಡದೆ, ನಿನೊಬ್ಬನೇ ಬಯಕೆ ತೀರಿಸಿಕೊಂಡಿರುವಿಯಲ್ಲಾ. ಬುದ್ಧಿ ಇದೆಯೇನೋ? ಅದೃಷ್ಟವಶಾತ್ ಇವಳು, ತಾನಾಗಿ ಇಲ್ಲಿಗೆ ಜದಿ ದಾ ಳಿಯೇದವಾಗ ಮಾವ ಆ

ಕೊಳ್ಳೋ ನಾನು ಮಾನವೀಯತೆ ತೋರಿಸ್ದಿದ್ರೆ ತಪ್ಪಾಗೋದಿಲ್ವೇನೊ?... ನೋಡಮ್ಮಾ ನನ್ನಿಗ ಮಾಡಿರೋ ತಪ್ಪಿಗೆ ನಾನು ಕ್ಷಮೆ ಕೇಳ್ತೀನಿ.

ವಿಶಾಲ— ಅಂತಾ ದೊಡ್ಮಾತೇಕೆ ಸಾರ್. ನಿಮ್ಮಗ ನನಗ ಬಾಳ ಕೊಟ್ರೆ ಸಾಕು.

ಭೋಜರಾಜ— ಲೋ... ವಿಕ್ರಂ

ವಿಕ್ರಂ— ವಾಟ್ ಡ್ಯಾಡಿ ?

ಭೋಜರಾಜ— ಈ ಹೆಣ್ಣು ನನ್ನ ಸೊಸೆಯಾಗ್ಬೇಕಾದ್ರೆ, ನೀನೇನು ಮಾಡ್ಬೇಕು ಗೊತ್ತೇನು ?

ವಿಕ್ರಂ— ಗೊತ್ತು, ತಾಳಿ ಕಟ್ಟಿ, ಬಾಳು ಕೊಡ್ಬೇಕು.

ಭೋಜರಾಜ— ಗುಡ್! ಹಾಗಾದ್ರೆ ತಾಳಿ ಕಟ್ತೀನಿ, ಬಾಳು ಕೊಡ್ತೀನಿ ಅಂತ ಈ ಹೆಣ್ಣಿಗೆ ಸ್ಪಷ್ಟವಾಗಿ ಹೇಳಪ್ಪ.

ವಿಕ್ರಂ— ವಿಶಾಲ, ನಾನು ನಿನಗ ದ್ರೋಹ ಮಾಡ್ಬಿಟ್ಟೆ, ದಯವಿಟ್ಟು ಕ್ಷಮಿಸು. ಖಂಡಿತ ನಿನ್ನ ಬಯಕೆಯ ಬಾಳು ಕೊಡಲು ನಾನೀಗ ಸಿದ್ಧನಾಗಿದ್ದೇನೆ.

ವಿಶಾಲ— ನೀವ್ಹೇಳ್ತಿರೋದು ಸತ್ಯ ತಾನೆ ?

ಭೋಜರಾಜ— ಈ ಸತ್ಯವಂತನ ಮಗ ಅವನು. ಅಸತ್ಯವಾಡಿದ್ರೆ ನಾನೊಪ್ತಿನಾ ?

ವಿಶಾಲ— ಸಾರ್, ನನಗೆ ನ್ಯಾಯ ದೊರಕಿಸಿ, ಗರತಿತನ ಉಳಿಯುವಂತೆ ಮಾಡಿದ ದೇವರು ನೀವು.

ಭೋಜರಾಜ— ಅಂದಾಂಗ, ನನಗ ಸಾರ್ ಅನ್ನುವದನ್ನು ಬಿಟ್ಟು, ಮಾವ ಅನಬಾರ್ದೇನಮ್ಮಾ ?

ವಿಶಾಲ— ಮಾವ...

ಭೋಜರಾಜ— ಆಹಾ! ಎಷ್ಟು ಹಿತವಾಗಿ ಕರ್ದೆಯಮ್ಮ ಮನಸ್ಸಿಗೆ ಮುತ್ತು ಬಂದಂತಾಯ್ತು. ಆಂ, ಇಲ್ಲಿ ನಡಿಯಮ್ಮಾ. ನೀನು ಬಳಲಿ ಬಂದಿದಿಯಾ. ಒಳಗ್ಹೋಗಿ ಮುಖ ತೊಳ್ಕೊಂಡು ಬಾ. ಇವತ್ತು ಮೂವರೂ

ಕೂಡೇ ಊಟ ಮಾಡಿ. ಆಮ್ಯಾಲ ಮುಂದಿನ ವಿಚಾರ ಮಾತಾಡೋಣ, ಸರಿಯೇನಮ್ಮಾ ?

ವಿಶಾಲ– ಆಗ್ಲಿ ಮಾವಾ (ಒಳಗಡೆ ಹೋಗುವಳು)

ಭೋಜರಾಜ– ಮೈ ಡಿಯರ್ ಸನ್

ವಿಕ್ರಂ– ಡ್ಯಾಡಿ...

ಭೋಜರಾಜ– ಇದು...., ನೀನು ಕಟ್ಟಿದ ಹಣ್ಣಲ್ಲವ ?

ವಿಕ್ರಂ– ಯಸ್ ಡ್ಯಾಡಿ.

ಭೋಜರಾಜ– ಹಣ್ಣು ಸಿಹಿಯೋ, ಕಹಿಯೋ ?

ವಿಕ್ರಂ– ಎರಡೂ ಅಲ್ಲ.

ಭೋಜರಾಜ– ಮತ್ತೆ

ವಿಕ್ರಂ– ಅಮೃತ, ಅಮೃತ ಡ್ಯಾಡಿ.

ಭೋಜರಾಜ– ಹಾಗಾದ್ರೆ...., ನಾನೂ ಸ್ವಲ್ಪ ಅಮೃತ ಕುಡ್ಯೂ ಬರ್ಲೇನು ?

ವಿಕ್ರಂ ವೈ ನಾಟ್ ? ಧಾರಾಳವಾಗಿ ಕುಡುದ್ಬನ್ನಿ. ಅಲ್ಲಿವರಗೂ ನಾನೇ ಅಮೃತ ಕುಡಿತಿರ್ತೀನಿ.

ಭೋಜರಾಜ– ಕುಡಿ, ತೃಪ್ತಿಯಾಗುವಷ್ಟು ಕುಡಿ. ಆದರೆ, ನಾನು ಬರುವತನಕ ಎಚ್ಚರಿಕೆಯಿಂದಿರು. (ಹೋಗುವನು)

ವಿಕ್ರಂ– (ನಗುತ್ತ) ಬಾಳು ಕೇಳಲು ಬಂದ ಹೆಣ್ಣು, ಮತ್ತಷ್ಟು ಧೂಳು ಮುತ್ತಿಸಿಕೊಳ್ತು ತೀರ್ತು. (ಕುಳಿತು ಕುಡಿಯುವಾಗ ಹಿನ್ನೆಲೆ)

ವಿಶಾಲ– (ಒಳಗಿನಿಂದ) ಮಾವ, ಏನೀ ವರ್ತನೆ ? ಬಿಡಿ ನನ್ನ

ಭೋಜರಾಜ– ನನ್ನಾಸೆ ತೀರಿದ್ಮೇಲೆ ಖಂಡಿತ ಬಿಡ್ತೀನಿ.

ವಿಶಾಲ– ಅಮ್ಮಾ... (ಚೀರುವಳು)

(–ಹಿನ್ನೆಲ ಪಟ–)

(ಭೋಜರಾಜ, ವಿಕ್ರಂ ಕುಡಿಯುತ್ತಾ ನಿಂತಾಗ, ಕದಲು ಕೆದರಿದ ವಿಶಾಲ ಒಳಗಿನಿಂದ ಬರುವಳು)

ವಿಕ್ರಂ– ವಿಶಾಲ...., ತಾಳಿಕಟ್ಟು, ತಾಳಿಕಟ್ಟು ಅಂತ ಪೀಡಿಸ್ತಿದ್ದೆಯಲ್ಲ, ಈಗ್ಯಾರಿಗೆ ಪೀಡಿಸ್ತಿಯಾ ? ನನಗೋ, ನನ್ನ ತಂದೆಗೋ ? ಈಗ ನಿನಗ ತಾಳೀನ ನಾ ಕಟ್ಬೇಕೋ ? ನನ್ನ ತಂದೆ ಕಟ್ಬೇಕೊ ?

ಭೋಜರಾಜ– ಪಾಪ! ತಾಳಿ ಕಟ್ಟಿಸಿಕೊಳ್ಳೋ ಕನಸೆಂಗೆ ಬಹಳ ಇದೆ ಇವಳಿಗೆ. ಇಬ್ರೂ ಕೂಡಿ ಎರಡು ತಾಳಿ ಕಟ್ಬೋಣ. ಏನಂತಿಯಾ ?

(ನಗುವರು. ಧರ್ಮಯ್ಯ ಬಂದು ನೋಡಿ ಮರೆಯಾಗುವನು)

ವಿಶಾಲ– ಪಾಪಿಗಳೆ, ನನ್ಬಾಳು ಹಾಳ್ಮಾಡಿ, ನಗತೀರಾ ? ನಗರಿ, ಚನ್ನಾಗಿ ನಗರಿ. ಹಿಂದೂ ಸಂಸ್ಕೃತಿಯಲ್ಲಿ ಹೆಣ್ಣಿಗಿರೋ ಸ್ಥಾನ, ಮಾನ, ಮರ್ಯಾದೆಗಳನ್ನು ಮಣ್ಣಾಲ್ಲಿ ಮುಚ್ಚಿ, ಆ ಹೆಣ್ಣನ್ನು ಮನ ಬಂದಂತೆ ಬಳಸಿದ ಭಂಡರೇ, ಘನಕಾರ್ಯ ಸಾಧಿಸಿದವರಂತೆ ಕೇಕೆ ಹಾಕಿ ನಗರಿ. ಅನಾದಿ ಕಾಲ ದಿಂದ ದೇವಾನು ದೇವತೆಗಳು, ಋಷಿ ಮಹಾಋಷಿಗಳು "ದೇವತೆ" ಎಂದು ಹಾಡಿ-ಹರಸಿದ ಹೆಣ್ಣನ್ನು ಪಶುವಿನಂತೆ ಹಂಚಿ ತಿಂದ, ಮೂರೂ ಬಿಟ್ಟವರೆ. ಅಬಲೆ ಹೆಣ್ಣಿನ ಮಿಂಡರು ನಾವೆಂದು ಗುಂಡಿಗೆ ಬಡಿ-ಬಡಿದುಕೊಂಡು ನಗರಿ. ನೀವು ನಕ್ಕಷ್ಟೂ ನನ್ನ ರಕ್ತ ನೀರಿಗೆ ಬಿದ್ದ ಸುಣ್ಣದಂತೆ ಕುದಿಯುತ್ತಿದೆ. ಮನುಷ್ಯ ರೂಪವಿದ್ದರೂ ಪಶು ಬುದ್ಧಿ ಬೆಳೆದಿರುವ ನಿಮ್ಮ ತಲೆಗಳನ್ನು ಕತ್ತ ರಿಸದೆ ಬಿಡಲಾರೆ. ಚನ್ನಾಗಿ ನೆನಪಿಟ್ಟುಕೊಳ್ಳಿ. ನಾ ವೇಶ್ಯೆಯಾಗಿ ಬದುಕಿದರೂ ಚಿಂತೆಯಿಲ್ಲ. ನಿಮ್ಮನ್ನು ನಾಶಮಾಡದೆ ಮಾತ್ರ ಸಾಯಲಾರೆ.

ಭೋಜರಾಜ– ಏನಂದೆ, ನೀನು ನಮ್ಮನ್ನು ನಾಶ ಮಾಡ್ತಿಯಾ ? ಆಯ್ಯೋ ಹುಚ್ಚಿ, ದುಡ್ಡಿನ ಕವಚ ನಮಗಿರುವ ತನಕ, ನಮ್ಮನ್ನು ನಾಶ ಮಾಡುವದಕ್ಕೆ ಆ ಈಶನೇ ಬಂದರೂ ವಾಪಾಸಾಗಿಬಿಡುತ್ತಾನೆ. ಅಂದಾಗ, ಸಾಮಾನ್ಯ ಹೆಣ್ಣಾದ ನೀನೇನು ಮಾಡಲು ಸಾಧ್ಯ ? ನಮ್ಮ ದುಡ್ಡಿನ ದರ್ಪಕ್ಕೆ ನಿನ್ನಂತ ಹೆಣ್ಣು ಸರ್ಪಗಳು ಹಲ್ಲು ಕಳೆದುಕೊಂಡು ನಮ್ಮ ಕಾಲಡಿಯ ಕಸ ವಾಗಲೇ ಬೇಕು.

ವಿಶಾಲ– ಆ ನಿಮ್ಮ ದುಡ್ಡಿನ ಕವಚ ಮಾಡಿದ ಪಾಪಗಳನ್ನು ಮರೆ ಮಾಚಿದರೂ, ಪ್ರಾಣ ಉಳಿಸಲು ಸಾಧ್ಯವಿಲ್ಲ. ದುಡ್ಡಿನ ದರ್ಪದಲ್ಲಿ ಅತ್ಯಾ ಚಾರ ಮಾಡಿದರೂ, ಘೋರ ಶಾಪಕ್ಕೆ ತುತ್ತಾಗಿ ಭೋಗಿಸಬೇಕಾಗುವ ಗ್ರಹಚಾರ

ತಪ್ಪಿದ್ದಲ್ಲ. ದುಡ್ಡು, ದುಡ್ಡಿಂದು ದುಡ್ಡಿನ ಜಿಡ್ಡಂಟಿಸಿಕೊಂಡು ಸೆಡ್ಡೊಡ್ಡ ಯುವ ನಿಮ್ಮಂಥಾ ರಾಕ್ಷಸರನ್ನು ಬೆತ್ತಲೆ ಮಾಡಿ ಥೀ, ಥೂ ಎಂದು ಉಗಿ ಯುವ ಕಾಲವೂ ದೂರಿಲ್ಲ. ತನ್ನ ಹೆಂಡತಿಯನ್ನು ತಂದೆ ಭೋಗಿಸುವುದನ್ನು ಕಂಡರೂ, ತೆಪ್ಪಗಿರುವ ಈ ನಿಮ್ಮ ಮಗ, ತನಗೆ ಜನ್ಮ ಕೊಟ್ಟವಳಿನ್ನುವ ಪರಿಜ್ಞಾನವಿಲ್ಲದೆ ನಿನ್ನ ಹೆಂಡತಿಯನ್ನು ಭೋಗಿಸಿರಬೇಕು.

ಭೋಜರಾಜ– ಬಾಯಿ ಬಿಗಿ ಹಿಡಿದು ಮಾತಾಡು ನೀಚ ಹೆಣ್ಣೆ.

ವಿಶಾಲ– ಮೊದಲು ನಿಮ್ಮ ಬುದ್ಧಿಯನ್ನು ಶುದ್ಧ ಮಾಡಿಕೊಳ್ಳಿ ಭಂಡ ಗಂಡಸರೆ. ತನ್ನ ಹೊಟ್ಟೆಯಿಂದ ಹುಟ್ಟಿದ (ಕರುಳ ಕುಡಿ) ಕರುವಿನಿಂದಲೇ ಗರ್ಭ ಹೊರುವ ಹಸುವಿನ ಸ್ಥಿತಿ ನಿಮ್ಮ ಹೆಂಡತಿಗೂ ಬಂದಿದ್ದರೆ ಆಶ್ಚರ್ಯ ವೇನಿಲ್ಲ. ಯಾಕಂದ್ರೆ ಪಶುವಿಗಿಂತಲೂ ಮಿಗಿಲಾದ ಹಸಿದ ನಾಯಿಗಳು ನೀವು. ಹೇಸಿಗೆ ತಿಂದು, ಹೊಲಸಿನಲ್ಲಿ ಬಿದ್ದು ಒದ್ದಾಡುವ ಹಂದಿಗೂ ನಿಮಗೂ ವ್ಯತ್ಯಾಸವೇನಿದೆ ?

ವಿಕ್ರಂ– ಈ ಹುಚ್ಚು ಮಾತು ಬಿಟ್ಟು, ನಿನ್ನ ದೇಹ ಸ್ವಚ್ಛ ಮಾಡಿ ಕೊಳ್ಳೋ ಮಾರ್ಗ ಹುಡುಕೋಗೆ.

ವಿಶಾಲ– ಈಗ್ಹೋಗ್ತೀನಿ, ನಿಮ್ಮನ್ನು ಭಕ್ಷಿಸಲು ರಾಕ್ಷಸಿಯಾಗಿ ಮತ್ತೆ ಬರ್ತೀನಿ. (ಹೋಗುವಾಗ ಧರ್ಮಯ್ಯ ಎದುರಾಗುವನು)

ಧರ್ಮಯ್ಯ– ಯಾರಮ್ಮಾ ನೀನು ?

ವಿಶಾಲ– ಮನುಷ್ಯರಂತೆ ಕಾಣುವ ನರ ರಾಕ್ಷಸಿ. (ಹೋಗುವಳು)

ಭೋಜರಾಜ– ಅವಳ್ಯಾರಾದ್ರೂ ಆಗ್ಲಿ, ನೀನ್ಯಾಕ ತಲೆ ಕೆಡಿಸ್ಕೊಳ್ತಿಯಾ ?

ವಿಕ್ರಂ– ಹುಚ್ಚಿ ಇರ್ಬೇಕವಳು. ಒಳಗ್ಬಂದು ರಾದ್ಧಾಂತ ಮಾಡಿದ್ಲು. ಅದಕ್ಕ ಹೊರಗ್ ದಬ್ಬಿದ್ವಿ.

ಧರ್ಮಯ್ಯ– ನನಗೆದುರಾಗಿ ಬಂದ ಅವಳ ಮುಖ ನೋಡಿದಾಗಲೇ ಗೊತ್ತಾಯ್ತು ವಿಕ್ರಂ ಸಾಹೇಬ್ರೆ. ಅವಳಿಗೆ ಹುಚ್ಚು ಹಿಡಿದಿದೆಯಂತ. ಇಂದಿನ ಸಮಾಜದಲ್ಲಿ ಇಂಥಾ ಮುಗ್ಧ ಹೆಣ್ಣುಗಳ ಸಂಖ್ಯೆ ಲೆಕ್ಕವಿಲ್ಲದಂತೆ ಬೆಳೆದಿದೆ,

ಬೆಳೆಯುತ್ತಲೇ ಇದೆ. ಇಂಥವರ ಮನದಲ್ಲಿ ಮೋಹ ಅಂಕುರಿಸುವ ಬೀಜ ಬಿತ್ತಿ ಮೊಳಕೆಯಾಗಿ, ಗಿಡವಾಗಿ, ಫಲವಾಗುವ ತನಕ ಕಪಟ ಪ್ರೀತಿಯ ನೀರುಣಿಸುವ ಕೆಲ ಹೈಬ್ರಿಡ್ ಕಾಮುಕರೂ ಇದ್ದಾರೆ ಈ ಸಮಾಜದಲ್ಲಿ. ತಿಂದು ತೃಪ್ತಿ ಪಡುವವರಿಗೆ ತ್ಯಾಗ ಮಾಡುವ ದೊಡ್ಡ ಗುಣ ಈ ನೀಚರಿಗಿರುವದಿಲ್ಲ. ಬಾಯಿ ಚಪಲಕ್ಕಾಗಿ ಆ ಫಲವನ್ನು ಕಚ್ಚಿ, ತಿಪ್ಪೆಗೆ ಚೆಲ್ಲಿಬಿಡುತ್ತಾರೆ. ಪಾಪ! ತೃಪ್ತಿ ಪಡುವವರ ಪಾಲಾಗದೆ, ತೃಪ್ತಿಪಡಿಸುವ ಶಕ್ತಿಯೂ ಇಲ್ಲದೆ ಎಂಜಲಾದ ಆ ಫಲ ಕೊಳೆತು ಮಣ್ಣುಪಾಲಾಗಿಬಿಡುತ್ತದೆ.

ಭೋಜರಾಜ– ಎಂಜಲಾದ ಫಲವನ್ನೂ ತಿಂದು ತೃಪ್ತಿ ಪಡುವವರಿದ್ದಾರಪ್ಪ ಈ ಸಮಾಜದಲ್ಲಿ.

ಧರ್ಮಯ್ಯ– ಇರಬಹುದು. ಆದರೆ ಅವರು ತೃಪ್ತಿಪಡುವವರಲ್ಲ. ಬರಗೆಟ್ಟವರು, ಹಸಿದ ನಾಯಿಗಳು. ಮಾಂಸವನ್ನು ಹರಿದು ತಿನ್ನುವ ಮೃಗಗಳಂತೆ. ಹೆಣ್ಣನ್ನು ಹಂಚಿಕೊಂಡು ಭೋಗಿಸಿರುವ ತಂದೆ–ಮಕ್ಕಳ ಉದಾಹರಣೆ ಸಾಕಷ್ಟಿವೆ ಈ ಸಮಾಜದಲ್ಲಿ.

ಭೋಜರಾಜ– ಅಪ್ಪಾ ಧರ್ಮಯ್ಯ, ಆ ವಿಷಯಾ ಬಿಟ್ಟು ನೀ ಬಂದ ಕಾರಣ ಬೊಗಳು.

ಧರ್ಮಯ್ಯ– ಡೆಲ್ಲಿಯಿಂದ ನಾಳೆ ಹೊರಡ್ತೇನಿ ಅಂತ ವನಜಮ್ಮ ಟ್ರಂಕಾಲ್ ಮಾಡಿದ್ದಾರೆ. ಕಾರಣ ಅವರ ಸ್ವಾಗತ (ಆಮಂತ್ರಣ) ಸಮಾರಂಭದ ಸಿದ್ಧತೆಯನ್ನು ಮಿಲ್‌ನಲ್ಲಿ ಮಾಡ್ಬೇಕೋ, ಮನೆಯಲ್ಲಿ ಮಾಡ್ಬೇಕೋ ಅಂತ ನಿಮ್ಮನ್ನು ವಿಚಾರಿಸಲು ಬಂದೆ.

ವಿಕ್ರಂ– ರೀ ಧರ್ಮಯ್ಯ, ನಿಮಗ ಬುದ್ಧಿಯಿದೆಯೇನ್ರಿ ? ಕೋಟ್ಯಧೀಶ್ವರಳ ಸ್ವಾಗತ ಸಮಾರಂಭಕ್ಕೆ ಈ ಸಣ್ಣ ಮನೆ ಸಾಲುತ್ತೇನ್ರಿ ?

ಧರ್ಮಯ್ಯ– ಹಾಗಾದ್ರೆ ಮಿಲ್‌ನಲ್ಲೇ ವ್ಯವಸ್ಥೆ ಮಾಡ್ತೇನ್ರಿ

ಭೋಜರಾಜ– ಇನ್ನೂ ಕೇಳ್ತಾ ನಿಂತಿದ್ದಿಯಲ್ಲ, ಮೊದ್ಲು ಆ ಕೆಲ್ಸ ಮಾಡ್ಹೋಗು.

ಧರ್ಮಯ್ಯ– ಸರಿ ಬರ್ತೀನಿ. (ಹೋಗುವನು)

ವಿಕ್ರಂ– ಡ್ಯಾಡಿ, ಇವನ್ಮಾತುಗಳು ನಮ್ಮನ್ನೇ ಇರಿಯುತ್ತಿವೆಯಲ್ಲ.

ಭೋಜರಾಜ– ಅದರ ಬಗ್ಗೆ ನೀನೇನೂ ತಲೆ ಕೆಡಿಸಿಕೊಳ್ಳಬೇಡ. ಇವನ ತಲೆಯಲ್ಲಿ ಈಗತಾನೆ ಸಂಶಯದ ಸುಳಿ ಮೊಳಕೆ ಹಾಯ್ದಂತಿದೆ. ಸ್ವಲ್ಪ ದಿನ ಕಾದು ನೋಡೋಣ. ಆ ಮೊಳಕೆ ನೆರಳು ಕೊಡೊ ಮರವಾಗುತ್ತೊ, ಕಾಲಿಗೆ ಚುಚ್ಚುವ ಮುಳ್ಳಿನ ಕಂಟಿಯಾಗುತ್ತೊ ಅಂತ. ನೆರಳು ಕೊಡೊ ಮರ ವಾದರೆ ಅದರಡಿಯಲ್ಲಿ ಮಲಗಿ ಹಾಯಾಗಿ ನಿದ್ದೆ ಮಾಡೋಣ. ರಕ್ತ ಹೀರುವ ಮುಳ್ಳಿನ ಕಂಠಿಯಾದರೆ ಬೇರು ಸಮೇತ ಕಿತ್ತು, ಸುಟ್ಟು ಬೂದಿ ಮಾಡೋಣ. ಆ ವಿಚಾರ ಬಿಡು, ಸಧ್ಯ ನಾಯಕಿ ಬರ್‍ತಾಯಿದ್ದಾಳೆನ್ನುವ ಪ್ರಜ್ಞೆಯಲ್ಲಿರು.

ವಿಕ್ರಂ– ಆ ಪ್ರಜ್ಞೆ ನನಗಿದೆ ಡ್ಯಾಡಿ. ಈ ನಾಯಕನೂ ಅವಳು ಬರುವು ದನ್ನೇ ಎದುರು ನೋಡ್ತಾಯಿದ್ದಾನೆ.

ಭೋಜರಾಜ– ಹಾಗಾದರೆ ಈ ನಿರ್ದೇಶಕ ಕಥೆ ಹೆಣೆಯಲು ಸಿದ್ಧ ನಾಗಿದ್ದಾನೆ. ಬಾ ವಿಕ್ರಂ. ಮನೆಯಲ್ಲಿ ಸಿಗುವ ಈ ಮೋಜು, ವನಜಾ ಬಂದ್ಮೆಲೆ ಸಿಗಲಾರದು. ಇನ್ನೊಂದೆರಡು ಪೆಗ್ ಹಾಕೋಣ.

ವಿಕ್ರಂ– ನಾನು ರೆಡಿ ಡ್ಯಾಡಿ. (ನಗುತ್ತಾ ಹೋಗುವರು)

## ಐದನೆಯ ದೃಶ್ಯ

### ರಸ್ತೆ

(ರಂಗ ಬರುವನು)

ರಂಗ– ಅಂತೂ ವನಜಮ್ಮಾರು ಡೆಲ್ಲಿಯಿಂದ ಊರಿಗ್ಬಂದ್ರು. ಅಬ್ಬಬ್ಬ ಏನ ಕೂಡಿತ್ರಿ ಜನ ? ಅವತ್ತ ಹಡೆದ ಬಾಣಂತಿಯಿಂದ ಹಿಡ್ಕೊಂಡು, ಇವತ್ತೋ ಸಾಯುಂವಂತ ರೋಗ ಬಡುಕೊಂಡವರು ಸೈತ ಜಮಾಯ್ಸಿದ್ರು. ಅದೂ ಸಿಜಾನೆ. ವಯಸ್ನಲ್ಲಿ ಚಿಕ್ಕವರಾದ್ರೂ, ದಯಾಗುಣದಲ್ಲಿ ದೊಡ್ಡವ ರದಾರಂತನ ಜನಾನುರಾಗ ಜಾಸ್ತಿ ಐತಿ.

(ಲಿಲ್ಲಿ ಬರುವಳು)

ಲಿಲ್ಲಿ– ಹಾಯ್ ರಂಗು!

ರಂಗ– ಬಂದೆಯಾ ವಿಧಿ ರಾಣಿ. ನಾನಿದೇ ದಾರ್‍ಯಾಗ್ಬರ್‍ತ್ಯೇನಂತ ನಿನಗೇನರ ಕನಸು ಬಿದ್ದಿರುತ್ತೇನು ?

ಲಿಲ್ಲಿ– ಹೌದು ರಾಜಾ.

ರಂಗ– ಮತ್ತೇನು ಹೌದು ಅಂತಿ ಚಂದ್ಗೇಡಿ. ನಿನ್ನಲುವಾಗಿ ಸಾಕಾತು ನನಗ. ಯಾವ ನಮೂನಿ ಕಾಡುದದು ? ನಾ ಎಲ್ಲೆರ ಕಾಣ್ಲಿ ಜನ ಅದಾ ರನ್ನೋ ಖಬರಿಲ್ದಂಗ "ಐ ಲವ್ ಯು ರಂಗು" ಅಂತ ಒಮ್ಮೆಗೆ ತೆಕ್ಕಿ ಬಡಿ ಯಾಕ ಬರ್‍ತಿಯಲ್ಲ. ಮೊದಲ್ಹ ಪುಕ್ಕ ಮನುಷ್ಯಾ ನಾನು. ಏನ್ಕೇನರ ಆದ್ರ ಗತಿ ಏನು ?

ಲಿಲ್ಲಿ– ಮನಮೋಹನ, ಯಾಕ್ಹಿಂಗ ಮಾತಾಡ್ತಿ ? ನನ್ನ ತ್ರಾಸು ನಿನಗೇನು ಗೊತ್ತು ? ರಾತ್ರಿ ನಾ ಮಲಗಿರ್‍ತೇನಿ. ಕನಸಿನ್ಯಾಗ ನೀ ಬರ್‍ತಿ. ಬಂದವನ ನನ್ನ ಗುಲಾಬಿ ಗಲ್ಲಕ್ಕ ಮುತ್ತು ಕೊಡ್ತಿ.

ರಂಗ– ಓಂನಮಃಶಿವಾಯ. ಹೆಣ್ಣೆ.ನಾನು ಆಜನ್ಮ ಬ್ರಹ್ಮಚಾರಿ. ಯಾವ ಹೆಣ್ಣಿನ ಕನಸಿಗೂ ನಾ ಹೋಗೋಲ್ಲ. ಹೋಗಾಕ ನನಗ ಪುರ್ಸೊತ್ತೂ ಇರಲ್ಲ.

ಲಿಲ್ಲಿ– ಸುಳ್ಳ್ಯಾಕ್ಹೇಳ್ತಿ ? ನಿದ್ದಿ ಮಾಡಾಕ ಬಿಡ್ದಂಗ, ಕನಸ್ನ್ಯಾಗ ಬಂದು, ಗುದ್ದಿ ಗುದ್ದಿ ಎಬ್ಬಿಸ್ತಿ. ರಾತ್ರೆಲ್ಲಾ ನಿದ್ದಿಗೆಟ್ಟು ನನ್ನ ಮಾರಿ ಹೆಂಗಾ ಗೇತಿ ನೋಡಿಲ್ಲಿ ?

ರಂಗ– ನಿನ್ನ ಮಾರಿ ನೋಡಿದ್ರ ನನ್ನೇನು ಸರಳ ಕೈ ಬಿಡಂಗ ಕಾಣು ದಿಲ್ಲ. ಸಧ್ಯ ನೀನು ಪೂರಾ ಹಸ್ದಂಗ ಕಾಣ್ತಿ. ನಾನರ ಒಬ್ಬವನ ಅದೀನಿ. ಒಮ್ಮೆಗೆ ನೀ ಜಿಗದು ಬಂದು ಬಲಾತ್ಕಾರ ಮಾಡಿದ್ರ, ನನ್ನ ಶೀಲದ ಗತಿ ಏನು ?

ಲಿಲ್ಲಿ– ಏನಂದಿ! ನಿನ್ನ ಶೀಲ್ಹೋಗುತ್ತ ? ಬುದ್ದು. ನೀ ಗಂಡ್ಸದಿ.

ರಂಗ– ಗಂಡ್ಸಾದ್ರ, ಶೀಲ ಇರುದಿಲ್ಲೇನು ?

ಲಿಲ್ಲಿ– ಇದ್ರ ತೋರ್‍ಸು ನೋಡ್ತೇನಿ, ಶೀಲಾನ.

ರಂಗ– ಅಂದ್ರ, ಶೀಲಾನ ಚೀಲ್ದಾಗ ತಂದೀನಂತ ತಿಳದಿಯೇನು, ತಗದ ತೋರ್ಸಾಕ. ಗಂಡಸಿನ ಶೀಲ ಯಾವ್ದಂತ ತಿಳದಿ ?

ಲಿಲ್ಲಿ– ಗೊತ್ತಿಲ್ಲ. ಹೇಳು ಇಲ್ಲಾ ತೋರ್ಸು.

ರಂಗ– ತಾಯಿ ವಕ್ರೇಶ್ವರಿ ತೋರ್ಸುದಲ್ಲದು, ಹೇಳುದು. ಸುಮ್ನ ನಿಂತ್ಕೇಳು. ಗಂಡ್ಸಿನ ಶೀಲ ಪರಹೆಣ್ಣನ್ನಾ ಅಕ್ಕ–ತಂಗಿ ಅಂತ ಕರೆಯೋ ಅವನ ನಾಲಿಗ್ಯಾಗಿರ್ತೇತಿ. ಅವನ ಸುತ್ತಲಿರೊ ಪರಿಸರಕ್ಕ ಕೆಟ್ಟಾಗದಂಗ, ಚಟಕ್ಕ ಬಲಿ ಯಾಗದಂಗ ಬದುಕೋದ್ರಾಗಿರ್ತೇತಿ. ಕಟ್ಕೊಂಡ ಹೇಣ್ತಿನ ಕೊರಗಿಸ್ದಂಗ ಸಂಸಾರ ಮಾಡೋದ್ರಾಗಿರ್ತೇತಿ. ಮತ್ತ...

ಲಿಲ್ಲಿ– ಸಾಕು. ಮೊದ್ಲು ನಿನ್ನ ಮಾರಿಮ್ಯಾಲ ಮೂಡಿರೋ ಮೀಸಿ, ಒರ್ಜಿನಲ್ಲೋ, ಡೂಪ್ಲಿಕೇಟೋ ಹೇಳು.

ರಂಗ– ಯಾಕ, ಒಮ್ಮಿಗೆ ನನ್ನ ಮೀಸಿ ಸುದ್ದಿ ತೆಗೆದಲ್ಲ ?

ಲಿಲ್ಲಿ– ಡೂಪ್ಲಿಕೇಟ ಆಗಿದ್ರೆ ಆ ಜಾಗ ಬಿಡ್ಸೋದು ವಾಸಿ ಅಂತ. ನಿನ-ನಿನ ಬುದ್ಧಿ ಎಲ್ಲಿಟ್ಟಿದಿ ? ವಯಸ್ಸಿಗ್ಬಂದ ಹೆಣ್ಣು, ಬಯಸಿ ನಿನ್ಮುಂದ ನಿಂತಾಗ, ಪ್ರೇಮಗೀತೆ ಹಾಡಿ ಕುಣ್ಸೋದ್ಬಿಟ್ಟು, ಜೋಗುಳ ಪದ ಹಾಡಿ ಮಲಗ್ಸಾಕ ನೋಡ್ತಿಯಲ್ಲ.

ರಂಗ– ನಾನೇನೋ ಕುಣುಸ್ತಿದ್ದೆ ಆದ್ರ ನಾನಿನ್ನೂ ಆ ವಯಸ್ಸಿಗೇ ಬಂದಿಲ್ಲಲ್ಲ.

ಲಿಲ್ಲಿ– ವಯಸ್ಸಿಗ್ಬಂದಿಲ್ಲ ?... ನಿನ್ನ ವಯಸ್ಸರ ಎಷ್ಟೀಗ ?

ರಂಗ– ಇಪ್ಪತ್ತೆಂಟು.

ಲಿಲ್ಲಿ– ವಯಸ್ಸಿಗೆ ಬರಾಕ ಇನ್ನೆಷ್ಟು ವರ್ಷ ಬೇಕು ?

ರಂಗ– ಇದರ ಮ್ಯಾಲ ಇಪ್ಪತ್ತೆಂಟು.

ಲಿಲ್ಲಿ– ಅಂದ್ರ, ಐವತ್ತಾರಕ್ಕೇರುತ್ತೇನು ನಿನ್ನ ಹರೇವು ?

ರಂಗ– ಹೌದು. ಅಲ್ಲೀತನ ನಿಮಗೇನು ಪವರ್ ಸ್ಯಾಂಕ್ಷನ್ ಆಗುದಿಲ್ಲ.

ಲಿಲ್ಲಿ– ಒಂದ್ಸಲ ನನ್ನ ತಬ್ಬಿಕೊ. ಹುಚ್ಚೆದ್ದು ಕುಣಿವಂತ ಪವರ್ ಬರ್ತದ.

ರಂಗ– ಅಂದ್ರ, ನಿನ್ನ ಬಾಡ್ಯಾಗ ಕರೆಂಟ್ ಸ್ಪಾರ್ಕ್ ಐತೇನು ?

ಲಿಲ್ಲಿ– ಮುಟ್ಟಿ ನೋಡು ನಿನಗ ಗೊತ್ತಾಗುತ್ತ ?

ರಂಗ– ಹಂಗಾರ ಗಟ್ಟಿ ನಿಂದ್ರು ಟ್ರೈ ಮಾಡ್ತೀನಿ. (ಮುಟ್ಟಲು ಹೋಗಿ ಹಿಂದೆ ಸರಿದು) ಬ್ಯಾಡಬಿಡು ಮಾರಾಯಳ ಶಾಕ್ ಹೊಡದೀತು.

ಲಿಲ್ಲಿ– ಅಪರೂಪದ ಗಂಡು ಸಿಕ್ಕೀ ನೋಡು ನನಗ. ಗಂಡಸ್ತನನ ಇದ್ದಂಗ ಕಾಣುದಿಲ್ಲ ನಿನಗ.

ರಂಗ– ಯಾಕಿಲ್ಲ ಐತಿ. ಆದ್ರ ನಿನ್ಮ್ಯಾಗ ಬರುವಲ್ದದು.

ಲಿಲ್ಲಿ– ಇದ್ರ ನನ್ನ ಮುಟ್ಟು ಬಾರೋ ಮುದಸ (ಕೈ ಹಿಡಿದು ಎಳೆಯು ವಳು)

–ಪದ–

(ಪದ ಮುಗಿಯುವಾಗ ರಂಗ ಕುಸಿದು ಬೀಳುವನು)

ರಂಗ– (ತಡವರಿಸುತ್ತ) ಲಿಲ್ಲಿ, ನಾನೀಗೆಲ್ಲದೇನಿ ?

ಲಿಲ್ಲಿ– ಕಣ್ಬಿಟ್ಟು ನೋಡಲ್ಲ.

ರಂಗ– ಕಣ್ಣು ಬಿಡಾಕ ಬರ್ದಂಗಾಗೇತೀಗ. ಲಿಲ್ಲಿ, ಮೈಯಾಗ್ಯಾಕೋ ಜುಂ ಅನ್ನಾಕ ಶುರುವಾತಲ್ಲ ?

ಲಿಲ್ಲಿ– ಗಂಡಸ್ತನದ ಸಂಕೇತದು, ಮೈಯಾಗೀಗ ಕಾವಾಗೇತಿಲ್ಲೊ ?

ರಂಗ– ಕಾವೆಲ್ಲಿದು, ಎಲ್ಲಾ ತಣ್ಣಗಾಗಿ, ಥಂಡಿ ಶುರುವಾಗೇತಿ. ಕೈಕಾಲು ಸ್ವೈತ ಸರ್ದಾಡುವಲ್ಲವು.

ಲಿಲ್ಲಿ– ನಿಂದೆಂಥಾ ಪ್ರಕೃತಿನೋ ಮಾರಾಯ. ಈಗರ ಕುಣಿಯಾಕ ಶುರು ಮಾಡಿ, ಒಮ್ಮಿಗೆ ನೆಲ ಹಿಡಿದೆಲ್ಲ. ಈಗ್ಗ ಇಷ್ಟು ಡೌನಾದ್ರ ಮುಂದೆಂಗಂತ ?

ರಂಗ– ಅಗದಿ ಬ್ಯಾಲೆನ್ಸಿನ ಮನುಷಾ ನಾನು. ನಡದಾಡಿದ್ರ್ರ ಜೋಲಿ ಹೊಡಿತೀನಿ. ಇನ್ನು ಕುಣದಾಡಿದ್ರ ಗತಿ ಏನಾಗ್‌ಬೇಡ ? ಆದರಾಗದ್ರಾಗ ಎಂದೂ ಬರದ ಹುರುಪು ಇವತ್ತ ಬರ್ಬೇಕ್ಹ ನನಗ! ಕತ್ತಿ

ಕುಣಿದಂಗ್ ಕುಣಿದು, ದಪ್ಪಾತ್ತಿ ನೆಲಕ್ ಬಿದ್ದೆ. (ಏಳಲು ಹೋಗಿ ಬಿದ್ದು) ಹೊಗನಿಸ, ಏಳಾಕ್ಷ ಬರ್ದಂಗಾಗೇತಿ.

ಲಿಲ್ಲಿ– ನಾನೆಬ್ಬಸ್ಲೇನಾ ?

ರಂಗ– ಬ್ಯಾಡ. ನಿನಗ ಕೈ ಮುಗೀತಿನಿ ದೂರ ನಿಂದ್ರು. ಒಮ್ಮೆ ಮುಟ್ಟಿ ನೆಲಕ್ಕೆಡವಿದಿ. ಮತ್ತೇನರ ಮುಟ್ಟಿದಿ, ಖಾಯಂ ಮಲಗ್ತೀನಿ.

(ಮೂರ್ತಿ ಬರುವನು)

ಮೂರ್ತಿ– ದಾರಿಮ್ಯಾಲೇನ ನಡಸ್ಯಾರಲ್ಲ ಕಳ್ರು ? ಈ ಮಗ ನೋಡಿದ್ರ ನೆಲ ಹಿಡ್ದು ಕುಂತಾನ. ಇಕಿ ನೋಡಿದ್ರ ಶಿಲಾಬಾಲಿಕೆ ಪೋಜು ಕೊಟ್ಟು ನಿಂತಾಳ. ಏನ್ನೂ ಗದ್ದಾಗೇತಿಲ್ಲಿ. ಯಾಕಲೆ ರಂಗ ಏನಾತು ?

ರಂಗ– ನನೆ ೀನೂ ಕೇಳಬ್ಯಾಡ. ನಿಂತಾಳ ನೋಡಲ್ಲಿ ಮಳ್ಳಿ. ಆಕಿನ್ನ ಕೇಳು.

ಮೂರ್ತಿ– ಏನಾತೆ ಲಿಲ್ಲಿ ?

ಲಿಲ್ಲಿ– ಯಾಕಲೇ ಹೈವಾನ್ ? ಏನೇ ಲಿಲ್ಲಿ ಅಂತ ಏಕವಚನದಾಗ ಕರಿತಿಯಲ್ಲ ? ಬಾಯಾಗ ಗೂಟ ಬಡದೇನು, ನೆಟ್ಟಗ್ಮಾತಾಡು.

ಮೂರ್ತಿ– ನೆಟ್ಟಗೇನು ಮಾತಾಡ್ತಾರೇ ಸೋಗಲಾಡಿ. ಪಾಪ! ನೆಲ ಹಿಡ್ದು ಕುಂತಾನಲ್ಲ. ಏನ್ಮಾಡಿದಿ ಖರೆ ಹೇಳು. ಮೊದಲ್ಲ ಬಾಯಿಸತ್ತ ಹುಡುಗದು. ನಿನ್ನ ವಯಸ್ಸೇನು, ಇವನ ವಯಸ್ಸೇನು ? ಸ್ವಲ್ಪರ ತಿಳಿತೇತಿಲ್ಲ ನಿನಗೆ ?

ರಂಗ– ಈ ಮಗಾ ಹೊಸ ಗತ್ತು ಎಬ್ಬಿಸಿದ. ಇನ್ನೂ ಹಾಲು ಕುಡಿಯೋ ಕೂಸಂತ ತಿಳಿದಾನ ನನ್ನ.

ಮೂರ್ತಿ– ನೀನೇನರ ಮಾಡುವಂಗಿದ್ರ ನನಗ್ಮಾಡು ತಡ್ಕೊಂತೀನಿ.

ಲಿಲ್ಲಿ– ಮೂರ್ತಿ, ಇದು ನಿನಗ ಸಂಬಂಧಿಲ್ಲದ ವಿಷಯ. ತಲಿ ಕೆಡಸ ಬ್ಯಾಡ ಸುಮ್ಮನೋಗು.

ಮೂರ್ತಿ– ನೀನೂ ಅಷ್ಟ. ನನ್ನ ತಲಿ ಕೆಡಸಬ್ಯಾಡ. ಏನು ನಡೀತಂತ ಸರಳ್ಹೇಳು, ಇಲ್ಲಾಂದ್ರೆ ನಿನ್ನ ಮೂಗು ಕೊಯ್ದು ಹಣಿಗ್ಹಚ್ತೀನಿ.

ಲಿಲ್ಲಿ– ಏನಂದಿ ? ಮೂಗು ಕೊಯ್ತಿಯಾ ? (ಸೆಡ್ಡು ಹೊಡೆದು) ನಿಮ್ಮಪ್ಪಗ ಹುಟ್ಟಿದ್ರೆ ಮುಟ್ಟುಬಾರಲೇ ನೋಡ್ತಿನಿ. ನಿನ್ನ ನಾಲಿಗೆ ಕಿತ್ತು ನಾಯಿಗಾಕ್ಹದಿದ್ರ ನಾನು ಹೆಣ್ಣ ಅಲ್ಲ. (ಮತ್ತೆ ಸೆಡ್ಡು ಹೊಡೆದು) ಬಾರಲೇ ಬಾ.

ರಂಗ– ಇವರ ಪ್ರಕರಣ ಭಾರತ–ಪಾಕಿಸ್ತಾನದ ಗಡಿ ಸಮಸ್ಯೆಗೆ ಬಿದ್ದಂಗಾತು. ಈ ಮಗ ಮೂಗು ಕೊಯ್ತಿನಿ ಅಂತಾನ, ಇಕಿ ನಾಲಿಗಿ ಕೀಳ್ತಿನಿ ಅಂತಾಳ. ಇಬ್ರೂ ತಲಿ ಕೆಟ್ಟವರ ಅದಾರ. ಇಲ್ಲೇ ಇದ್ದು ಇವರ ಕೈಗೆ ಸಿಕ್ರ, ನಂದೇನೇನು ಕೀಳ್ತಾರೋ ಯಾರಿಗ್ಗೊತ್ತು! ಯೋ ನಿಮ್ಹೌರ ಕುಸ್ತಿನರ ಹಿಡಿರಿ ನೋಡ್ತಿನಿ.

ಮೂರ್ತಿ– ಅಂದ್ರ, ಇಕಿ ಕೈಯಾಗ ಕಟಿಸೇ ಕಳ್ಳೋ ವಿಚಾರ್ಯೆತೇನು ?

ರಂಗ– ಇಕೇನು ಕಟಿತಾಳಲೆ. ಹೇಳಿ ಕೇಳಿ ಹೆಣ್ಣು ?

ಮೂರ್ತಿ– ನೀನಿನ್ನೂ ಹೆಣ್ಣಿನ ಕೈಯಾಗ ಸಿಕ್ಕಿಲ್ಲ ಮಗನೆ. ಸಿಟ್ಟು ಬಂದು ಜಗಾ ನೋಡಿ ಕಟದ್ರ, ಆರು ತಿಂಗ್ಳು ಹಾಸಿಗಿನ ಹಿಡಿಬೇಕು.

ರಂಗ– ಆ ನಮೂನಿ ಕಟಿತಾರ ?

ಮೂರ್ತಿ– ಅವರಿಡ್ತನ ಅಂಗಿರ್ತಾವು. ಸಧ್ಯ ನೀನೀಗ ನೆಲ ಹಿಡ್ದು ಕುಂತಿದ್ದೆಲ್ಲ, ನಿನಗ್ಯಾವ ಹಿಡ್ತದಾಗ ಕಟದಿದ್ಲು ?

ಆ ಹಿಡ್ತನ ಬ್ಯಾರಿತ್ತು ಬಿಡಲೆ. ಎಷ್ಟು ಕಟದ್ರೂ ನನಗೇನು ನೋವಾಗ್ಲಿಲ್ಲ. ಪುಷ್ಪಕ ವಿಮಾನದಾಗ ತೇಲಿದಂಗಾತು ನನಗ.

ಮೂರ್ತಿ– ಈ ಮಗನಿಗೆ ಮತ್ತು ಬರುವಂತ ಹಿಡ್ತದಾಗ್ಹ ಕಟದಾಳ ಬೇವರ್ಸಿ.

ಲಿಲ್ಲಿ– ಬೇವರ್ಸಿ ಅನಬ್ಯಾಡೋ ಮಗನ.

ಮೂರ್ತಿ– ನೀನೂ ಮಗಾಪಗ ಅನಬ್ಯಾಡ. ನನಗೇನರ ಸಿಟ್ಟು ಬಂತಂದ್ರ...

ರಂಗ– ಮೂಗು ಕೊಯ್ತಾನ.

ಮೂರ್ತಿ– ಸುಮ್ನಿರಲೆ...

ರಂಗ– ಏನು ಸುಮ್ನಿರ್ತಿಯಾ ? ಒಂದಳತಿ ಕುರು ಹಚ್ಚಿದಿ. ಸಿಟ್ಟು ಬಂತಂದ್ರ ಹಂಗ್ಮಾಡ್ತೀನಿ, ಹಿಂಗ್ಮಾಡ್ತೀನಿ ಅಂತ. ನಾನೂ ಈಗ್ಬಂದಿತು, ಆಗ್ಬಂದೀತಂತ ನೋಡೇ ನೋಡ್ತೀನಿ. ಒಟ್ಟ ಬರುವಲ್ದದು ಸಿಟ್ಟು.

ಮೂರ್ತಿ– ಅಂದ್ರ, ಇಷ್ಟು ದಿವ್ಸ ನನ್ನ ಸಿಟ್ಟು ನೋಡಿಲ್ಲೇನು ? ಇವತ್ತು ನೋಡಂಗಾರ. ಬಾರೆ ಬಿಂಕದ ಹೆಣ್ಣೆ. ಇವತ್ತು ನಿನಗೊಂದು ಗತಿ ಕಾಣ್ಸೆ ಕೈ ಬಿಡ್ತೀನಿ.

ಲಿಲ್ಲಿ– (ಬಳೆ ಏರಿಸುತ್ತಾ) ನಾ ತಯಾರಾಗೇ ನಿಂತೀನಿ. ಮುಂದ್ಕರ ಬಾರೋ ಗಂಡ್ಸ.

ರಂಗ– ಇದು ಡೇಂಜರ್ ಪೊಜಿಷನ್ನಿಗೇ ಬಂತು. ಇವರೌರ ಹೊಡದಾಡಿ ಸಾಯ್ಲಿ. (ಓಡುವನು)

ಮೂರ್ತಿ– ಲೇ ಮಗನ ರಂಗ್ಯಾ, ಒಬ್ಬನ್ನ ಬಿಟ್ಹೋಕ್ಕಿಯಲ್ಲಲೇ... (ಓಡಿ ಹೋಗುವನು)

ಲಿಲ್ಲಿ– ಬಾರಲೇ ಮೂರ್ತಿ. ನನ್ನ ಕೈರುಚಿ ಇನ್ನೊಮ್ಮೆ ತೋರಿಸ್ತೀನಿ. ಅಲ್ಲಾ, ಈ ರಂಗೂಗೇನ್ಮಾಡ್ಬೇಕಾತಂತೀನಿ. ಒಟ್ಟ ಕೈಗೆ ಸಿಗವಲ್ಲ. ಆದ್ರೂ ಅವನ್ನ ಬಿಡಲ್ಲ ಬೆನ್ನತ್ತೀನಿ. (ಹೋಗುವಳು)

(ಭೋಜರಾಜನಿಗೆದುರಾಗಿ ವಿಕ್ರಂ ಅವಸರದಲ್ಲಿ ಬರುವನು)

## ಆರನೆಯ ದೃಶ್ಯ

## ಉದ್ಯಾನವನ

(ರಂಗ ಒಂದು ಕಡೆ ನಿಂತಿದ್ದಾನೆ. ವನಜ ಟೈಂ ನೋಡಿಕೊಳ್ಳುತ್ತಾ ತಿರುಗಾಡುತ್ತಿದ್ದಾಳೆ)

ವನಜ– ರಂಗಣ್ಣಾ. ಅರವಿಂದ್ರೇಕೊ ಇಷ್ಟೊತ್ತಾದ್ರೂ ಬರ್ಲಿಲ್ಲವಲ್ಲ ?

ಮೊದಲ್ನೆ ಡಾಕ್ಟರವರು. ಯಾವ್ದರ ಆಪ್ರೇಷನ್ ಕೇಸ್ ಬಂದಿರ್ಬೇಕು. ಅದಕ್ಕ ತಡ ಆಗೇತಿ.

ವನಜ– ರಂಗಣ್ಣ, ಅರವಿಂದರ ಬಗ್ಗೆ ನಿಮ್ಮ ಅಭಿಪ್ರಾಯವೇನು ?

ರಂಗ– ದೊಡ್ಡ ಪಂಡಿತಗ ಕೇಳಿದ್ರಿ ನೀವು. ಅಲ್ರಿ, ಸಂದ್ಯಾ ನನಗ ತಿಳಿವಲ್ದು. ಇನ್ನು ಆ ಡಾಕ್ಟ್ರದೇನು ತಿಳಿಬೇಕು.

ವನಜ– ನನಗವರ ಪರಿಚಯವಾದಂದಿನಿಂದ ನೀನೂ ಅವರ ಜೊತೆಗಿದ್ದಿಯಾ ಅಂದಾಗ, ಅವರ ಸ್ವಭಾವ ಸ್ಟಡಿ ಮಾಡಿಲ್ವೆ ನೀನು ?

ರಂಗ– ಮಾಡೇನ್ರಿ, ಸಧ್ಯ ತೋರಸ್ತೀನಿ. (ಆ ಕಡೆ ಈ ಕಡೆ ನೋಡಿ) ನನ್ನ ತಲಿಯಾಗೀಗ ಯಾವ ವಿಚಾರ ಬಂದಿದೆ ಗೊತ್ತೆನ್ರಿ ?

ವನಜ– ನನಗೇನು ಗೊತು ?

ರಂಗ– ಗೊತ್ತು ಮಾಡ್ತೀನೀಗ.

ವನಜ– ಅಂದ್ರೆ ?

ರಂಗ– ನಿಮ್ಮನ್ನ ರೇಪ್ ಮಾಡ್ತೀನಿ.

ವನಜ– ರಂಗಣ್ಣ, ನಿನಗೇನು ತಲೆ ಕೆಟ್ಟಿದೆಯೇನು ?

ರಂಗ– ಹೌದು. ನಿನ್ನಲುವಾಗಿ ಪೂರಾ ತಲೆಕೆಟ್ಟಿದೆ. ಬಾಳ ದಿನದಿಂದ ನಿನ್ನ ಮ್ಯಾಲ ಕಣ್ಣಿತ್ತು ನನಗ. ಆದ್ರ, ಕಾಲ ಕೂಡಿ ಬಂದಿದ್ದಿಲ್ಲ. ಇವತ್ತದಕ ಕಾಲ ಕೂಡೇತಿ. ತಕರಾರು ಮಾಡದಂಗ, ಸುಮ್ಮನ ನನ್ನಾಸೆ ತೀರಿಸು ಬಾ ನನ್ನ ರಾಣಿ. (ಹಿಡಿಯಲು ಹೋದಾಗ ಕಪಾಳಕ್ಕೊಡೆಯುವಳು)

ವನಜ– ಚಂಡಾಲ, ನನ್ನ ಕೆಡಸಾಕ ಬಂದ್ಯೇನೋ!

ರಂಗ– ಕಟದ್ರಿಲ್ಲೊ. ಹಿಂಗಿರುತ್ತ ನೋಡ್ರಿ ಮನುಷ್ಯನ ಸ್ವಭಾವ. ಪೊತ್ತ ನೋಡಿ ಹೊಡ್ತ ಹಾಕುತ್ತ. ಈಗ ನಾವೂ ನಿಮ್ಮೊಡ ಖಾಯಂ ಇರ್ರೀನಿಲ್ಲೊ.

ವನಜ– ಇರ್ತಿಯಾ.

ರಂಗ– ಹಂಗಾರ ನನ್ನ ಸ್ವಭಾವ ಇಂಗ್ಟು ಐತೆಂತ ನಿಮಗ್ಯಾಕ ತಿಳಿಲಿಲ್ಲ.

ವನಜ– ಈ ಪ್ರಶ್ನೆಗೆ ಏನಂತ ಉತ್ತರಿಸಬೇಕೋ ನನಗಂತೂ ತಿಳಿತಿಲ್ಲ.

ರಂಗ– ನಿಮಗ್ಯಾಕ, ಯಾರಿಗೂ ತಿಳಿದಿಲ್ರಿ. ಸ್ವಭಾವ ಬೂದಿ ಮುಚ್ಚಿದ ಕೆಂಡದಂಗ್ರಿ. ಸಮಯ, ಸಂದರ್ಭಕ್ಕ ಬಣ್ಣ ಬದಲಾಯಿಸ್ತಿರತೇತಿ ಕೆಲವರ ಸ್ವಭಾವ ಕಣ್ಣಿಗೆ ಸೊಗಸಾಗಿ ಕಂಡ್ರೂ, ಮನಸ್ಸು ಮಾತ್ರ ಬುಸುಗುಡೋ

ಸರ್ಪವಾಗಿ ಹರದಾಡುತ್ತಿರುತ್ತ. ಹಂಗ, ಅರವಿಂದರ ಸ್ವಭಾವ ಅರಳಿದ ಹೂವಿ ನಂಗ ಕಂಡ್ರೂ. ಮನಸ್ಸ, ಹಾವಾಗಿ ಹರದಾಡ್ತಿದ್ರೆ ಏನ್ಮಾಡ್ತಿರಿ ? ಯಾಕಂದ್ರ ಮನಸ್ಸು ಮಂತ್ರ ದಂಡಿದ್ದಂಗ. ಹೂವಾಗಿ ಸುವಾಸ್ನೆನೂ ಕೊಡ್ತದ, ಹಾವಾಗಿ ಪ್ರಾಣಾನೂ ಹೀರುತ್ತ. ಇದು ಆ ವ್ಯಕ್ತಿನ ನಂಬಿರೋ ನಿಮ್ಮ ಹಣೆಬರಹ ಬಿಟ್ಟಿದ್ದು.

ವನಜ– ನಾ ಕೇಳಿದ ಸಣ್ಣ ಪ್ರಶ್ನೆಗೆ. ದೊಡ್ಡ ತತ್ವಾನೇ ಹೇಳಿದೆಲ್ಲ.

ರಂಗ– ಇದು ಸಣ್ಣ ಪ್ರಶ್ನೆ ಅಲ್ರಿ, ಇದು ದೊಡ್ಡ ಪಂಡಿತರಿಗೂ ಗದ್ಲ ಕ್ಕ ಕೆಡುವುತ್ತ.

(ಅರವಿಂದ ಬರುವನು)

ಅರವಿಂದ– ಏನಪಾ ರಂಗಣ್ಣ, ಪಂಡಿತನ ಸುದ್ದಿ ತಗು[illegible]

ರಂಗ– ಏನಿಲ್ರಿ, ವನಜಮ್ಮಾರಿಗೆ ಸಣ್ಣ ಸಮಸೆ. ತಲಿ ಕೆಡಿಸೇತ್ರಿ.

ಅರವಿಂದ– ಯಾವ ಸಮಸ್ಯೆ ?

ರಂಗ– ನಾಯಿ ಬಾಲಕ್ಕ ಡಬ್ಬಿ ಕಟ್ಟಿದ್ರೂ ನೆಟ್ಟಗಾಗಲ್ಲಲ್ಲ, ಅದಕ್ಕೇನು ಮಾಡ್ಬೇಕು ? ಅಂದ್ರು.

ಅರವಿಂದ– ನೀನೇನು ಹೇಳಿದೆ ?

ರಂಗ– ನೆಟ್ಟಗಾಗಲ್ಲ ಅಂದ್ಮೆಲೆ. ಅದನ ಕಟ್ ಮಾಡೋದೇ ಛಲೋ ಅಂತ ಹೇಳ್ದೆ.

ಅರವಿಂದ– (ತಡವರಿಸಿ) ಆಂ... ವನಜ ಏನೇಳ್ತಾನಿವನು ?

ವನಜ– ಅವನಿಗೇ ಗೊತ್ತದು, ನಾ ಕೇಳಿದ್ದೊಂದು, ಇವನು ಹೇಳ್ತಿರೋದೊಂದು.

ಅರವಿಂದ– ನನಗಂತೂ ಈ ಮಹಾನುಭಾವನ ಮಾತೇ ಅರ್ಥವಾಗೋ ದಿಲ್ಲ.

ರಂಗ– ಖರೆ ಐತ್ರಿ ನಿಮ್ಮಾತು. ನನ್ನಂತ ಬುದ್ಧಿವಂತ ಬಡವ, ಶ್ರೀಮಂತರ ಮುಂದ ನಿಂತು, ಹಸಿವಾಗಿದೆ ಅಂತ ಅತ್ತರ, ಹೇಸ್ಗಿ ತಿಂದು ಬದುಕ್ಕೋಗು ಅಂತಾರ. ಬಡವನ ಸತ್ಯ ಶ್ರೀಮಂತರ ಕಾಲಾಗಿನ ಕೆರ ಆಗ್ಬಿ

ಟ್ಟೆತ್ರಿ. ಬರ್ತ್ನಿ. ಇಲ್ಲೆ ನಿಂತ್ರ ಬ್ರೆಕ್ಕಿಲ್ಲದ ಬಾಯಿ ಒದರ್ರಿಕೊಂತನ ಇರ್ತ್ತೇತಿ, (ಹೋಗುವನು)

ಅರವಿಂದ– ವಿಚಿತ್ರ ಮನುಷ್ಯ

ವನಜ– ಆದರೂ ವಿಚಾರವಂತ.

ಅರವಿಂದ– ಅವನ ಸುದ್ದಿ ಬಿಡು ಚಿನ್ನ. ಸಧ್ಯ ಡೆಲ್ಲಿಯಿಂದ ಬಂದವಳು, ಈ ಬಡಪ್ರೇಮಿಯನ್ನು ಮರೆಯದೆ, ಬೆರೆಯಲು ಬಂದಿರುವಿಯಲ್ಲ ?

ವನಜ– ಮರೆಯುವಷ್ಟು ತುಚ್ಛಳಾಗಿ ಕಾಣ್ತೆನೇನು ?

ಅರವಿಂದ– ಛೆಛೇ, ತುಚ್ಛಳಾಗಿ ಕಾಣ್ತಿ ಅಂತ ಹೇಳಲಿಲ್ಲ. ನಿನ್ನ ಗುಂಗಿನಲ್ಲಿ ನಾನಷ್ಟು ಹುಚ್ಚನಾಗಿದ್ದನ್ನು ಹೇಳಿದೆ. ನಿನ್ನ ಪ್ರೀತಿಯ ಬಲೆಯಲ್ಲಿ ಬಿದ್ದು ನಿಯಂತ್ರಣ ತಪ್ಪಿದ ಗೊಂಬೆಯಾಗಿದ್ದೇವೆ. ಕುಳಿತರೆ ಮನ ಕಲಕುವ ನಿನ್ನ ರೂಪ, ನಿಂತರೆ ನಿಲುವಿನ ಆಯವನ್ನೇ ತಪ್ಪಿಸುವ ನಿನ್ನ ಕಣ್ಣೋಟ. ಮಲಗಿದರೆ ಮತ್ತೆ ಮತ್ತೆ ಮರುಕಳಿಸುವ ಈ ನಿನ್ನ ಹೂನಗೆ ಒಟ್ಟು ನನ್ನ ಮನಸ್ಸನ್ನು ಕಟ್ಟಿಹಾಕಿಬಿಟ್ಟಿದೆ ಈ ನಿನ್ನ ಮುದ್ದು ಮುಖ.

ವನಜ– ಗಂಡಸಾದ ನಿಮ್ಮ ಸ್ಥಿತಿನೇ ಹೀಗಿರುವಾಗ, ಹದಿನೈದು ದಿನ ನಿಮ್ಮನ್ನಗಲಿ ಡೆಲ್ಲಿಯಲ್ಲಿದ್ದ ಈ ಹೆಣ್ಣಿನ ಪರಿಸ್ಥಿತಿ ಏನಾಗಿರಬಹುದೆಂದು ನೀವೇ ವಿಚಾರ ಮಾಡಿ.

ಅರವಿಂದ– ನನ್ನನ್ನೆಷ್ಟು ಪ್ರೀತಿಸುತ್ತಿರುವಿಯೆಂದು ನನಗ್ಗೊತ್ತು ವನಜ. ಆದರೆ ಮುಂದಾಗುವ ಆಘಾತದ ಅರಿವಿಲ್ಲದೆ ತಪ್ಪು ಮಾಡ್ತಿರುವಂತ ಭಾಸವಾಗ್ತಿವೆ.

ವನಜ– ಯಾಕರವಿಂದ್ ವಿಚಿತ್ರವಾಗಿ ಮಾತಾಡ್ತೀರಿ.

ಅರವಿಂದ– ಹೌದು ವನಜ. ಗಿಡದಲ್ಲರಳಿದ ಗುಲಾಬಿ ಹೂವಿಗೂ, ಅಕ್ಕಸಾಲಿಯಿಂದ ಅರಳಿದ ಬಂಗಾರದ ಹೂವಿಗೂ ಬಹಳ ಅಂತರವಿದೆ.

ವನಜ– ಅಂದ್ರೆ ?

ಅರವಿಂದ– ನಿಸರ್ಗ ನೇಮದಿಂದ ಅರಳಿದ ಗುಲಾಬಿ ಹೂವನ್ನು ಆಸೆಪಟ್ಟವರು ಭಯವಿಲ್ಲದೆ ಕಿತ್ಕೊಳ್ಳಬಹುದು ಆದ್ರೆ ಅಕ್ಕಸಾಲಿಯಿಂದ ಅರಳಿದ ಬಂಗಾರದ ಹೂವನ್ನು ಆಸೆ ಪಟ್ಟವರು ಅಷ್ಟು ಸುಲಭವಾಗಿ ದಕ್ಕಿಸಿಕೊಳ್ಳಲು

ಸಾಧ್ಯವಿಲ್ಲ. ಯಾಕಂದ್ರೆ, ಆ ಹೂವು ಅಕ್ಕಸಾಲಿಗೆ ದುಡ್ಡು ಕೊಟ್ಟು ಮಾಡಿಸಿದವರ ಅಧೀನದಲ್ಲಿರುತ್ತದೆ. ಮತ್ತೊಬ್ಬರು ಹಕ್ಕು ಚಲಾಯಿಸದಷ್ಟು ಭದ್ರವಾಗಿರುತ್ತದೆ.

ವನಜ– ನಾನೀಗ ನಿಮ್ಮ ದೃಷ್ಟಿಯಲ್ಲಿ ಬಂಗಾರದ ಹೂವೇ ?

ಅರವಿಂದ– ಹೌದಲ್ವೊ... ನೀನೇ ವಿಚಾರ ಮಾಡು. ನಿನ್ನನ್ನು ಬಂಗಾರದ ಹೂವಾಗಿ ಅರಳಿಸಿ, ಬೆಳೆಸಿದವರು ನಿನ್ನ ಸೋದರ ಮಾವ ಭೋಜರಾಜರು. ಅಂದಾಗ, ತಮ್ಮ ಮಗನಿಗೆ ಕೊಡುವ ವಿಚಾರ ಇಟ್ಕೊಂಡೇ ಅರಳಿಸಿರಬೇಕಲ್ಲವೇ ?

ವನಜ– ನಿಮ್ಮ ಕಲ್ಪನೆ ತಪ್ಪಾಗಿದೆ. ನಾನು, ಅವರ ಮಗ ವಿಕ್ರಂ ಬಾಲ್ಯದಿಂದ ಕೂಡಿ ಆಡಿ ಬೆಳೆದವರು. ಹೀಗಾಗಿ ನನಗವನ ಮೇಲೆ ಸೋದರ ಮಮತೆ ಇದೆಯೇ ಹೊರತು, ಮದುವೆಯಾಗುವ ಮನಸ್ಸಿಲ್ಲ. ಇದಲ್ಲದೆ ನಮ್ಮಿಬ್ಬರ ಮದುವೆ ವಿಷಯವಾಗಿ ನಮ್ಮಾವನವರು ಇದುವರೆಗೂ ಚಕಾರವೆತ್ತಿಲ್ಲ. ಒಂದ್ವೇಳೆ ಆ ವಿಚಾರ ಇದ್ರೂ ನಮ್ಮಿಬ್ಬರ ಪ್ರೇಮದ ವಿಷಯ ತಿಳಿದ್ರೆ ಖಂಡಿತ ನನ್ನಾಸೆಗೆ ಅಡ್ಡ ಬರೋಲ್ಲವರು.

ಅರವಿಂದ– ನನ್ಮೇಲೆ ಅಷ್ಟೊಂದು ಪ್ರೀತಿಯಿದೆಯೇ ?

ವನಜ– ನಿಮಗನುಮಾನವಿದೆಯೇನು ?

ಅರವಿಂದ– ಅನುಮಾನ... ಅನಿವಾರ್ಯ

ವನಜ– ನಾನಿಷ್ಟು ಬಿಚ್ಚಿ ಹೇಳಿದ್ರೂ ಅನುಮಾನವೇ ?

ಅರವಿಂದ– ಹೌದು ವನಜ. ನಿನ್ನಾಸ್ತಿಯನ್ನು ದಕ್ಕಿಸಿಕೊಳ್ಳುವ ಆಸೆ ಇದ್ದವರು, ನಿನ್ನನ್ನು ನನ್ನಿಂದ ದೂರ ಮಾಡಬಹುದೆಂಬ ಸಂಶಯ ಕಾಡ್ತಾಯಿದೆ.

ವನಜ– ಅರ್ಥವಾಯ್ತು. ನಮ್ಮಾವನ ಬಗ್ಗೆ ಸಂಶಯವಿದೆ ನಿಮಗೆ. ಇದರ ನಿವಾರಣೆಗಾಗಿ ಅವರೆದುರಲ್ಲೇ ನನ್ನಾಸ್ತಿಯನ್ನು ನಿಮ್ಮೆಸರಿಗೆ ಮಾಡಸ್ತೀನಿ. ಸರಿ ತಾನೆ ?

ಅರವಿಂದ– ಆಸ್ತಿಯ ಆಸೆ ನನಗಿಲ್ಲ. ಅದು ನಿನ್ನೆಸರಿಗಿದ್ರೇನು, ನನ್ನೆಸರಿಗಿದ್ರೇನು ಒಟ್ಟು ನಿನ್ನ ನಂಬಿಕೆ ಸುಳ್ಳಾಗದಿದ್ರೆ ಸಾಕು.

ವನಜ— ಆ ನಂಬಿಕೆಯ ಸತ್ವ ಪರೀಕ್ಷೆಗಾಗಿಯಾದರೂ ನೀವು ನನಗೆ ತಾಳಿ ಕಟ್ಟುವ ಮುನ್ನ ನನ್ನಾಸ್ತಿಗೆ ಒಡೆಯರಾಗ್ಬೇಕು. ಇದರಿಂದ ನಿಮ್ಮ ಸಂಶಯವೂ ನಿವಾರಣೆಯಾಗುತ್ತದೆ, ನನ್ನ ಮನಸ್ಸಿಗೂ ನೆಮ್ಮದಿಯಾಗುತ್ತದೆ. ಒಪ್ಪಿಗೆ ತಾನೆ ?

ಅರವಿಂದ— ವನಜ, ನನಗೆ ಆಸ್ತಿ ಮೇಲೆ ಆಸೆ ಇಲ್ಲ...

ವನಜ— ನನಗ್ಗೊತ್ತಿದೆ. ಆದ್ರೆ ನನ್ನ ನಂಬಿಕೆಯ ನಿರ್ಧಾರಕ್ಕಾದ್ರೂ ನೀವಿದಕ್ಕ ಒಪ್ಲೇಬೇಕು.

ಅರವಿಂದ— ಆದ್ರೂ ವನಜ...

ವನಜ— ಒಪ್ಪದಿದ್ರೆ ನನ್ನಾಣೆಯಾಗಿದೆ.

ಅರವಿಂದ— ಛೆ ಛೇ, ಏನ್ಮಾಡ್ಬಿಟ್ಟೆ ವನಜ. ಆಣೆಯಿಟ್ಟು ಇಕ್ಕಟ್ಟಿನ ಪರಿಸ್ಥಿತಿಗೆ ಸಿಕ್ಕಿಸಿಬಿಟ್ಟೆಯಲ್ಲ. ಆಯ್ತು ನಿನ್ನ ಮನಸ್ಸಿನ ಆನಂದಕ್ಕಾಗಿ ಯಾದ್ರೂ ಒಪ್ಕೊಳ್ತೀನಿ.

ವನಜ— ಈಗ ಮನಸ್ಸು ಹಗುರಾಯ್ತು.

-ಪದ-

(ಪದ ನಡೆಯುವಾಗಲೇ ರಂಗ ಬರುವನು)

ರಂಗ— ಕಟ್! ಫಸ್ಟ್ ಶಾಟ್ ಮುಗಿಯಿತು, ನೆಕ್ಸ್ಟ್ ಶಾಟ್‌ಗೆ ರೆಡಿಯಾಗ್ರಿ.

ಅರವಿಂದ— ಇಷ್ಟು ಬೇಗ ಯಾಕ ಬಂದೆಪಾ ?

ರಂಗ— ವನಜಮ್ಮಾರ, ದೊಡ್ಮಾವ, ಸಣ್ಮಾವರು ಬರ್ತಾ ಅದಾರ್ರಿ.

ವನಜ— ಮಾವನವರು ಬಂದ್ರಾ.... ?

ಅರವಿಂದ— ವನಜ ನಾನು...

ವನಜ— ಗಾಬರಿಯಾಗ್ಬೇಡಿ. ಈ ವಿಷಯ ಇಂದಲ್ಲ ನಾಳೆ ಅವರಿಗೆ ಗೊತ್ತಾಗ್ಲೇ ಬೇಕು. ಅದಿವತ್ತೇ ಗೊತ್ತಾಗ್ಲಿ.

ರಂಗ— ಇವರ ಮಾತು ಖರೇರಿ. ಲವ್ವಿನ ಕೇಸು ದೌಡ್ ಪಬ್ಲಿಕ್ ಆಗಿ

ಬಿಡ್ಬೇಕು. ಇಲ್ಲಾಂದ್ರ ಮುಂದ ಬಾಳ ಡೇಂಜರು.

(ಭೋಜರಾಜ ವಿಕ್ರಂ ಬರುವರು)

ಭೋಜರಾಜ– ವನಜ...

ವನಜ– ಬನ್ನಿ ಮಾವ, ಇವರು...

ಭೋಜರಾಜ– ಡಾ॥ ಅರವಿಂದಂತ ನನಗೊತ್ತಮ್ಮ.

ಅರವಿಂದ– ಸಾರ್ ನಾನು...

ಭೋಜರಾಜ– ನೀವೇನೂ ಹೇಳ್ಬೇಕಾಗಿಲ್ಲ ಡಾಕ್ಟ್ರೆ. ನನ್ನ ಸೂಕ್ಷ್ಮ ಮೆದುಳು ಎಲ್ಲವನ್ನೂ ಗ್ರಹಿಸುತ್ತದೆ. ನನ್ನನ್ನು ಕಂಡಾಗ ಗೌರವದಿಂದ ಕೈ ಮುಗಿಯುವ ನೀವು, ನನ್ನ ಸೊಸೆಯನ್ನು ಮದುವೆ ಆಗ್ತೀನಿ ಅಂತ ಒಂದ್ಮಾತು ತಿಳಿಸಿದ್ರೆ, ಇಷ್ಟೊತ್ತಿಗೆ ವರ್ಷದ ಮಗು, ನಮಗೆ ಹರ್ಷ ತರಲು ಈ ಭೂಮಿಗೆ ಬಂದಿರ್ತಿತ್ತು.

ಅರವಿಂದ– ನೀವು ತುಂಬಾ ತಮಾಷೆಯಾಗಿ ಮಾತಾಡ್ತಿರಿ ಸಾರ್.

ರಂಗ– ಆ ತಮಾಷ್ಯಾಗೆಂಥಾ ಗೂಟೈತಂತ ಈ ಮಗನಿಗೆ ಗೊತ್ತೇ ಇಲ್ಲ.

ವನಜ– ಮಾವ, ನಾನಿವರನ್ನ ಮದುವೆಯಾಗುವ ವಿಷಯ...

ಭೋಜರಾಜ– ನನಗ ವಿಷವಾಗ್ಬಹುದಂತ ತಿಳಿದಿದ್ದಿಯೇನಮ್ಮ? ಖಂಡಿತ ಇಲ್ಲಮ್ಮ. ಬುದ್ಧಿವಂತೆಯಾದ ನನ್ನ ಸೊಸೆ, ಹದ್ದು ಮೀರುವುದಿಲ್ಲ ವೆಂದು ನನಗೊತ್ತಿದೆಯಮ್ಮ. ನನ್ನ ಕಣ್ಣು ತಪ್ಪಿಸಿ ಬಂದಿದ್ದ ಈ ಮುದ್ದಿನ ಪಾರಿವಾಳ, ಗಿಡುಗನ ಬಾಯಿಗೆ ಸಿಕ್ಕಿರಬೇಕೆಂದು ಗಾಬರಿಯಾಗಿದ್ದೆ. ಆದ್ರದು ನನ್ನಿಚ್ಛೆಯ ಹುಡುಗನ ಬಲೆಯಲ್ಲಿ ಬಿದ್ದಿರುವುದನ್ನು ಕಂಡು, ಹಾಲು ಕುಡಿದಷ್ಟು ಸಂತೋಷವಾಗಿದೆಯಮ್ಮ.

ವಿಕ್ರಂ– ಹೌದು ವನಜ. ನಿನ್ನ ಶ್ರೇಯಸ್ಸೇ ನಮ್ಮ ಶ್ರೇಯಸ್ಸು. ನಗು ವಿನ ತಾರೆಯಿಂದ ಸದಾ ಮಿನುಗುತ್ತಿರಬೇಕು ಈ ನಿನ್ನ ಮುಖ. ಅದೇ ನಮಗೆ ಪರಮ ಸುಖ.

ರಂಗ– ಇನ್ನ ಈ ಮಗ ಶುರುಮಾಡಿದ ಷ್ಟೈಲಾಗ. ನನಮಕ್ಳು ಚಂದ ಪ್ರಾಕ್ಟೀಸ್ ಮಾಡಿಕೊಂಡೇ ಬಂದಾರ.

ವಿಕ್ರಂ– ಡ್ಯಾಡಿ, ಸುಮ್ಮನ ಮಾತು ಬೆಳೆಸಿ, ಕಾಲ ಯಾಕ ದಂಡ ಮಾಡ್ತೀರಿ. ಆದಷ್ಟು ಬೇಗ ಮುಹೂರ್ತ ನೋಡಿ ಮುಗಿಸಿಬಿಡಿ... ಇವರ ಮದುವೆನ. ಮಾತಾಡುವ ವಿಷಯ ಸಾಕಷ್ಟಿದೆ, ಬನ್ನಿ ಹೋಗೋಣ.

ಭೋಜರಾಜ– ಸರಿ, ನಡೀರಿ. (ರಂಗನ ಹೊರತು ಎಲ್ಲರೂ ಹೋಗುವರು) ರಂಗಾ.

ರಂಗ– ಇಲ್ಲೆ ಅದಿನಿ.

ಭೋಜರಾಜ– ಕಾಣುತ್ತದು. ಕಾರು ಸ್ಟಾರ್ಟ್ ಮಾಡು ನಡಿ.

ರಂಗ– ಸಾಧ್ಯಿಲ್ರಿ. ಸಣ್ಣ ಕಾರದು. ಐದು ಜನಕ್ಕ ಇಕ್ಕಟ್ಟಾಗುತ್ತ.

ಭೋಜರಾಜ– ಅದಕ್ಕ ನಾನೇನ್ಮಾಡ್ಲಿ ?

ರಂಗ– ಹವಾ ತಿನಕೊಂತ ನಡಕೊಂಡು ಬರ್ರಿ.

ಭೋಜರಾಜ– ನನಮಗನೆ, ನಾನು ನಡಕೊಂಡು ಬರಬೇಕಾ ?

ರಂಗ– ಜಗಾದ ಅಭಾವ. ಯಾರರ ಒಬ್ರು ನಡೀಬೇಕು.

ಭೋಜರಾಜ– ನೀನೇ ನಡಕೊಂತ ಬಾ ಹಂಗಾರ. (ಹೋಗುವವನು)

ರಂಗ– ಹೊಗ ಕತ್ತಿಕಿರುಬ ನನ್ನ ಮಗನೆ ಇವಕಾರಿವರು ಟೈಂ ಬಾಂಬಿದ್ಧಂಗ. ಯಾವಾಗ ಸಿಡಿತಾರಂತ ಹೇಳಾಕ್ಬ ಬರಂಗಿಲ್ಲ. ಈ ಮಕ್ಳ ಹಿಸ್ಟ್ರಿ ಪಾಪ ವನಜಮ್ಮಗೇನೂ ಗೊತ್ತಿಲ್ಲ. ನಾನರ ಹೆಂಗ ತಿಳಸ್ಬೇಕನ್ನುದ್ಧ ತಿಳದಂಗಾಗೇತಿ. (ವಿಚಾರಿಸಿ) ನೋಡೋಣ ದೇವ್ರದಾಸ. (ಹೋಗುವನು)

## ಏಳನೆಯ ದೃಶ್ಯ

### ರಸ್ತಾ

(ಕೊರಳಲ್ಲಿ ಕ್ಯಾಮರ ನೇತು ಹಾಕಿಕೊಂಡ ಜಗ್ಗು ಬರುವನು)

ಜಗ್ಗು– ಅದೃಷ್ಟ ಕೂಡಿ ಬಂದವನು, ಅರೆಕ್ಷಣದಲ್ಲಿ ಅರಸನಾಗಿ ಬಿಡಬಹುದು. ಹೆಸರಿಗೆ ಕಂಪೌಂಡ್ರಾಗಿ, ಅರವಿಂದ ಡಾಕ್ಟ್ರಿಗೆ ದಿನಕ್ಕೊಂದು ಹೆಣ್ಣನ್ನು

ಸಪ್ಲೆ ಮಾಡ್ತಿರುವ ನನಗೆ ದುಡ್ಡಿನ ಹೊಳೆಯಲ್ಲೆ ಈಜಾಡುವ ಕಾಲ ಬಂದಿದೆ. ಈ ಕ್ಯಾಮ್ರಾದಲ್ಲಿ ಅರವಿಂದರ ರತಿ ಮನ್ಮಥ ಕ್ರಿಡೆಯನ್ನು ಮಾಡಿಸಿ ಕೊಟ್ರೆ ಇಪ್ಪತ್ತೈದು ಸಾವಿರ ರೂಪಾಯಿ ಕೊಡ್ತಿವಂತ ಭೋಜರಾಜ ಹಾಗವರ ಮಗ ವಿಕ್ರಂ ಹೇಳಿದ್ದಾರೆ. ತಲೆ ಹಿಡುಕತನ ಬೇಸತ್ತಿರುವ ನನಗೆ ಅದರಿಂದ ಬಿಡುಗಡೆ ಹೊಂದಿ ಹೊಸ ಜೀವನ ಪ್ರಾರಂಭಿಸಲು ಇದೇ ಸುಸಂದರ್ಭ ಆದ್ರೆ ಒಂದು ಫೋಟೋಕ್ಕೆ ಅಷ್ಟು ದುಡ್ಡು ಕೊಡಬೇಕಾದ್ರೆ ಒಳಗಿನ ಹಕೀಕ್ಹತ್ತೇನಿರ್ಬೆಕು? ಏನಿದ್ರೇನು ನನಗ ದುಡ್ಡು ಬಂದ್ರ ಸಾಕು ದೂರದ್ದೂರಿಗೆ ಹಾರಿಬಿಡ್ತೆನಿ ಇವತ್ತೊಂದು ದಿನ ಅರವಿಂದರ ಸಲುವಾಗಿ ಹೆಣ್ಣು ಹುಡುಕ್ಬೇಕಾಗಿದೆ. (ಹೋಗುವನು)

ಮೂರ್ತಿ ಬರುವನು

ಮೂರ್ತಿ—ಆ ಬ್ರಹ್ಮ ನನ್ಸಲುವಾಗಿ ಹೆಣ್ಣರ ಸೃಷ್ಟಿ ಮಾಡ್ಯಾನಿಲ್ಲೋ ಅಂತೀನಿ. ಈ ಮಾರಿ ನೋಡಿದ್ರ ನಾರಿಮಣಿಯರು ದೂರ ಸರಿತಾರಲ್ಲ ಯಾಕ? (ವಿಚಾರಿಸಿ) ಅಂ. ತಿಳಿತು. ಅಪರೂಪದ ಸುಂದರ, ನನ್ನ ಲವ್ ಮಾಡೋ ಯೋಗ್ಯತೆ ತಮಗಿಲ್ಲಂತ ಹಂಗ್ಮಾಡ್ತಾರವರು

(ಲಿಲ್ಲಿ ಒಳಗಿನಿಂದ ಮಾತಾಡುತ್ತಲೇ ಬರುವಳು)

ಲಿಲ್ಲಿ—ಯಾಕಲೇ ನನ ಮಗನೇ ಹೆಣ್ಣಂದ್ರ ಸಂತ್ಯಾಗ ಮಾರೋ ಹಣ್ಣಂತ ತಿಳಿದಿಯೇನು? ಗುರ್ತ ಖೂನಿಲ್ದವಳಿಗೆ ಕಣ್ಣು ಹೊಡ್ದು ಮತ್ತ ಮ್ಯಾಲ ಬಣ್ಣದ ಮಾತಾಡ್ತಿ ಮಗನ? ಇನ್ನೊಮ್ಮೆ ನನ್ನ ಸುದ್ದಿಗ್ಬಂದ್ರೆ ಎದೆಗೊದ್ದೇನ.

ಮೂರ್ತಿ—ಯಾರೆದಿಗೆ ಒದಿತಿ?

ಲಿಲ್ಲಿ—ಯಾರಿಗೊದಿತೇನಂತ ನನಗ ಗೊತ್ತಿಲ್ಲ.

ಮೂರ್ತಿ—ನೀ ಯಾರಿಗರ ಒದಿ ಮಾರಾಯ್ತಿ. ಆದ್ರ ನಾ ಕಟ್ಟಿದ ಆಶಾ ಗೋಪುರಕ್ಕೆ ಮಾತ್ರ ಒದಿಬೇಡ. ಯಾಕಂದ್ರ ನಾ ಹುಟ್ಟಿದ್ದೆ ನಿನಗಾಗಿ ಬದುಕಿರೊದೆ ನಿನ್ಕೂಡ ಲವ್ ಮಾಡುವುದಕ್ಕಾಗಿ.

ಲಿಲ್ಲಿ—ಆದ್ರ ನಾ ಹುಟ್ಟಿದ್ದು ಆ ರಂಗನಿಗಾಗಿ ಬದುಕಿರೋದು ನಿನ್ನಂತವ ಹಲ್ಲು ಮುರಿಯುವುದಕ್ಕಾಗಿ.

ಮೂರ್ತಿ–ಅಯ್ಯ ಕಟುಕ ಹೆಣ್ಣೆ ನಿನ್ನೊಕ್ಕಡ ಪ್ರೇಮಗೀತೆ ಹಾಡ್ಬೇಕಂತ ಹಾರುಪೇರ್ರ್ಸಿಕೊಂಡು ಬಂದಿರ್ತಿನಿ, ನೀನಿಲ್ಲಿ ಹಲ್ಮುರಿತಿನಿ ಮುಸುಡಿ ಜಜ್ಜುತಿನಿ ಅಂತಿ. ಅಷ್ಟಕ್ಕ'ರ ಬಿಡ್ತಿಯೆನು? ಹೊಳ್ಳ ಮಳ್ಳ ಆ ರಂಗ್ಯಾನ ಹೆಸರು ತೆಗೆದು ಇಲ್ಲದ ಸಂಕಟ ಹಚ್ಚತಿ. ಅವನೌನ ನಿನಗೇನರ ಮಾಟ ಮಾಡ್ಯಾನೇನು?

ಲಿಲ್ಲಿ– ಹೌದು ನನ್ನ ಮನಸ್ಸು ಅವನ್ನ ಬಿಟ್ಟು ನಿನ್ನಂತ ಲುಚ್ಚ್ಯಾನ ಕಡೆ ಹರಿದಂಗ ಮಾಡ್ಯಾನ.

ಮೂರ್ತಿ– ನಾ ಲುಚ್ಚಾ ಆ ಮಗ ಸಾಚಿ ಅಲ್ಲ? ಲಿಲ್ಲಿ ಆ ಮಗನ್ನ ಗಂಡ್ಸಂತ ತಿಳಿದಿಯೇನು? ಹುಚ್ಚಿ ಅವನ್ನ ಬೆನ್ನತ್ತ್ಯಾದು, ಮುದಿ ಎತ್ತು ಹೂಡಿ ದಿಬ್ಬ ಹತ್ತನ್ನಾದು ಎರಡೂ ಒಂದ.

ಲಿಲ್ಲಿ–ಮುದಿ ಎತ್ತು ಅವನಲ್ಲ ನೀನು ಅವನ ತಾಕತ್ತು ನಿನಿಗ್ಯಾವ ಕಾಲಕ್ಕೆ ಬರ್ಬೇಕೋ? ನಿನ್ನಂಗ ಕಂಡ ಕಂಡಲ್ಲಿ ಬೇಲಿ ಹಾರಿ, ಮಾರಿ ಸೊರಗಿಸಿ ಕೊಂಡಿಲ್ಲವನು. ಹೆಣ್ಣಿನ ಬಗ್ಗೆ ಭಯ ಭಕ್ತಿ ತೋರಿ ತಾಜಾತನ ಉಳಿಸಿಕೊಂಡು ಬಂದಿರೋ ಭೂಪತಿ ಗಂಡವನು

ಮೂರ್ತಿ–ಪೂರಾ ತಿದ್ದೇ ಹೊಗ್ಬಿಟ್ಟಾನ ಈಗ ಇಕ್ಕಿನ್ನ ಯಾವ ನಮೂನಿ ತಲಿ ಕೆಡಸ್ಯಾನಲ್ಲ ಅಂತೀನಿ. ಮಾತೆತ್ತಿದ್ರ ಆ ಮಗನ ಹೆಸರು ತಗಿತಾಳಲ್ಲ. ಇಕಿ ಮೈಯಾಗೆಲ್ಲರ ಮಿಷಿನ ಕುಂದರ್ರಿ ಕಳಿಸಿರಬೇಕು.

ಲಿಲ್ಲಿ–ಹೌದು ನನ್ನ ಹೃದಯದಾಗ ಪ್ರೇಮ ಅನ್ನೋ ಮಿಷಿನ್ ಕುಂದು ರ್ರಿಸಿದ್ದಾನೆ ನಿನ್ನಂತ ಕಾಮದ ಮಿಷಿನ್ನಿಗಿಲ್ಲಿ ಜಗಾನೇ ಇಲ್ಲ.

ಮೂರ್ತಿ– ನನ್ನೇನೂ ಕಸಕ್ಕಿಂತ ಕಡಿ ಮಾಡಿ ಮಾತಾಡ್ತಿಯಲ್ಲ.? ಈ ವ್ಯಕ್ತಿಯಾರು? ಕಿಮ್ಮತ್ತೆಷ್ಟೈತಿ? ಮನಸ್ಸು ಹೂವೋ,ಹಾವೋ ನಿಷ್ಠೂರವಾಗಿ ಮಾತಾಡಿದ್ರ ಈ ಪ್ರೇಮಿಗೆ ಎಂತ ಆಘಾತಾಗುತ್ತ? ಆಘಾತಾತಂತ್ರ ಈ ಪ್ರಾಣಿ ಬದುಕುತ್ತೋ ಇಲ್ಲೋ? ಸ್ವಲ್ಪರ ವಿಚಾರ ಮಾಡಂಗಿಲ್ಲೇನು?ನಿನಗೇನರ ನನ್ನ ಗಂಡಸ್ತನದ ಬಗ್ಗೆ ಸಂಶ್ಯಾ ಐತೆನು? ಹಂಗಿದ್ರ ಸ್ಯಾಂಪಲ್ಲಿಗರ ಮದಿವ್ಯಾಗಿ ನೋಡು

ಲಿಲ್ಲಿ–ಸ್ಯಾಂಪಲ್ಲಿಗೆ ಮದಿವ್ಯಾಗ್ಬೇಕೆನು? (ಬಳೆ ಏರಿಸುತ್ತಾ) ಬಾ ಹಂಗಾರ.

ಮೂರ್ತಿ– ಎದಕ ಕಟ್ಟಿಸಿಕೊಳ್ಳಾಕ? ಬ್ಯಾಕ ಅವತ್ತು ಕಟಿದುದೆ ರಗಡಾಗೇತಿ. ಮತ್ತೀಗ ಮಳ್ಳ ಮಾಡಿ ಹತ್ರಕ್ಕ ಕರೆದ ಬಂಗಾರದಂತ ನನ್ನ ಮೂಗಿಗೆ ಬಾಯ್ಹಾಕಿ ಕಡದ್ರ ನನ್ನ ಗತಿ ಏನಾಗುತ್ತ?

(ರಂಗ ಬರುವನು)

ರಂಗ–ಕ್ಯಾರೆ ದೋಸ್ತ್? ಏನ ನಡೆಸಿಯಲ್ಲ. ಲಿಲ್ಲಿ ಕೂಡ ಲಲ್ಲೆನ?

ಮೂರ್ತಿ–ಬಂದ್ಯಾ ಬಾ ನೀನೊಬ್ಬಾಂವಕ ವ್ಯಕ್ತಿ ಇವಳೌಳು ಇಕ್ಯೋದು ನಮೂನಿ ಕಾಡ್ತಾಳ ನಿನೊಂದು ನಮೂನಿ ಕಾಡ್ತಿ. ದೊಡ್ಡ ಕರ್ಮಾತಲೆ ನನ್ನ ಬಾಳೆವು ನಿನ್ನ ಕಾಲಾನವು ಚಪ್ಲಿನರ ಕೊಡಲೆ ನನ್ನ ಹಣೆಬರಕ್ಕೆ ನಾನು ಹೂಡ್ಕೊಂತಿನಿ

ರಂಗ– ದಯವಿಟ್ಟು ಕ್ಷಮಿಸು ಮಿತ್ರ. ನನ್ನ ಚಪ್ಲಿ ಹೊಸವದಾವು ಹೊಡ್ಕೊತೀನಿ ಅಂತ ಮೆಟಿಗೊಂದು ಹೋದ್ರ ನಾಯೇನು ಮಾಡ್ಲಿ?

ಮೂರ್ತಿ–ಅಂದ್ರ ಹಳೆವಿದ್ದಿದ್ರೆ...?

ರಂಗ–ನಿನ್ನ ಕೈಗ ಸೈತ ಕೊಡ್ತಿದ್ದಿಲ್ಲ. ಸಾಕನ್ನೋತನ ನಾನ್ನ ಕಟಿತ್ತಿದ್ದೆ

ಮೂರ್ತಿ–ಇವರೌರ ನನ್ನ ಕಟಿಯಾಕ ತುದಿಗಾಲಾಗ ನಿಂತಾರಿಬ್ರೂ

ರಂಗ–ಲಿಲ್ಲಿ ಇವನ್ಯಾಕ ಗಾಂಜಾ ಸೇರಿದವರಂಗ ಮಾಡ್ತದಾನ? ನೀಯೇನರ ಮಾಡ್ದೇನು?

ಲಿಲ್ಲಿ–ನಾಯೇನು ಮಾಡಾಕ್ಹೋಗ್ಲಿ? ಇದಕ್ಕ ಹೆಣ್ಣಿನ ಹುಚ್ಚು ತಲಿಗೇರಿ ಬಿಟ್ಟಾತಿ ಒಂದಕತಿ ಗಂಟು ಬಿದ್ದಾನ ಲವ್ ಮಾಡಂತ.

ರಂಗ– ತಪ್ಪೇನೈತಿ ನೀ ನನಗ ಗಂಟು ಬಿದ್ದಂಗ ಇವನು ನಿನಗ ಗಂಟು ಬಿದ್ದಾನ. ಅಲ್ಲೆ ಅನಾದಿ ನಿನಗ ಸ್ವಲ್ಪರ ಬುದ್ಧೈತೆನು?

ಲಿಲ್ಲಿ–ಯಾಕ?

ರಂಗ–ನನಗೆ ಗಂಡು ಬೇಕಾಗಿತಿ ಈ ಮಗನಿಗಂತೂ ಅರ್ಜಂಟ್ ಹೆಣ್ಣು ಬೇಕಾಗಿತಿ ಇಬ್ರುದ ಗುಂಗು ಒಂದ ಐತೆಂದಾಗ ಜೋಡಿ ಬರೋಬ್ಬ ಆಗದಿಲ್ಲೆನು

ಮೂರ್ತಿ–ಹೆಳಲೇ ರಂಗ. ಇಕಿ ಸಲುವಾಗಿ ನಿದ್ದಿಲ್ಲದಂಗಾಗೇತಿ ಅಂತ ತಿಳಿಸಿ ಹೇಳಲೇ

ರಂಗ– ನೋಡು, ನಿನ್ನ ಸಲುವಾಗಿ ಎಷ್ಟು ತಲಿ ಕೆಡಿಸಿಕೊಂಡಾನ. ನೀ ಹೂಂ ಅಂದ್ರೆ, ತಾಳಿ ಸೈತ ಕಟ್ಟೂ ವಿಚಾರ ಮಾಡುದಿಲ್ಲ.

ಮೂರ್ತಿ– ಮೊದಲು ಮಕ್ಕಳಡಿಯಾಕ್ಹಚ್ಚತೇನಿ. ಯಾಕ ? ನನ್ನ ಗಂಡಸ್ತನ ನಿನಗ ಖಾತ್ರಿ ಆಗ್ಬೇಕಲ್ಲ.

ರಂಗ– ಎಷ್ಟು ಘಾಸ್ಟ ಆದಾನ ನೋಡು ಮಗ. ಇವನ ಅವಸ್ರ ನೋಡಿದ್ರೆ, ಮೂರು ತಿಂಗ್ಳಿಗೆ ಒಂದ್ರಂಗ, ವರ್ಷಕ್ಕ ನಾಕ ಮಕ್ಕನ್ನ ಹುಟ್ಟಸ್ತಾನ ಕಾಣತ್ತ.

ಮೂರ್ತಿ– ಒಂದ್ಹ ಛಾನ್ಸ್ ಸಿಗಲಲೇ ರಂಗ್ಯಾ...

ರಂಗ– ಮೂರ್ಹ ತಿಂಗ್ಳಿಗೆ ನಾಕೂ ಬೇಕಾರ ಹುಟ್ಟಸ್ತಾನ. ಒಂದು ನಮೂನಿ ಫಾರಂ ಕೋಳಿ ತತ್ತಿ ಕಾವು ಕೊಡೋ ಕರೆಂಟಿದ್ದಂಗ ಈ ಮಗ. ಇಂಥಾ ಹುರುಪಿನ ಮನುಷ್ಯಾನ್ನ ಬಿಟ್ಟಿದಿ. ಚಳಿಗಾಲಕ್ಕೊಂದ್ಸಲ ಗಂಡ್ಸಾಗೊ ನನ್ನ ಬೆನ್ನತ್ತಿದಿ. ಇನ್ನರ ನನ್ನ ಸುದ್ದಿ ಬಿಡು.

ಮೂರ್ತಿ– ಸ್ಯಾಪಲ್ಲಿಗುಳಿದಿರೋ ಈ ಮನ್ಮಥ ರಾಜನ್ನಿ ಲವ್ ಮಾಡು.

ಲಿಲ್ಲಿ– ನಿನ್ನ ಲವ್ ಮಾಡುದಿಲ್ಲ, ಹತ್ರ ಬಂದ್ರ ಮೈ ನೋವು ಮಾಡ್ತೀನಿ.

ಮೂರ್ತಿ– ನೋಡಲೇ ರಂಗ್ಯಾ ಹೆಂಗ್ ಮಾತಾಡ್ತಾಳೀಕಿ.

ರಂಗ– ಅಕಿಗೆ ನಿನ್ನ ಮ್ಯಾಲ ಪ್ರೀತಿ ಜಾಸ್ತಿ ಆಗಿ, ತಡಕೊಳ್ಳಾಕ ಆಗದಿದ್ದಕ್ಕ, ಈ ನಮೂನಿ ಸಿಟ್ಟಿಲೆ ಮಾತಾಡ್ತಾಳ.

ಮೂರ್ತಿ– ನೀನೂ ಮಗ ನನ್ನ ಹೆಣ ಹೊರಾಕ ಬಂದೀದಿ. ಅಲ್ಲಲೇ ಪ್ರೀತ್ಯಾವುದು, ಸಿಟ್ಯಾವುದು ತಿಳಿಯದಿಲ್ಲ ನನಗ? ನನ್ನ ಮ್ಯಾಲ ಪ್ರೀತಿ ಹೆಚ್ಚಾಗಿಲ್ಲಿಕಿಗೆ, ಯಾವಾಗ ನನ್ನ ದಿಗೆ ಒದ್ದೇನನ್ನೋ ಕಿಚ್ಚು ಹೆಚ್ಚಾಗೇತಿ.

ರಂಗ– ಇಕಿ..., ನಿನ್ನೊ ದಿತಾಳ? ಅಷ್ಟು ದಮ್ಮ ತೆನಿಕಿಗೆ? ಹಂಗಾರ್ಲೇಗ

ಒದಿತಾಳ ಒದಿಲಿ ನಾನೂ ನೋಡೆ ಬಿಡ್ತೀನಿ.ಯೇ ಲಿಲ್ಲಿ ಒದಿತಿಯಾ? ಒದಿಯಾ ಹೆಂಗ ಒದಿತಿ ನೋಡಾನ?

ಮೂರ್ತಿ– ರಂಗ್ಯಾ, ನಿನ್ನ ಪಾದ ಜೋಡ್ಸಲೆ ನಮಸ್ಕಾರ ಮಾಡ್ತೀನಿ. ಅಲಾ ಮಗನ, ನೀನೂ ಒಳ ಮುಚುಗದಿಯಾಲೆ ಇಕಿ ಕೈಯಾಗ ನವ್ನೊದಸಾಕ ಎಷ್ಟರ ಪ್ರಯತ್ನ ನಡಸಿಯಲ್ಲಲೇ.

ಲಿಲ್ಲಿ– ಸುಮ್ಮನ ಯಾಕ ಒದ್ದಾಡ್ತಿಯೋ ಮೂರ್ತಿ? ಮುತ್ತಿನಂತ ಮಾತ್ಹೇಳ್ತೀನಿ ಕೇಳು. ಹೆಣ್ಣಿಗೆ ಬ್ಯಾಡ ಅನಿಸಿದ್ದು ಅಮೃತ ಇದ್ರೂ ಅದವ ಳಿಗೆ ವಿಷ ಇದ್ದಂಗ. ಬೇಕನಿಸಿದ್ದು ಕಸ ಇದ್ರೂ, ಅದಕಿಗೆ ಸಿಹಿ ರಸ ಇದ್ದಂಗ.

ಮೂರ್ತಿ– ನಾನೀಗ ವಿಷ ಇದ್ದಂಗ?

ಲಿಲ್ಲಿ– ತಿಪ್ಪಿಗೆ ಚೆಲ್ಲಿದ ಕಸ ಇದ್ದಂಗ.

ಮೂರ್ತಿ– ಶಿವ, ಶಿವಾ, ನಾಚಿಕಿ, ಮಾನ, ಮರ್ಯಾದಿದ್ದ ಗಂಡ್ಸಾ ಗಿದ್ರೆ, ಇಲ್ಲೆ ಉರ್ಲು ಹಾಕ್ಕೊಂತಿದ್ದ.

ಲಿಲ್ಲಿ– ಮತ್ತ ನೀನು?

ಮೂರ್ತಿ– ಈ ಮೂರೂ ಬಿಟ್ಟೇ ನಿನ್ನ ಬೆನ್ನಹತ್ತೀನಿ. ಅಂದಾಗ ಸಾಯೂ ವಿಚಾರ ದೂರುಳಿತು. ಮಗನ ರಂಗ್ಯಾ. ನಮ್ಮ ಪ್ರೇಮಕ್ಕ ನೀನೇ ಅಡ್ಡ ಗ್ಲೋಡೆ. ನೀನಾಗಿ ನೀನ ಇಕಿ ನನ್ನ ಪ್ರೀತಿ ಮಾಡುವಂಗ ಮಾಡಿದಿ ಛಲೋ ಆತು. ಇಲ್ಲಾಂದ್ರೆ ನಿನ್ನೆಸ್ಟರ್ಲೆ ಚೀಟಿ ಬರ್ದಿಟ್ಟು ಹೊಳಿ ಹಾರ್ತೀನಿ ಮಗನ, ಹುಷಾರಿ. (ಹೋಗುವನು)

ರಂಗ– ನೋಡು, ನಿನ್ನ ಸಲುವಾಗಿ ಹೊಳಿ ಹಾರಿ, ನನ್ನ ಜೈಲಿಗ ಕಳ್ಸಾಕ ತಯಾರಾದ ಮಗ. ಅದಕ ಸುಮ್ಮನ ಅವನ್ನ ಮದಿವ್ಯಾಗು ನಾನ ಉಳಿತಿನಿ, ನಿನಗೂ ಪುಣ್ಯ ಬರುತ್ತ.

ಲಿಲ್ಲಿ– ನನಗ ಪಾಪ ಬಂದ್ರೂ ಚಿಂತಿಲ್ಲ. ನಾನ್ನ ಹೊಳಿ ಹಾರಿ ನಿನ ಕಷ್ಟ ತಪ್ಪಸ್ತೀನಿ. ಆಸೆ ಪಟ್ಟದ್ದು ದಕ್ಕದಿದ್ದ ಮ್ಯಾಲ ಯಾಕ ಬದುಕಿರ್ಬೇಕು

ರಂಗ– ಅದಕ ಸತ್ತು ದಫ್ನ್ಯಾಗರ ನನ್ನ ಕಾಡಬೇಕಂತ ಮಾಡಿಯೇನು ಲಿಲ್ಲಿ ಈ ಜೀವನದಾಗ, ಮನುಷ್ಯಾರಾಗಿ ಹುಟ್ಟಿದಮ್ಯಾಲ "ಮದುವೆ" ನೆಪ

ದಾಗ ಗಂಡು–ಹೆಣ್ಣಿನ ಬೆಸುಗ್ಯಾಗುತ್ತ, ಆದ್ರ ಈ ಮದುವೆ ಅನ್ನೊ ಪವಿತ್ರ ಶಬ್ದ. ಇವತ್ತಿನ ದಿನ. "ಮೊದಲ ರಾತ್ರಿ"ಗಷ್ಟ ಬಳಕ್ಯಾಗಾದು ಜಾಸ್ತಿಯಾಗೇತಿ ಸಾಯಂತನ ಜಂಟಿಯಾಗಿರ್ಬೇಕಾದ ಸಂಸಾರ, ನಮ್ಮ ಸರ್ಕಾರದ ಹೆಂಡ. ಸರಾಯಿ ಪ್ರಭಾವದಿಂದ್ಲೋ, ಗಂಡ, ಪರಸ್ತ್ರೀ ವ್ಯಾಮೋಹಕ್ಕ ತುತ್ತಾಗದ್ರಿಂದ್ಲೊ, ಹೆಂಡ್ತಿ, ಗಂಡನ್ನ ಅರ್ಥ ಮಾಡ್ಕೋಂಡು ಬದುಕಾಕ ಆಗದ್ರಿಂದ್ಲೊ ಮೂರ ತಿಂಗ್ಳಿಗೆ ಮೂರಾಬಟ್ಟಿ ಆಗಿಬಿಡುತ್ತ. ಕಾರಣ, ಗಂಡು, ಹೆಣ್ಣು ಒಬ್ರ ಮನಸ್ನ ಒಬ್ರು ಅರ್ಥ ಮಾಡಿಕೊಂಡು, ಆಮ್ಯಾಲ ಮದಿವ್ಯಾದ್ರ, ಮುಂದ ಸಂಸಾರ ಸರಳ ನಡಿಯುತ್ತ.

ಲಿಲ್ಲಿ– ನಿನ್ನ ಮನಸ್ಸ ನಾ ಪೂರಾ ಅರ್ಥ ಮಾಡಿಕೊಂಡೇನಿ. ಸುಮ್ನ ತಡಮಾಡಿ, ಸೀಜನ್ ಹಾಳು ಮಾಡಿಕೊ ಬ್ಯಾಡ. ದೌಡು ನನ್ನ ಮದಿವ್ಯಾಗಿ ಬಿಡು.

ರಂಗ– ಈ ಅವಸ್ರಕ್ಕ ಬೀಳ್ಬ್ಯಾರ್ದು ಅಂತಾನ. ಇಪ್ಪತ್ತನ ಶಂಖ ಹೊಡದದ್ದು. ಇನ್ನಷ್ಟು ವಿಚಾರ ಮಾಡಿ ನೋಡು. ಯಾಕಂದ್ರ ಅವಸರವೇ "ಅಪಘಾತಕ್ಕೆ ಕಾರಣ." (ಹೋಗುವನು)

ಲಿಲ್ಲಿ–ಇವನ್ಯಾವ ಸೀಮಿ ಗಂಡ್ಸ ಗಂಟು ಬಿದ್ದ ಅಂತೀನಿ ನಾನು ನೋಡತೆನಿ ನೋಡಿ ಒಬ್ಬಾವನ ಸಿಕ್ಕಾಗ ಬಲತ್ಕಾರ ಮಾಡಿಬಿಡ್ತೀನಿ. (ಹೋಗುವಳು)

## ಎಂಟನೆಯ ದೃಶ್ಯ

### ಅರವಿಂದನ ಆಸ್ಪತ್ರೆ

(ಅರವಿಂದ ಸಿಗರೇಟ ಸೇದುತ್ತಾ ಶತಪಥ ತಿರುಗುತ್ತಿರುವನು)

ಅರವಿಂದ– ರಸಿಕತೆ ಗಂಧ ಗೊತ್ತಿಲ್ಲದವನಿಗೆ ಸರಸದ ವಿಷಯ ಹೇಳ್ಬ್ಯಾರ್ದು ಹಸಿವಾದವನ ಸಂಕಟ ಹೊಟ್ಟೆ ತುಂಬಿದವನಿಗೇನು ಗೊತ್ತಾಗುತ್ತೆ ನನ್ನ ವಿರಹ ವೇದನೆಗೆ ಹೆಣ್ಣುಗಳನ್ನು ಒದಗಿಸಲೆಂದೇ ಆ ಜಗ್ಗನನ್ನು ಗೊತ್ತು ಮಾಡಿದ್ದೇನೆ ಆದರೆ ಆ ಅವಿವೇಕಿಗೆ ನನ್ನಾತುರದ ಅರಿವೇ ಇದ್ದಂತೆ

ಕಾಣುವುದಿಲ್ಲ.ಎಲ್ಲಿ ಸಾರಾಯಿ ಕುಡಿದು ಸಾಲಿಕಟ್ಟಿಗೆ ಶರಣು ಹೋಗಿದ್ದಾನೋ ಏನೋ?

(ಜಗ್ಗು ಬರುವನು)

ಜಗ್ಗು–ನಮಸ್ಕಾರ ಸಾರ್

ಅರವಿಂದ–ಅರೆ ಜಗ್ಗು ಯಾವಾಗ್ಬಂದೆ?

ಜಗ್ಗು–ಚುರುಕು ಬುದ್ಧಿಯು ನನ್ನನ್ನು ಹರಕು ಮುದ್ದಿ ತಿಂದು ಸಿದ್ಧಿ ಮಾಡೋನು ಅಂತಿದ್ರೆಲ್ಲಾ ಆವಾಗ್ಲೆ ಬಂದೆ

ಅರವಿಂದ–ಸಿದ್ಧಿ ಮಾಡದವನಾದ್ರೆ ಇಷ್ಟೊತ್ತಿಗೆ ನಿನ್ನ ಚುರುಕು ಬುದ್ಧಿಯು ಪ್ರದರ್ಶನವಾಗಬೇಕಿತ್ತು.

ಜಗ್ಗು–ಸಾಹೇಬ್ರು ಕುಡುಕುಗು ತಲೆ ಹಿಡುಕುಗು ಬಾಳ ವ್ಯತ್ಯಾಸೈತಿ. ಕುಡುಕುಗ ಸರಾಯಿ ಕುಡಿಯಾಕ ದುಡ್ಡು ಹುಟ್ಸೊ ಯೋಚೆನ್ಯಾದ್ರ ತಲೆ ಹಿಡುಕುಗ ತಾ ಸನ್ಯಾಸಾದ್ರೂ ಚಿಂತಿಲ್ಲ, ತನ್ನ ಗಿರಾಕಿಗೆ ಹೆಣ್ಣೂದಗಿಸ್ಬೇಕನ್ನೂ ವಿಚಾರಿರ್‍ತಾತಿ

ಅರವಿಂದ– ಆದ್ರ ಸಧ್ಯ ಹೆಣ್ಣು ರೆಡ್ಡಿ ಅಪ್ಪು?

ಜಗ್ಗು–ಎಸ್ ಸರ್ ಇವತ್ತೊಂದು ಹೊಸ ಮಾಲು ನನ್ನ ಮೋಸದ ಜಾಲಕ್ಕೆ ಸಿಕ್ಕು ಬಿದ್ದಿದೆ.

ಅರವಿಂದ–ಹೌದು ಎಲ್ಲಿದ್ದಾಳೆ ಬೇಗ ಕರಿಯೊ,

ಜಗ್ಗು–ತಡಿರಿ ಅವಸ್ರ ಮಾಡಬ್ಯಾಡ್ರಿ ಯಾಕಂದ್ರ ಆ ಹೆಣ್ಣು ಮೂಗಳು ಮೂರು ತಿಂಗಳ ಗರ್ಭಿಣಿ ಅದಾಳೆ.

ಅರವಿಂದ–ಆರು ತಿಂಗಳ ಗರ್ಭಿಣಿಯಿರಲಿ ನನಗರ್ಜೆಂಟಿದೆ ಮೊದ್ಲು ಕರಿ ಆಕಿನ.

ಜಗ್ಗು–ಹಡಿಯೋದು ಒಂದ ತಾಸೈತಂದ್ರು ಬಿಡೋಪೈಕಿಲ್ಲಂತ ನನ ಗೊತ್ರಿ ಆದ್ರ ನಾ ಹೇಳೋ ವಿಷಯ ಪೂರಾ ಕೇಳ್ರಿ. ಆ ಹೆಣ್ಣುಗಳ ಹೊಟ್ಟಿ ತೊಳ್ಸಾಕ ದವಾಖಾನಿ ಹುಡುಕ್ತಾ ಇದ್ಲು ನಾನ್ಕೈಡಿಯಾ ಮಾಡಿ ಲೇಡಿ

ಡಾಕ್ಟ್ರಿರೊ ನರ್ಸಿಂಗ ಹೊಂಗೆ ಕರ್‍ಕೊಂಡ್ಹೋಕ್ತಿನಂತ ಇಲ್ಲಿಗೆ ಕರ್‍ಕೊಂಡು ಬಂದಿನಿ.

ಅರವಿಂದ–ಮುಂದೀಗ ನಿನ್ನ ವಿಚಾರೇನು?

ಜಗ್ಗು–ನನ್ನ ವಿಚಾರ ತಗಂದೇನ್ಮಾಡ್ತೀರಿ? ನಿಮ್ಮಿಚಾರೇನೈತೊ ಅದನ್ಮಾಡ್ರಿ ಅದಕ್ಕಿಂತ ಮುದ್ಲು ನೀವು ಸ್ವಲ್ಪ ಮರೆಯಾಗ್ರಿ ನಾ ಆಕಿನ ಡಾಕ್ಟ್ರ ಪರ್ಮಿಷನ್ ತರ್‍ತೀನಂತ ಹೊರಗ ಕುಂದರ್‍ಸಿ ಬಂದೀನಿ ಸದ್ಯ ಕರ್‍ಕೊಂಡ್ಬಂದು ಒಳಗ ಕಳಸ್ತೇನಿ ಆವ್ಯಾಲ ನೀವು ಹೊಗುವಂತ್ರಿ.

ಅರವಿಂದ–ಸರಿ ಹಾಗಾದ್ರೆ ನಾನಿಲ್ಲೆ ಮರೆಯಾಗಿರ್‍ತಿನಿ ಬೇಗ ಒಳಗಡೆ ಕಳ್ಸಕಿನ (ಒಳಗಡೆ ಹೋಗುವನು)

ಜಗ್ಗು–ಬೇದಿಗ್ಬಂದ ನಾಯ್ಯಾಗಿದಾನ ಮಗ ಅದು ಖರೇನ ಇಂತವರ ಅವಸ್ರ ನನ್ನಂತವ್ರಿಗೆ ಆಸ್ರಾಗುತ್ತ. ಇವತ್ತು ಈ ಮಗನ ಸರಸಾನ ಕ್ಯಾಮ್ರಾ ದಾಗ ಮೂಡುಸ್ತೀನಿ ಇಪ್ಪತ್ತೈದು ಸಾವಿರ ಹೊಡಿತಿನಿ (ಹೊರಗೆ ವಿಶಾಲಳನ್ನು ಕರೆತಂದು) ಬರ್‍ರಿ ಡಾಕ್ಟ್ರಮ್ಮಾರು ಸಧ್ಯ ಬರ್‍ತಾರೆ ಅಲ್ಲೀವರ್‍ಗೂ ನೀವು ಒಳಗ್ಹೋಗಿ ರೆಸ್ಟ್ ತಗೋಳ್ರಿ.

ವಿಶಾಲ–ಬೇಗ ಕಳಿಸಿಕೊಡಣ್ಣ ಪ್ರಣ್ಯ ಬರುತ್ತ (ಒಳಗ್ಹೋಗುವಳು)

ಜಗ್ಗು–ಸಣ್ಣತನ ಇರೋ ನನಗ್ಯಾಕ ಅಣ್ಣ ಅಂತ ಕರಿತಿಯಾ? ನಿನ್ನ ಬಣ್ಣ ಕೆಡ್ಸಾಕ ಒಳಗೊಬ್ಬಣ್ಣ ಹಾತೊರಿತಿದಾನೆ.

ಅರವಿಂದ–(ಬರುತ್ತಾ) ಜಗ್ಗು...

ಜಗ್ಗು–ಒಳಗ ಕಳಿಸೇನಿ ನಿಮ್ಮ ಕೆಲ್ಸಕ್ಕ ರೇಡಿಯಾಗ್ರಿ ಆದ್ರ ಒಮ್ಮಿಗೆ ಅವಸ್ರಕ್ಬೀಳಬ್ಯಾಡ್ರಿ ರಮಿಸಿ ಸಾಧಿಸ್ರಿ,

ಅರವಿಂದ–ಇಂಥಾ ವಿಷಯದಲ್ಲಿ ನನಗಿರೊ ಅನುಭವ ನಿನಗೇನು ಗೊತ್ತೊ ಮಂಕೆ? ನೋಡ್ತಾಯಿರು ಈ ಹೆಣ್ಣನ್ನು ಯಾವ ರೀತಿ ಮಣಿಸ್ತಿನಿ ಅಂತ (ಒಳಗ್ಹೋಗುವನು)

ಜಗ್ಗು–ನೀವು ಆ ಹೆಣ್ಣನ್ನು ಮಣಸ್ರಿ, ನಾನು ನನ್ನ ಕೆಲ್ಸಕ್ಕ ಅಣಿಯಾಗ್ತೀನಿ. (ಹಿಂಬಾಲಿಸುವನು)

ವಿಶಾಲ–(ಒಳಗಿನಿಂದ) ಯಾರು? ನೀವು

ಅರವಿಂದ–(ಒಳಗಿನಿಂದ) ಆವ್ಹಾಲ್ಹೇಳ್ತಿನಿ..

ವಿಶಾಲ–(ಒಳಗಿನಿಂದ) ಬಿಡಿ ನನ್ನ.

ಅರವಿಂದ–(ಒಳಗಿನಿಂದ) ಬಿಡುವುದಕ್ಕಲ್ಲ ಹಿಡಿದಿರೋದು.

ವಿಶಾಲ–(ಒಳಗಿನಿಂದ) ಯಾರಾದ್ರೂ ಕಾಪಾಡಿ ಬಿಡೋ ನನ್ನ...

ಅವ್ಹಾ (ಚೀರುವಳು) (ಜಗ್ಗು ಓಡಿ ಹೋಗುವನು)

–ಹಿನ್ನೆಲೆ–

## ಒಂಭತ್ತನೆಯ ದೃಶ್ಯ

### ಜಂಗಲ್ ರಸ್ತಾ

(ಹಿನ್ನೆಲೆ ಮುಗಿದು ವಿಶಾಲ ಹೋಗುವಾಗ ಅರವಿಂದ ಬಂದು)

ಅರವಿಂದ– ನಿಲ್ಲು.

ವಿಶಾಲ– ಯಾರು?... ಓಹೋ ದೈವ ಸ್ವರೂಪ ವೈದ್ಯರಿಗೆ ಸುಸ್ವಾಗತ. ಯಾಕ ಡಾಕ್ಟ್ರೆ ಮತ್ತೆ ನನ್ನನ್ನು ಬೆಂಬತ್ತಿ ಬಂದಿದ್ದೀರಲ್ಲ? ಇನ್ನೂ..., ನಿಮ್ಹಾಸೆ, ತೀರಿಲ್ಲವೆ?

ಅರವಿಂದ– ಆ ಭರವಸೆ ಖಂಡಿತ ನನಗಿನ್ನೂ ಮೂಡಿಲ್ಲ. ಇದುವರೆಗೆ ನಾನೆಷ್ಟೋ ಹೆಣ್ಣುಗಳೊಂದಿಗೆ ಸರಸವಾಡಿದ್ದೇನೆ.. ಆದ್ರೆ, ಅವರೆಲ್ಲ ಆ ಗಳಿಗೆಗೇ ಹಳಸಿದ ಅನ್ನವಾಗಿ ಬಿಟ್ಟರು. ನೀನು ಮಾತ್ರ......

ವಿಶಾಲ– ಬಿಸಿ ಅಡಿಗೆಯಂದು ಭಾವಿಸಿರುವಿಯಲ್ಲವೆ? ಅದೂ ನಿಜಾನೆ. ಕದ್ದು ತಿನ್ನುವ ಕಳ್ಳನಿಗೆ ಬಾಯಿ ರುಚಿಯಾದರೆ ಸಾಕು, ತನ್ನ ಸಾಹಸಕ್ಕೆ ತಾನೇ ಬೆನ್ನು ಚಪ್ಪರಿಸಿಕೊಳ್ಳುತ್ತಾನೆ. ಆದರೆ ಕತ್ತಲಲ್ಲಿ ತಾನು ಕದ್ದು ತಿಂದದ್ದು, ನಾಯಿ ತಿಂದು ಹೆಚ್ಚಾಗಿ ವಾಂತಿ ಮಾಡಿಕೊಂಡ ಹೊಲಸು ಅನ್ನುವುದು, ಆತುರದಲ್ಲಿ ಆ ಕಳ್ಳನಿಗೆ ಗೊತ್ತಾಗುವುದಿಲ್ಲ.

ಅರವಿಂದ– ಹುಚ್ಚಿ, ಹಸಿವಾಗಿ ಉಸಿರಾಡುವುದಕ್ಕೂ ಕಷ್ಟವಾದಾಗ ಬಿಸಿ ಅಡಿಗೆಯನ್ನೇ ಅರಸುವ ಅವಿವೇಕಿ ನಾನಲ್ಲ. ಆ ಸಮಯದಲ್ಲಿ ಹಸಿವೆ ಇಂಗಿಸಲು ಸಿಗುವ ಅಡಿಗೆ ತಂಗಳಲ್ಲ, ಹಳಸಿದನ್ನವಿದ್ದರೂ, ತಿಂದು, ಉಸಿರು ಉಳಿಸಿಕೊಳ್ಳುವುದೇ ನನ್ನ ರೀತಿ, ನೀತಿ.

ವಿಶಾಲ– ಭಲೇ ಡಾಕ್ಟ್ರೆ. ಮನುಷ್ಯರ ಪಾಲಿಗೆ ಮತ್ತೊಬ್ಬ ಬ್ರಹ್ಮನಾಗ ಬೇಕಾದ ನೀವೇ ಎಂಜಲು ತಿನ್ನುವ ನಾಯಿಗಳಾದ್ರೆ, ತಂದೆಯೇ ಮಗಳ ದೇಹ ವನ್ನು ಬಳಸಿಕೊಂಡು, ತನ್ನ ಕಾಮದಾಹ ತೀರಿಸಿಕೋಡಂತಾಗುವುದಿಲ್ಲವೇ? ಸುಶಿಕ್ಷಿತರಾಗಿ ಸುವಿಚಾರ ಮಾಡಬೇಕಾದ ಗಂಡು ಕುಲವೆಲ, ಹೆಣ್ಣಿನ ಶೀಲ ವನ್ನು ಕೊಳ್ಳೆ ಹೊಡೆಯುವ ದರೋಡೆಖೋರರಾದರೆ, ಹೆಣ್ಣು ಹುಟ್ಟಿದ ಕೂಡಲೇ ಕತ್ತು ಹಿಚುಕುವ ಕಟುಕರಾಗಬೇಕಾಗುತ್ತದೆ ಹೆತ್ತವರು. ಇವತ್ತು ನನ್ನ ದೇಹವನ್ನು ನಿಮ್ಮ ಕಾಮದಾಹಕ್ಕೆ ಬಳಸಿಕೋಡಿರೆಂದು ಖಂಡಿತ ನನಗೆ ನೋವಿಲ್ಲ. ಯಾಕಂದ್ರೆ, ದಡ್ಡ ಧನವಂತರಿಬ್ಬರ ಹೊಟ್ಟೆ ತುಂಬಿಸಿ. ಹೆಚ್ಚಾಗಿ ತಿಪ್ಪೆಗೆಸೆದ ಎಂಜಲು ನಾನು. ಈ ಎಂಜಲನ್ನು ಬುದ್ಧಿಯಿಲ್ಲದ ಬೀದಿ ನಾಯಿ ತಿನ್ನುವ ಮನಸ್ಸು ಮಾಡಬೇಕಿತ್ತೇ ಹೊರತು ದೊಡ್ಡ ಸ್ಥಾನದಲ್ಲಿರುವ ನೀವು ದಡ್ಡರಂತೆ ಈ ಎಂಜಲು ತಿನ್ನುವ ಮೂರ್ಖತನ ಮಾಡಬಾರದಿತ್ತು.

ಅರವಿಂದ–ಅಯ್ಯೋ ಮಂಕೆ ದೊಡ್ಡ ಸ್ಥಾನದಲ್ಲಿದ್ದುಕೊಂಡು ಮಾಡುವ ದಡ್ಡತನಕ್ಕೆ ಈ ಸಮಾಜದಲ್ಲಿ ಸಾಕಷ್ಟು ಬೆಲೆ ಇದೆ. ದೊಡ್ಡವರ ದಡ್ಡತನ. ದೇಶದ ಮೂಲೆ ಮೂಲೆಯಲ್ಲಿ ಗೆಜ್ಜೆ ಕಟ್ಟಿಕೊಂಡು ಅಟ್ಟಹಾಸದಿಂದ ಕುಣಿ ಯುತ್ತಲೇ ಇದೆ. ಆದರೂ ಅದನ್ನು ಅಡ್ಡಿಪಡಿಸುವ ಬುದ್ಧಿವಂತ ಶಕ್ತಿ ಇನ್ನೂ ಹುಟ್ಟಿಲ್ಲ. ಹುಟ್ಟಿದ್ದರೂ ಇದುವರೆಗೆ ತಡೆಯಲು ಸಾಧ್ಯವಾಗಿಲ್ಲ. ನಮ್ಮಂಥವರ ದಡ್ಡತನ ಇಂದಿನ ಸಮಾಜದಲ್ಲಿ ಮುಳುಗಿ ಮತ್ತೆ ಹುಟ್ಟಿ ಬರುವ ಆ ಸೂರ್ಯ ನಿದ್ದಂತೆ.

ವಿಶಾಲ–ಅದೂ ನಿಜಾನೆ. ನಿಮ್ಮಂಥ ದೊಡ್ಡವರು. ಅನ್ನ ತಿನ್ನುವ ಬಾಯಿಂದ ಹೇಸಿಗೆ ತಿಂದಿದ್ರೂ ಕೇಸರಿ ಬಾತ್ ತಿಂದಿದ್ದೇವೆ ಅಂತ ಮತ್ತೊಬ್ಬರ ಮುಂದೆ ಸಮರ್ಥಿಸಿಕೊಳ್ಳುತ್ತಾರೆ. ಇವರ ಬಾಯಿಂದ ಬರುವ ವಾಸನೆ ಕೇಸರಿ ಬಾತ್ ತಿಂದಿದ್ದಲ್ಲಾ ಹೇಸಿಗೆ ತಿಂದದ್ದನ್ನು ಸತ್ಯವನ್ನು ಮೂಗು ಕಂಡು ಹಿಡಿದಿ ದ್ದರೂ ಇವರ ದೊಡ್ಡಸ್ತಿಕೆ, ದರ್ಪಕ್ಕೆ ಬಲಿಯಾಗಿ ಇವರ ಮಾತಿಗೊಪ್ಪಿ ಗೊಳ್ಳುವ ಷಂಡುರಾಗಬೇಕಾಗುತ್ತದೆ. ಆದರೆ ಮರ ಉರುಳಿಸುವ ಆನೆ ಕೂಡ ಸಣ್ಣ ಇರುವೆಯಿಂದ ಪ್ರಾಣ ಬಿಡುವ ಪ್ರಸಂಗಕ್ಕೆ ತುತ್ತಾಗಬೇಕಾಗುತ್ತದೆ.

ಡಾಕ್ಟ್ರೇ ಹಲ್ಲು ಗಟ್ಟಿ ಅಂತ ಕಲ್ಲು ಕಡಿದ್ರೆ ಜೊಲ್ಲು ಸುರಿಸ್ಬೇಕಾಗುತ್ತದೆ. ಶಕ್ತಿಯಿದ್ದಾಗ ವಿದ್ಯುಚ್ಛಕ್ತಿಯಂತೆ ಹರಿದಾಡಿದರೂ. ರಕ್ತ ಸುಟ್ಟಾಗ ಪಕ್ಕ ಕಿತ್ತ ಹಕ್ಕಿಯಂತಾಗುವುದು ಮಾತ್ರ ಸತ್ಯ. ಈ ಮಾತು ನೆನಪಿರ್ಲಿ, ಬರ್ತೀನಿ.

ಅರವಿಂದ– ನಿಲ್ಲು ಹೋಗುವ ಮುನ್ನ ನನ್ನದೂ ಒಂದು ಮಾತು ಕೇಳಿ ಹೋಗು. ಕಾಮದ ಹಸಿವಾಗುವ ಈ ವಯಸ್ಸಿನಲ್ಲಿ, ಸುಖದ ಅಡಿಗೆಯನ್ನು ಅರಸನಾಗಿ ಉಣ್ಣುವ ವಿಚಾರವನ್ನಷ್ಟೇ ನಾನು ಮಾಡ್ತೀನಿ. ಮುಂದೆ ಮುದುಕನಾಗ್ತೀನಿ. ಮಣ್ಣು ಸೇರ್ತೀನೆನ್ನುವ ಹುಚ್ಚು ಕಲ್ಪನೆಯನ್ನು ಈ ಯೌವನದ ವಯಸ್ಸಿನಲ್ಲಿ ನಾನು ಖಂಡಿತ ಮಾಡುವುದಿಲ್ಲ. ಮತ್ತೇನಾದ್ರೂ ನನ್ನನ್ನು ಪ್ರಶ್ನಿಸುವ ವಿಚಾರವಿದ್ರೆ ನನ್ನೀ ನಿರ್ಧಾರವೇ ಉತ್ತರವಾಗಬಹುದೆಂದು ನನಗನಿಸುತ್ತದೆ. ಹ್ಯಾಮ್ ಎ ಕರೆಕ್ಟ್?

ವಿಶಾಲ– ಹುಚ್ಚು ಡಾಕ್ಟ್ರೆ ಮನುಷ್ಯ ರೂಪವಿರುವ ನಿನ್ನಂತ ಕಾಡು ಕಲ್ಲಿಗೆ ಪ್ರಶ್ನೆ ಮಾಡುವುದು ಮಾಂಸ ತಿನ್ನುವ ಮೃಗದ ಮುಂದೆ ಹುಲ್ಲು ಹಾಕುವುದು, ಎರಡೂ ಒಂದೆ. ನಾರಾಯಣನ ಹತ್ತು ಅವತಾರಗಳಲ್ಲಿ ಹಂದಿಯೂ ಒಂದು ಮುತ್ತು ಅಂತ ಮನೆಗೆ ತಂದು ಮಂಚದ ಮೇಲೆ ಮಲಗಿಸಿದರೆ, ಆ ಹಂದಿ ಹೊಲಸು ತಿನ್ನುವುದನ್ನು ಬಿಟ್ಟು ಅನ್ನ ತಿಂದು ಬದುಕಲು ಮನಸ್ಸು ಮಾಡಬಹುದೆ? ಸಾಧ್ಯವಿಲ್ಲ. ಅದರಂತೆ ಕಲಿತರೂ ಖಧೀಮರಾದ ನಿಮ್ಮಂತ ಬುದ್ಧಿಹೀನರ ಮುಂದೆ ಕೈಜೋಡಿಸಿ ಕರುಣೆ ಸಿದ್ಧಿಸಿಕೊಳ್ಳಲು ಸಾಧ್ಯವಿಲ್ಲ. ನಿಮ್ಮಂತವರನ್ನು ಕಾಲಿನ ಕೆರವಾಗಿ ಮೆಟ್ಟಿ, ತೊಟ್ಟಿಗೆಸೆಯುವ ಬುದ್ಧಿವಂತಿಕೆ ಮಾಡಬೇಕು.

(ಭೋಜರಾಜ, ವಿಕ್ರಂ ಬರುವರು)

ಭೋಜರಾಜ– ಶಹಭಾಷ್, ಗಂಡೆದೆಯ ಹೆಣ್ಣೆ. ಕಂಡ–ಕಂಡವರ ತೋಳ ತೆಕ್ಕೆಯಲ್ಲಿ ಸಿಕ್ಕು ಬಿದ್ದು, ಗಾಣದಲ್ಲಿ ಹಿಂಡಿದ ಕಬ್ಬಿನಂತಾಗಿದ್ದರೂ, ಇನ್ನೂ ನಿನ್ನ ರೋಷ, ಆವೇಶ ಕಡಿಮೆ ಆಗಿಲ್ಲವಲ್ಲ. ಅವತ್ತು ನಮ್ಮನ್ನೇ ನಾಶ ಮಾಡ್ತೀನಂತ ಆವೇಶದಿಂದ ಆದೇಶ ಕೊಟ್ಟವಳು, ಇವತ್ತು ಮತ್ತೊಬ್ಬನ ಪಾಶಕ್ಕೆ ಬಲಿಯಾಗಿ ನೀನೇ ನಾಶವಾಗಿರುವಿಯಲ್ಲ.

ವಿಕ್ರಂ– ಇವಳ ನಾಶದಲ್ಲಿ ನಮ್ಮ ಕ್ಕೆ ವಶವಾಗುವ ಮಂತ್ರವೊಂಡಡಗಿದೆಯಲ್ಲ ಡ್ಯಾಡಿ.

ಅರವಿಂದ– ಮಂತ್ರ...ತಂತ್ರ..., ಏನ್ಸಾರ್ ಹೇಳ್ತಾಯಿರೋದು? ನಿಮಗೆ..., ಇವಳ ಪರಿಚಯವಿದೆಯೋ?

ವಿಶಾಲ– ಪರಿಚಯ? ಯಾರದು? ಸನ್ನದೆ? (ನಗು) ಅಯ್ಯೋ ಡಾಕ್ಟ್ರೆ, ಬೆಣ್ಣೆ ತಿಂದವರ ಮುಂದೆ, ಮಜ್ಜಿಗೆ ಕುಡಿದವನು ಬಾಯಿ ಚಪ್ಪರಿಸಿದಂತಾಯಿತು ನಿಮ್ಮ ಪ್ರಶ್ನೆ. ಆಸೆಯ ಮತ್ತಿನಲ್ಲಿ ನೀವು ರುಚಿ ನೋಡಿದ ಈ ಹೆಣ್ಣಿನ ತಿರುಳನ್ನ ಈ ಮೊದಲು ಇವರಿಬ್ಬರೂ ಸವಿದು ಬಿಟ್ಟಿದ್ದಾರೆ. ನೀವೀಗ ಕುಡಿದಿದ್ದು ತಾಜಾ ಹಾಲಲ್ಲಾ ಡಾಕ್ಟ್ರೆ. ಈ ನಾಯಿಗಳು ಕುಡಿದು ಬಿಟ್ಟ ಎಂಜಲ ಹಾಲು.

ಅರವಿಂದ– ಮುಚ್ಚು ಬಾಯಿ ಗರ್ಭಪಾತ ಮಾಡಿಸಿಕೊಳ್ಳುವುದಕ್ಕಾಗಿ ನನ್ನಾಸ್ಪತ್ರೆಗೆ ಬಂದು, ನನ್ನ ಮೇಲೆ ಅಪವಾದ ಹೊರಿಸುವೆಯಾ? ನನ್ನ ಮರ್ಯಾದೆಯ ಗತಿ ಏನಾಗುತ್ತನ್ನೊ ಪ್ರಜ್ಞೆಯಿದೆಯಾ ನಿನಗೆ?

ವಿಶಾಲ– ಕಳ್ಳನಿಗೊಂದು ಪಿಳ್ಳೆ ನೆವ ಅನ್ನುವಂತೆ, ಸುಳ್ಳುಗಳನ್ನ ಪೋಣಿಸುವ ಜಾಣತನ ಯಾಕ ಮಾಡ್ತೀರಿ ಡಾಕ್ಟ್ರೆ? ಶೀಲ ಕಳೆದುಕೊಂಡ ಹೆಣ್ಣಾದ ನಾನೇ ನನ್ನ ಮೈ ಕದ್ದ ಗಂಡಸರ ಸಂಖ್ಯೆಯನ್ನು ಅಂಕೆ ಮಾಡಿ ಹೇಳುತ್ತಿರುವಾಗ, ಗಂಡು ಗುಂಡಿಗೆಯ ಗಂಡಸರಾದ ನೀವೇಕೆ ಸತ್ಯ ಹೇಳಲು ಶಂಕೆ ಪಡುತ್ತೀರಿ? ನೀವು ಮೂವರೂ ತಿಂದಿರುವುದು ನರಕವೇ ಅಂದಾಗ, ನಿಮ್ಮ ಹರಕು ಮನಸ್ಸುಗಳು ಸತ್ಯವನ್ನು ಬಚ್ಚಿಡಲು ಪ್ರಯತ್ನಿಸುವುದರಲ್ಲಿ ಅರ್ಥವಿಲ್ಲ. ಮುಸುರೆಗೆ ಮುತ್ತುವ ನೊಣಗಳ ಜಾತಿ ನಿಮ್ಮದಾಗಿರುವಾಗ ನೀತಿಯೂ ಒಂದೇ ಆಗಿರಬೇಕಲ್ಲವೆ?

ಅರವಿಂದ– ಮೂರ್ಖ ಹೆಣ್ಣೆ, ಸಲಿಗೆ ಕೊಟ್ಟ ನಾಯಿ ಅಡಿಗೆ ಮನೆಗೆ ಬಂದಂತೆ ಅಬಲೆಯೆಂದು ಅನುಕಂಪ ತೋರಿಸಿದ್ರೆ, ನನ್ನ ಪಾಲಿಗೆ...

ಭೋಜರಾಜ- ದುಷ್ಟ ಗ್ರಹವಾದ್ಲು ಅಂತೀರಾ?

ಅರವಿಂದ- ನೋಡಿ ಸಾರ್...

ಭೋಜರಾಜ- ಡಾಕ್ಟ್ರೆ, ಯಾಕ ಸುಮ್ಮನೆ ನಮ್ಮನ್ನು ಮೆಚ್ಚಿಸೋ ಹುಚ್ಚು ತನ ಮಾಡ್ತಿರಿ? ಮೀನಿಗೆ ಈಜು ಕಲಿಸುವ ಬುದ್ಧಿವಂತಿಕೆ ಪ್ರದರ್ಶಿಸುವ ಮೂರ್ಖತನ ಮಾಡಬೇಡಿ.

ವಿಕ್ರಂ- ಒಂದು ವೇಳೆ ಪ್ರಯತ್ನ ಮಾಡಿದ್ರೆ ಹುಲಿ ಬಾಯಿಗೆ ಸಿಕ್ಕ ಜಿಂಕೆ, ಹಸಿರಿಗೆ ಬಾಯಿ ಹಾಕಲು ಅವಸರ ಪಟ್ಟಂತೆಯೇ ಸರಿ.

ವಿಶಾಲ– ಈಗಲಾದ್ರು ಅರ್ಥವಾಯಿತೆ ಡಾಕ್ಟ್ರೆ ಈವರ ಬುದ್ಧಿಯ ಗೂಡಾರ್ಥ. ಯಾಕ ಸುಮ್ಮನೆ ಅರ್ಥವಿಲ್ಲದ ಕಾಲ ವ್ಯರ್ಥ ಮಾಡುತ್ತಿದ್ದಿರಿ? ಮಹಾ ಕಾಮುಕರ ಸಂಗಮವಾಗಿರುವ ಈ ಸಮಯದಲ್ಲಿ, ಮತ್ತೆ ಬೇರೊಂದು ಹೆಣ್ಣಿನ ಬಾಳನ್ನು ಹಾಳು ಮಾಡುವ ವಿಚಾರ ಕೂಟ ನಡಸಿರಿ. ಕಾಲ ಕೂಡಿ ಬರುವತನಕ ನಿಮ್ಮಂತವರ ಕುಲ ಬೆಳಿಯುತ್ತಲೇ ಇರಬೇಕು. ಆದರೆ, ಅಂಕೆ ತಪ್ಪಿದ ಬೆಂಕಿ ಊರು ಸುಟ್ಟರೂ, ನೀರು ಬಿದ್ದಾಗ ಆರದೆ ಇರಲಾರದು. ಅಲ್ಲಿ ಯವರೆಗೂ ಈ ಸಮಾಜದಲ್ಲಿ ನಿಮ್ಮ ದಗುಲುಬಾಜಿ,ದರಬಾರು ನಡೆಯುತ್ತಲೇ ಇರಲಿ, ಪಾಪದ ಫಲ ಪಾಶವಾಗಿ ನಿಮ್ಮ ಕತ್ತಿಗೆ ಬೀಳೋವರೆಗೂ. ಅಬಲೆ - ಹೆಂಗಳೆಯರ ಬಾಳನ್ನು ಗೋಳಿಗೀಡು ಮಾಡಿ, ನೀವು ಮಾತ್ರ ಮಜದಿಂದ ಮೆರೆಯುತ್ತಲೆ ಬದುಕಿರಿ. ದಿನಕ್ಕೊಂದು ಹೆಣ್ಣನ್ನು ಮಣ್ಣು ಸೇರಿಸಿ, ಹೆಣ್ಣು ಕುಲವನ್ನೇ ನಿರ್ನಾಮ ಮಾಡಲು ಸಿದ್ಧರಾಗಿ ನಿಲ್ಲಿರಿ. ನಡೆಯಲಿ–ನಡೆಯಲಿ ನಿಮ್ಮ ಕುಟಿಲ ವ್ಯಾಪಾರ, ಹೆಣ್ಣಿನ ಬಲತ್ಕಾರ. (ಹೋಗುವಳು)

ಭೋಜರಾಜ– ಯಾಕ ಡಾಕ್ಟ್ರೆ, ಅವಳ ಮಾತು ಕೇಳಿ ಗರ ಹೊಡೆದು ನಿಂತು ಬಿಟ್ರಲ್ಲಾ?

ವಿಕ್ರಂ– ತಮ್ಮ ಹುಳುಕು ಬೆಳಕಿಗೆ ಬಂತಲ್ಲಾ ಅನ್ನುವ ಕಳವಳದಿಂದ ಚಳಿ ಹತ್ತಿರಬೇಕು ಪಾಪ.

ಅರವಿಂದ– ನೋಡಿ, ಸುಮ್ಮನೆ ಸುತ್ತಿ ಬಳಸಿ ಮಾತಾಡಬೇಡಿ. ನಾ ಮಾಡಿರುವ ಅಪರಾಧವಾದರೂ ಏನು, ಸಾಭೀತು ಮಾಡಿ ತೋರ್ರಿ.

ಭೋಜರಾಜ– ಸಾಭೀತು? (ನಗು) ವಿಕ್ರಂ..

ವಿಕ್ರಂ– ವಾಟ್ ಡ್ಯಾಡಿ...?

ಭೋಜರಾಜ– ಕಬ್ಬಿಣ ಹದಕ್ಕ ಬರ್ಬೇಕಾದ್ರೆ, ಏನ್ಮಾಡ್ಬೇಕು ಗೊತ್ತೇನು?

ವಿಕ್ರಂ– ಚೆನ್ನಾಗಿ ಕಾಯ್ಸಿ, ಸುತ್ತಿಗೆ ಪೆಟ್ಟು ಹಾಕಿದ್ರೆ, ಹದಕ್ಬಂದ ಕಬ್ಬಿಣ, ಬಯಸಿದ ಆಕಾರ ಕೊಡುತ್ತದೆ ಡ್ಯಾಡಿ.

ಅರವಿಂದ– ನೀವು ನನ್ನನ್ನ ಹೆದ್ರಸ್ತಾಯಿದಿರಾ?

ಭೋಜರಾಜ– ನಾವ್ಯಾಕ ನಿಮ್ಮನ್ಹೆದರ್‍ಸೋ ಪ್ರಯತ್ನ ಮಾಡೋಣ? (ಫೋಟೋ ತೆಗೆದು) ಈ ಫೋಟೋದಲ್ಲಿ ಮೂಡಿರುವ ನಿಮ್ಮ ಚೋರ ಪ್ರಣಯದ ಪ್ರತಿರೂಪ, ನಿಮ್ಮ ಗುಂಡಿಗೆಯನ್ನು ಅದುರಿಸಲು ಸಿದ್ಧವಾಗಿದೆ. (ಕೊಟ್ಟು) ನೋಡಿ, ಕಣ್ತುಂಬ ನೋಡಿ.

ಅರವಿಂದ– (ನೋಡಿ ಗಾಬರಿಯಿಂದ) ಈ ಫೋಟೋ...

ವಿಕ್ರಂ– ನಿಮ್ಮ ತಲೆ ಹಿಡುಕ ಜಗ್ಗುನ ಕೈಯಿಂದ, ಇಪ್ಪತ್ತೈದು ಸಾವಿರ ರೂಪಾಯಿ ಬೆಲೆ ಹೊತ್ತು, ನಮ್ಮ ಕೈಯಿಗೆ ಬಂದಿದೆ ಡಾಕ್ಟ್ರೆ.

ಅರವಿಂದ– ಓ ಮೈ ಗಾಡ್... (ಚಡಪಡಿಸುವನು)

ಭೋಜರಾಜ– ಈ ಭಾವಚಿತ್ರವನ್ನು ವನಜಾಳಿಗೆ ತೋರಿಸಿದ್ರೆ ಸಾಕು, ನಿಮ್ಮ ಮೋಡಿಯ ಪ್ರೀತಿ ಅವಳಿಂದ ಓಡಿ ಹೋಗಿ ಬಿಡುತ್ತದೆ.

ವಿಕ್ರಂ– ಅಷ್ಟೇ ಅಲ್ಲ, ಅಬಲೆ ಹೆಣ್ಣಿನ, ಅದೂ ಗರ್ಭಿಣಿ ಹೆಣ್ಣಿನ ಶೀಲಹರಣ ಮಾಡಿದ ಆಪಾದನೆಯ ಮೇಲೆ, ನೀವು ಸೆರಮನೆಯ ಸೇವಕರಾಗುವ ದುರ್ದಿನ ಒದಗಿ ಬರುತ್ತದೆ. ಕಾರಣ. ಈಗ ನಾವು ಹೇಳಿದಂತೆ ಕೇಳಿ, ಹೆಣ್ಣಿನ ಜೊತೆಗೆ ಹೊನ್ನನ್ನೂ ಪಡೆಯಲು ಸಿದ್ಧರಾಗುತ್ತೀರೋ? ಇಲ್ಲಾ ಮರ್ಯಾದೆ ಕಳೆದುಕೊಂಡು ಹಿಡಿ ಮಣ್ಣನ್ನು ಕಣ್ಣಿಗೆ ಹಾಕಿಕೊಂಡು ಬೊಬ್ಬೆ ಹಾಕುವ ಪರಿಸ್ಥಿತಿಯನ್ನು ಆಹ್ವಾನಿಸುತ್ತೀರೋ?

ಅರವಿಂದ– (ಕೂಗಿ) ಖಂಡಿತಾ ಇಲ್ಲ. ನೀವ್ಹೇಳಿದಂತೆ ಕೇಳ್ತೀನಿ. ಅದ್ರೆ ನನ್ನ ಮರ್ಯಾದೆ ಕಳೆಯುವ ವಿಚಾರ ಮಾತ್ರ ಮಾಡಬೇಡಿ.

ಭೋಜರಾಜ– ಛೇ ಛೇ ಎಲ್ಲಿಯಾದರೂ ಉಂಟೆ ಡಾಕ್ಟ್ರೆ? ಹಾಯೋ ಹಸುವಾದರೂ, ಹಾಲು ಕೊಡುತ್ತೇ ಅಂದಾಗ, ಆ ಹಸುವಿಗೆ ಹುಲ್ಲು ತಿನ್ನಿಸದೆ ಕಲ್ಲು ತಿನ್ನಿಸುವ ಮೂರ್ಖತನ ನಾವ್ಯಾಕ ಮಾಡೋಣ?

ವಿಕ್ರಂ– ನೋಡಿ ಡಾಕ್ಟ್ರೆ, ನೀವು ಯಾವ ಹೆಣ್ಣು, ಹೊನ್ನು ಬಯ ಪ್ರೀತಿಯ ನಾಟಕವಾಡ್ತಿದ್ದಿರೊ ಈ ಎರಡರಲ್ಲಿ ಆ ಹೆಣ್ಣು ಸಂಪೂರ್ಣ ನಿಮ್ಮ ಸೊತ್ತಾಗುತ್ತಾಳೆ. ಆದರೆ, ಹೊನ್ನು ಮಾತ್ರ ಈ ಮೂವರಿಗೂ ಸಮಭಾಗ ವಾಗಿ ಹಂಚುತ್ತವೆ.

ಭೋಜರಾಜ– ಆದರೆ ಒಂದು ಕಂಡೀಷನ್ ಡಾಕ್ಟ್ರೆ.

ಅರವಿಂದ– ಏನದು?

ಭೋಜರಾಜ– ಖಾಲಿ ಬಾಂಡ್ ಪೇಪರಿನಲ್ಲಿ ವನಜಾಳ ಸಹಿ ಬೀಳು ವಂತೆ ಮಾಡುವ ಜವಾಬ್ದಾರಿ ನನ್ನದು. ನಂತರ ವಿಲ್ ಬರೆಸಲು ಫ್ಯಾಮಿಲಿ ವಕೀಲರ ಸಹಕಾರವೂ ನನಗಿದೆ. ಆದರೆ, ನೀವು ತಾಳಿ ಕಟ್ಟುವ ಹಿಂದಿನ ದಿನವೇ ಮೂವರ ಹೆಸರಿಗೆ ಸಮಭಾಗವಾಗಿ ವಿಲ್ ಬರೆಸಬೇಕು. ಇದಕ್ಕೆ ನಿಮ್ಮೊಪ್ಪಿಗೆ ಇದೆ ತಾನೆ?

ಅರವಿಂದ– ತಿಪ್ಪೆಯಲ್ಲಿ ಬೀಳ್ತಿದ್ದವನನ್ನು ಉಪ್ಪರಿಗೆ ಮೇಲೆ ಕೂರುಸ್ತೀ ನಂದ್ರೆ ಯಾರು ಬೇಡವೆನ್ನುತ್ತಾರೆ?

ವಿಕ್ರಂ– ಆಯ್ತಲ್ಲ. ಇನ್ನಾದ್ರೂ ಈ ಸ್ವಜಾತಿ ಬಾಂಧವರ ಬೆಸುಗೆಯ ಗುರುತಿಗೆ ಸಣ್ಣ ಪಾರ್ಟಿ ಮಾಡೋಣ.

ಅರವಿಂದ– ಸಣ್ಣ ಪಾರ್ಟಿಯೇಕೆ ಸಾರ್...

ಭೋಜರಾಜ– ದೊಡ್ಡಾಸ್ತಿಗೆ ಅಧಿಪತಿಗಳಾಗುವ ಭೂಪರು ನಾವು, ದೊಡ್ಡ ಪಾರ್ಟಿನೆ ಮಾಡೋಣ ಅಂತಾರೆ ಡಾಕ್ಟ್ರು. ಅಲ್ವೆ ಮಿ॥ ಅರವಿಂದ?

ಅರವಿಂದ– ಎಸ್...! (ಮೂವರೂ ನಗುತ್ತಾ ಹೋಗುವರು)

## ಹತ್ತನೆಯ ದೃಶ್ಯ

### ರಸ್ತೆ

(ಭೋಜರಾಜ, ಮೂರ್ತಿ ಬರುವರು)

ಭೋಜರಾಜ– ಮೂರ್ತಿ, ಇವತ್ತು ನನ್ನಾಸೆ ಬಸಿರು ಚಿಗುರಿ, ಹಸಿರಾ

ಮೂ॥ ಬಿ॥

ಮೂರ್ತಿ– ಅಂದ್ರೇನ್ರಿ?

ಭೋಜರಾಜ– ನಿನಗರ್ಥವಾಗುವ ವಿಷಯಲ್ಲದು. ಸುಮ್ಮನಿದ್ದು ಬಿಡು.

ಮೂರ್ತಿ– ಖರೆರಿ. ಇತ್ತಿತ್ಲಾಗ ನನ್ನ ಮಾತು ನನಗ್ಗ ತಿಳಿದಂಗಾಗೇತಿ ಅಲ್ಲ ನಾ ಗಂಡ್ಸರ ಹೌದಲೊ?

ಭೋಜರಾಜ– ಈ ಅನುಮಾನ್ಯಾಕ ಬಂತಲೇ?

ಮೂರ್ತಿ– ಅನುಮಾನಲ್ಲ, ಅವಮಾನ. ಆ ರಂಗನ ಮುಂದ ನನ್ನ ಷಂಡನ್ನ ಮಾಡ್ತಾಳಲ್ಲ ಲಿಲ್ಲಿ, ಈ ಅವಮಾನ ಹೆಂಗ ಸಹಿಸಿಕೊಳ್ಲಿ?

ಭೋಜರಾಜ– ನೋಡು ತಮ್ಮಾ, ಈ ಸಮಾಜದಾಗ ನಮಗ ಅವಮಾನದ ಅಗ್ಗಿ, ಬಹುಮಾನದ ಸಿಗಲಿ, ಇವೆರಡೂ ಸುಟ್ಟ ಬೂದಿ ಇದ್ದಂಗ.

ಮೂರ್ತಿ– ಬೂದಿದ್ದಂಗ?

ಭೋಜರಾಜ– ಹೌದಲೆ, ಸುಟ್ಟುಬೂದಿನ ತಿಪ್ಪಿಗೆ ಚಲ್ಲಿದ್ರ ಗೊಬ್ರಾಗುತ್ತ. ಅದನ್ನ ಗುಡಿಯಾಗಿಟ್ರ ಅಂಗಾರಾಗುತ್ತ. ಅಂದ್ರ ಆ ಬೂದಿ ತಿಪ್ಪಿಗೆ ಬಿದ್ರೂ ಬೆಲಿ ಐತಿ, ಗುಡಿಯಾಗಿಟ್ರ ಬೆಲಿ ಐತಿ. ಹಂಗ ನಾವು. ಸುಮ್ಮನ ಯಾಕ ತಲಿಕೆಡಿಸ್ಕೊಂತಿ ನಡಿ ಮನಿಗೆ.

ಮೂರ್ತಿ– ನೀವು ನಡಿರಿ. ನಾ ಸ್ವಲ್ಪ ಸೂಳ್ಯಾರ ಮನಿಕಡಿ ಹೋಗಿ ಬರ್ತೀನಿ.

ಭೋಜರಾಜ– ಯಾಕಲೆ ?

ಮೂರ್ತಿ– ಇವತ್ತು ರಾಖಿ ಹಬ್ಬ. ರಾಖಿ ಕಟ್ಟಿಸ್ಕೊಂಡು ಬರ್ತೀನಿ.

ಭೋಜರಾಜ– ಅಂದ್ರ. ಊರಾಗ್ಯಾರೂ ರಾಖಿ ಕಟ್ಟೋರಿಲ್ಲೇನು ?

ಮೂರ್ತಿ– ಅದಾರ. ಆದ್ರ, ಸೂಳ್ಯಾರ್ಹತ್ರಾನ ಕಟ್ಟಿಸಿಕೊಳ್ಳೋ ಕೆಟ್ಟ ಚಟ ಐತ್ರಿ ನನಗ.

ಭೋಜರಾಜ– ನಡಿ ಹಂಗಾರ ನಾನೂ ಬರ್ತೀನಿ. ನೀ ರಾಖಿ ಕಟ್ಟಿಸ್ಕೊ.

ಮೂರ್ತಿ– ನೀವು ಹಾಸಿಗಿ ಹಾಸೀರಿ. ಬೇಷ್ ಗಂಟು ಬಿಡಿ. ನೀವು.

ಅವತ್ನೋಡಿದ್ರೆ ಲಿಲ್ಲಿ ಹಿಡ್ಕೊಳ್ಳಾಕ ಹೋದ್ರಿ, ಆಕಿ ಕೆಲ್ಸನ ಬಿಟ್ಹೋಗ್ತಿದ್ಲು. ಕಣ್ಣ್ಮುಂದಿದ್ದಿದ್ರೆ ಪ್ರಯತ್ನ ಮಾಡಿ, ಬಲಿಗೆರ ಹಾಕ್ಕೊಂತಿದ್ದೆ.

ಭೋಜರಾಜ– ಯಾಕ ಮಾತಾಡ್ತಿಯಲೆ? ನಾಯಿಗತಿ ಆಕಿ ಬೆನ್ನತ್ತಿ ತಿರುಗ್ತಿದಿ. ಒಂದಿನನರ ಸಿಂಪಲ್ಲಾಗಿ ಕಿಸ್ ಕೊಡಾಕ ನಿನಗಾಗುವಲ್ದು. ಅದ ನನ್ನ ಕೈಗೆ ಸಿಗಲಿ ನೋಡು.

ಮೂರ್ತಿ– ಆಕಿನ ಬಂದ್ಲು ಅದೇನ್ಮಾಡ್ತಿರೊ ಮಾಡ್ರೆಲ್ಲಂಗಾರ.

(ಲಿಲ್ಲಿ ಬರುವಳು)

ಭೋಜರಾಜ– ಏನೇ ಲಿಲ್ಲಿ, ಎಲ್ಲಿಗ್ಹೊಂಟಿದಿ?

ಲಿಲ್ಲಿ– ಯಾಕಪಾ ಭೋಜಣ್ಣ, ಹೆಂಡತೀನ ಕರದಂಗ ಕರೀತಿಯಲ್ಲ ? ವೈವ್ಯಾಲ ಖಬರಿಲ್ಲ. ಇಲ್ಲಾಂದ್ರೆ (ಬಳೆ ಏರಿಸುತ್ತಾ) ಬಾಯಾನ ಪಲ್ಲು ನೆಲಕ್ಕ ಬಿದ್ದಾವು.

ಮೂರ್ತಿ– ಸಾವ್ಕಾರ್ರ. ಬಳಿ ಏರ್ಸಾಕತ್ತಿದ್ಲು. ನಿಂತ್ರ ಕೆಡ್ತೇವಿ. ದೌಡು ಜಗಾ ಬಿಡೋಣ ನಡ್ರಿ.

ಭೋಜರಾಜ– ಮುಠ್ಠಾಳ, ಇಕಿಗ್ಹೆದರಿ ಜಗಾ ಬಿಡ್ತಿಯಾ ? ಇನ್ನರ ಗಂಡ್ಸಾಗಲೇ ಗಂಡ್ಸಾಗು.

ಮೂರ್ತಿ– ಇಕಿ ಮುಂದ ಯಾವ ಟೈಪ್ ಗಂಡ್ಸಾಗ್ಬೇಕನ್ನೋದ್ದು ತಿಳಿದಂಗಾಗೇತಿ ನನಗ.

ಭೋಜರಾಜ– ಏನಂದೆ, ಜಿಂಕೆ ಮರಿಯೆ ? ನನ್ನ ಹಲ್ಲುದುರುಸ್ತಿಯಾ? ಅಷ್ಟು ಧೈರ್ಯ ಐತೇನು ನಿನಗ ?

ಲಿಲ್ಲಿ– ಧೈರ್ಯ, ನಿಮ್ಮಪ್ಪನಷ್ಟೈತಿ. ನಿನ್ನಂತ ನೀಚನಿಂದ ಮಾನ ಕಳ್ಕೊಂಡು, ಪ್ರಾಣ ಬಿಡೋ ಅಳ್ಳಿದೆ ಹೆಣ್ಣಲ್ಲ ನಾನು. ಹುಟ್ಟು ಗರತಿ ಮಗಳದೀನಿ. ಮೈ ಮುಟ್ಟಾಕ್ಬಂದ್ರೆ, ನಿಂತ ಜಗದಾಗ ಹರ್ದು ತಿಂದುಬಿಟ್ಟೇನು.

ಮೂರ್ತಿ– ಲಿಲ್ಲಿ ತಿನ್ನೋದಾದ್ರ ಇವರೊಬ್ಬರನ್ನ ತಿನ್ನು, ನನ್ನ ಸುದ್ದಿಗ್ಬರ್ಬೇಡ

ಭೋಜರಾಜ– ಮೂರ್ತಿ ಸುಮ್ನಿರ್ತಿಯೋ ಬಡಿಸಿಕೊಂತಿಯೊ? ಇಕಿ ನನ್ನ ತಿಂತಾಳ?

ಮೂರ್ತಿ– ನೋಡ್ರೆಲ್ಲಿ ದುರಗವ್ವಂಗ ಬಾಯಿ ತರ್ಕೊಂಡು ತಿನ್ನಾಕ ನಿಂತಾಳ.

ಭೋಜರಾಜ– ಹಂಗಾರ್ನೆಂಗ ತಿಂತಾಳ ತಿನ್ಲಿ ನಾನೂ ನೋಡ್ತೀನಿ.

ಮೂರ್ತಿ– ಹೆಂಗ ತಿಂತಾಳ ಜಗಾನೋಡಿ ಬಾಯ್ಹಾಕ್ತಾಳೆ. ಹರ್ಕೊಂಡು ತಿಂತಾಳ.

ಭೋಜರಾಜ– ನನ್ನ ಹುಡುಗಿ? ತಿಂತಿಯೇನು ಬಾ ಹಂಗಾರ ನಿನ್ನ ಗುಲಾಬಿ ಗಲ್ಲಾನ ಹರ್ಕೊಂಡು ನಾ ತಿಂತೀನಿ (ಹಿಡಿಯಲು ಹೋಗುವನು ಅಲ್ಲಿ ಕಪಾಳಕ್ಕೆ ಹೊಡೆಯುವಳು)

ಮೂರ್ತಿ– ಜಯ ಜಯ ನಮಃ ಪಾರ್ವತಿ ಪತಿ ಹರ ಹರ ಮಹಾದೇವ

ಭೋಜರಾಜ– ಲೇ ಮೂರ್ತಿ...

ಮೂರ್ತಿ- ನನ್ನ ಮ್ಯಾಲ್ಯಾಕ ಸಿಟ್ಟಿಗ್ಬರ್ತೀರಿ? ನಾ ಬಡ್ಕೊಂಡೆ ಬಳಿ ಏರ್ಸಿ ಸಿಗ್ನಲ್ ಕೊಟ್ಟ್ಯಾಳ, ಅಕಿ ಸುದ್ದಿಗ ಹೋಗೂದು ಬ್ಯಾಡಂತ. ಕೇಳಿದ್ರೇನು ನನ್ನ ಮಾತ?

ಲಿಲ್ಲಿ– ಯೇ ಭೋಜರಾಜ ನಿನ್ನಂತ ಚಂಡಾಲನ ಕೈಗೆ ಅಷ್ಟು ಸರಳ ಸಿಗೋ ಹೆಣ್ಣಲ್ಲ ನಾನು

ಮೂರ್ತಿ– ಬರೊಬ್ಬರಿ. ಅವತ್ತು ನೀವಿಕಿನ ಕೆಡ್ಸಾಕ್ಹೋಗಿದ್ರಿ. ಆ ರೊಚ್ಚೈತಿ ನಿಮ್ಮ್ಯಾಲ. ಇನ್ನೂ ನನ್ನ ಕೈಗೆ ಅಗದಿ ಸರಳ ಸಿಕ್ತಾಳ ಹೌದಿಲ್ಲ ಲಿಲ್ಲಿ?

ಲಿಲ್ಲಿ- (ಬಳಿ ಏರಿಸುತ್ತ) ಹತ್ರ ಬಂದು ನೋಡು ಗೊತ್ತಾಗುತ್ತೆ.

ಮೂರ್ತಿ– ಬ್ಯಾಡ್ಬಿಡು ಮಾರಾಯ್ತಿ. ಮೊದಲ್ಹ ನಮ್ಹಲ್ಲಿನ ಬೇರೂ ಅದ್ರುದಾವ.

ಭೋಜರಾಜ– ನಸ್ಕಗನೆ, ಅಕಿ ನನ್ನ ಕಪಾಳಕ್ಕೆ ಹೊಡದಾಳ, ನೀ ಇಕಿನ ರಮುಸಾಕ್ಹತಿಯಾ?

ಮೂರ್ತಿ– ಮತ್ತೇನು ಮಾಡ್ಲಿ, ನಾನ್ನು ತಡವಿ ನಿಮ್ಮ್ಹಾಂಗ ಕಟಿ ಸ್ಕೊಳ್ಳಿನು?

ಭೋಜರಾಜ– ಮಾತು ಬಿಟ್ಟು ಮೊದಲಿಕಿನ ಹೊತ್ಕೊಂಡು ನಡಿ ಅಂದೆ

ಮೂರ್ತಿ- ಇಕಿನ್ನ... ನಾ ಹೊರಬೇಕಾ? ಸಾವ್ಕಾರ್ರ. ಮನ್ನೆ ಅಟ್ಟದ ಮ್ಯಾಗಿಂದ ಬಿದ್ದು ನಡನ ಬಾದಾಗೇತಿ. ಬಗ್ಗಿದ್ರ ಏಳೂದು ಒಜ್ಜೈತಿ. ನೀವು ಹೊತ್ಕೊಳ್ರಿ. ನಾ ಹಿಂದ ಬಾಡಿಗಾಡಾಗಿ ಬರ್ತೀನಿ.

ಭೋಜರಾಜ– ಥತ್ ಯೂಸ್ ಲೆಸ್ ಫೆಲೊ. ಏ ಸೊಕ್ಕಿನ ಹೆಣ್ಣೆ ನನ್ನ ಕಪಾಳಕ್ಕೆ ಹೊಡ್ದೆಲ್ಲಾ? ನಿನ್ನ ಸುಮ್ನ ಬಿಡುದಿಲ್ಲ. ಮಾನ ಕಳೆದು ಮಣ್ಣು ಸೇರುಸ್ತೀನಿ. ಇವತ್ಯಾರು ಬಂದು ಬಿಡಸ್ತಾರ ಬಿಡಿಸ್ಲಿ ನಿನ್ನ ನೋಡ್ತೀನಿ,

(ರಂಗ ಬರುವನು)

ರಂಗ- ಯಾರ್ಯ್ಯಾಕ? ಇಲ್ಲೆ ಅದಾನ್ನೋಡು ಬಹದ್ದೂರ ಗಂಡು.

ಭೋಜರಾಜ– ರಂಗ್ಯಾ...

ರಂಗ- ಯಾಕಲೇ ಮಂಗ್ಯಾ...?

ಭೋಜರಾಜ– ನನಗ ಮಂಗ್ಯಾ ಅಂತ, ಲೇ ಹಚ್ಚಿ ಮಾತಾಡ್ತಿಯೇನೋ ಬಡ್ಡಿ ಮಗನೆ.

ರಂಗ– ನಿನಗ ಮಂಗ್ಯಾ ಅನ್ದೆ, ಮನುಷಾ ಅಂತಾರೇನೋ ಅಡ್ಡಾ ತಿಡ್ಡಿ ನನ್ನ ಮಗನೆ.

ಮೂರ್ತಿ– ಸಾವ್ಕಾರ್ರ ಈಗರ ದೌಡು ಮನಿ ಸೇರಾನ ಬರ್ರಿ. ಏಕ್ ದಮ್ ಡೇಂಜರ್ ಪೊಜಿಷನ್ನಿಗೆ ಬಂತೀಗ. ನನಗಂತೂ ನಡುಗ ಶುರುವಾಗೇತಿ

ಭೋಜರಾಜ– ಹಂಗ ನಡುಗಿ ಸಾಯಿ ಮಗನ. ಲೇ ರಂಗಾ. ನಾ ಯಾರನ್ನೋ ಪ್ರಜ್ಞಿಲ್ಲದಂಗ ಮಾತಾಡ್ತಿಯಾ?

ರಂಗ– ನನ್ನ ಕಣ್ಮುಂದ ದೇಶೋದ್ಧಾರದ ಕೆಲ್ಸ ಮಾಡಾಕ ನಿಂತಿದ್ದಿ ಅಂದಾಗ ನೀ ಯಾರನ್ನೊ ಪ್ರಜ್ಞೆ ಹೆಂಗ ತಪ್ತಿನಿ?

ಮೂರ್ತಿ– ಏನಲೇ ರಂಗ ಹಂಗ್ಯಾತಾಡಿದ್ರೆ? ನಿನಗ ಸಂಬ್ಳ ಕೊಡೊ ಧಣಿ ಅವಾರವರು. ಸಿಟ್ಟಿಗೆದ್ದು ನೌಕ್ರಿಯಿಂದ ತಗೆದೊಗದ್ರ ಮಣ್ಣು ತಿಂದ್ಕೊಂತ ಕುಂದ್ರುಬೇಕಾಗುತ್ತ.

ರಂಗ— ಅಪ್ಪಾ ನಾಯಿ ಬಾಲ್ದಂತವನ, ಇವರ್ನ ಕಂಡವರ ಮನಿಯಾಗ ದಂಡದ ಕೂಳ ತಿಂದ್ಕೊಂತ ಬಿದ್ದಾರ, ನನಿಗ್ಹೆಂಗ ಧಣಿ ಆಗ್ತಾರ್ಲೆ? ನನ್ನ ಕೆಲ್ಸಕ್ಕ ತಗೊಂಡಿರೋದ ವನಜಮ್ಮ, ಸಂಬ್ಳ ಕೊಡೋದು ವನಜಮ್ಮ, ಅವ್ರ ಮನಸ್ಸು ಕೆಟ್ಟಾಗಿ ಇವತ್ತ್ನ ನೌಕ್ರಿಯಿಂದ ತಗಿಲಿ, ಸಂತೋಷದಿಂದಹೋಗ್ತಿನಿ. ಆದ್ರ ಇವ್ರಿಗೇನು ಅಧಿಕಾರ್ರೈತಲೆ? ಆ ದಮ್ಮಿದ್ರೆ ನೌಕ್ರಿಯಿಂದ ತಗಿ ಅಂತ ಹೇಳಿವ್ರಿಗೆ.

ಮೂರ್ತಿ— ಏನ್ರಿದು, ಈ ಮಗ ನಿಮಗ ಸವಾಲ್ ಹಾಕ್ತನಲ್ಲ?

ಭೋಜರಾಜ— ಹಾಕ್ದೆ ಏನ್ಮಾಡ್ತಾನ್ಲೆ, ಇವನ ಜೆಸ್ತಿಂದೆ ನನ್ನ ಸೊಸೆ ದೊಂದು ದೊಡ್ಡ ಧೈರ್ಯನೆ ಐತಲ್ಲ.

ಮೂರ್ತಿ— ಇಲ್ರಿ, ಈ ಮಗನ ಮಾರಿ ನೋಡಿದ್ರ, ಪುಲಿಸ್ನೈತ ನಿಂತ ಜಗಾದಾಗ ನಿದ್ದಿ ಮಾಡುತ್ತ ಸಾವ್ಕಾರ್ರ. ಸಂಬಂಧಿಲ್ಲದ ವಿಷಯ್ದಾಗ ತಲಿ ಹಾಕೋದು ಬಾಳಿ ಮಗ ಅಲ್ರಿ ಇಕೇನು ಸಂಬಂಧಂತ ಪರವಹಿಸ್ಕೊಂಡು ಬಂದಿರ್ಬೇಕು?

ರಂಗ— ಏನ್ಸಂಬಧ?

ಮೂರ್ತಿ— ಹೌದಲೇ ನಿನಗೇನು ಸಂಬಂಧ?

ರಂಗ— (ಲಿಲ್ಲಿ ಭುಜದ ಮ್ಯಾಲ ಕೈ ಹಾಕಿ) ಇಕಿ ನನ್ನ ಲವರ್?

ಮೂರ್ತಿ— ಇಕಿ ನಿನ್ನ ಲವರ್ನ? ನೋಡ್ರಿ ಸಾವ್ಕಾರ ನನಗೆ ಹುಚ್ಚು ಹಿಡ್ಯಾಕ ಹೆಂಗ ಮಾತಾಡ್ತಾನ? ಆ ಪೋಸರ ಹೆಂಗ ಕೊಟ್ಟು ನಿಂತಾನ್ನೋಡ್ರಿ ನನ್ನ ಹೊಟ್ಟಿ ಉರ್ಯಾಕ?

ಭೋಜರಾಜ— ನೋಡ್ತಿದೀನಪ್ಪಾ ನೋಡ್ತಿದಿನಿ. ಲೇ ರಂಗ್ಯಾ ಈ ಭೋಜರಾಜನ್ನ ಕೆಣಕಿ ಬದ್ಕೊದು ಬಾಳಕಷ್ಟ ಈ ಮಾತು ನೆನಪಿಟ್ಕೊಳಲೆ ನೆನ ಪಿಟ್ಕೊ. ನಡಿಯಲೆ ಮೂರ್ತಿ.

(ಹೋಗುವನು)

ಮೂರ್ತಿ- ನನ್ಮಾತೂ ನೆನಪಿಟ್ಕೊಳಲೇ, ಇನ ರ ಇಕಿನ ಕೆ.ಬಿಟಿ. ಛಲೋ ಆತು. ಇಲ್ಲಾಂದ್ರೆ...

ರಂಗ– ಏನ್ಮಾಡ್ತಿಯಾ?

ಮೂರ್ತಿ– ಒಬ್ಬಾವನ ಸಿಕ್ಕಾಗ ಹೇಳ್ತೀನಿ ಮಗನ. (ನಿಂತು) ಲೇ ಲಿಲ್ಲಿ......

ಲಿಲ್ಲಿ– ಯಾಕಲೇ ಗ್ರಹಚಾರ ಕೆಟ್ಟವನ. (ಬಳಿ ಬರ್ತಾವಳು)

ಮೂರ್ತಿ– ಹೊಗ ನಿನೌನು ಹಾಳಾಗ್ಹೋಗು. (ಹೋಗುವನು)

ರಂಗ– ಮತ್ತೇನು ಲಿಲ್ಲಿ ಸಮಾಚಾರ?

ಲಿಲ್ಲಿ– ಹೊಗ ನಿನ್ಕೂಡ ಮಾತಾಡಾಕ ನಾಚಿಗಿ ಬರುತ್ತ.

ರಂಗ– ನಾಚಿಗಿ? ಒಮ್ಮಿಗೆ ಯಾಕ ಬಡುಕೊಂತದ?

ಲಿಲ್ಲಿ– ನೀ ನನಗ ಲವ್ಹರ್ ಅಂದೆಲ್ಲ.

ರಂಗ– ಅದಕ ನಾಚಿಗಿ ಬಂತೇನು? ಅನಾದಿ, ಆ ನನ್ನ ಮಕ್ಳ ಕೈಯಿಂದ ನಿನ್ನ ಪಾರು ಮಾಡೋ ಸಲುವಾಗಿ ಹಂಗ ನಾಟಕ ಮಾಡಿದೆ.

ಲಿಲ್ಲಿ– ಹಂಗಾರ ನನ್ನ ಲವ್ ಮಾಡದಿಲ್ಲ?

ರಂಗ– ಎಲ್ಲಿ ಲವ್ ತರ್ಲಿ, ಮನಸಿನ ತುಂಬಾ ಬರೆ ನೋವೆ ತುಂಬೇತಿ. ಮನುಷ್ಯಾ ನಾ ಕಂಡೀಷನ್ನಿಲ್ಲೇ ಲಿಲ್ಲಿ.

ಲಿಲ್ಲಿ– ಥೂ. ಸ್ವಲ್ಪರ ಕರುಣೆಲ್ಲಲ್ಲ ನಿನಗ. ನನ್ನ ಜೀವನ .. ಹಾಳು ಮಾಡಾಕ. ಬೀದಿ ನಾಯಿಗಳು ಬೆನ್ನು ಬಿದ್ದಿರೋದು ಕಣ್ಣಾರೆ ಕಂಡ್ರೂ. ನಿನ್ನ ಕಲ್ಲು ಹೃದಯ ಕರಗುವಲ್ದಲ್ಲ. ಅತು ಬಿಡು ಒತ್ತಾಯದ ಪ್ರೀತಿ ಜೀವನಕ್ಕ ಕುತ್ತಾಗುತ್ತಂತ. ಸುಮ್ನ ನನ್ನಾಸೆ ಸಲುವಾಗಿ ನಿನಗ್ಯಾಕ ನಿರಾಸೆ ಮಾಡ್ಬೇಕು? ನನ್ನ ಹಣೆಬರ್ದಾಗಿದ್ದುದ್ದ ನಾ ಉಣ್ತೇನಿ. ಬರ್ತೀನಿ ರಂಗು.

ರಂಗ– ಹುಚ್ಚಿ ನಿಂದ್ರು. ನೀತಿವಂತ ಹೆಣ್ಣಿನ ಕಣ್ಣಾಗ ನೀರು ಹರಿಸುವಂತ ನೀಚ ನಾನಲ್ಲ. ನನ್ನ ಪರೀಕ್ಷೆಯೊಳಗ ನೀ ಗೆದ್ದಿ, ನನ್ನ ಮನಸ್ಸು ಕದ್ದಿ.

ಲಿಲ್ಲಿ– ಅಂದ್ರ ನೀನು...

ರಂಗ– ಲವ್ ಮಾಡಾಕ ರೆಡಿ.

ಲಿಲ್ಲಿ– ಖರೇನ ನೀ ಹೇಳೋದು?

ರಂಗ– ಸುಳ್ಳು ಹೇಳಾಕ, ನನ್ನೇನು ಹೈಬ್ರಿಡ್ ಪ್ರೇಮಿ ಅಂತ ತಿಳದಿಯೇನು?

ಲಿಲ್ಲಿ– ಮತ್ತೆ, ಎಷ್ಟು ಹೆದರಿಸಿದ್ದೆಲ್ಲ?

ರಂಗ– ಪ್ರೇಮದ ವಿಷಯ ಹೆದರಿಕೊಂತ, ಹೆದರ್ಸಿಕೊಂತನ ಪ್ರಾರಂಭಾಗಬೇಕು, ಅಂದ್ರ ಸ್ವಾರಸ್ಯಿರುತ್ತ. ಅವಸ್ರಕ ಬಿದ್ರ ಸಕ್ರಿ ತಿಂದು ಚಾ ಕುಡ್ದಂಗಾಗುತ್ತ.

ಲಿಲ್ಲಿ– ಛೀ ಛೀ ನಮ್ಮ ಪ್ರೇಮ ಸಪ್ಪಾಗಬಾರದು. ಸಾಯುತನ ಹುರುಪಿನ್ಯಾಗ ಇರಬೇಕು.

ರಂಗ– ಎಪ್ಪತ್ತು ಕಳೆದ್ರೂ, ನೀ ಒಪ್ಪಿರಬೇಕು ಅಂತ ಗಂಡ್ಸದಿ೨.

ಪದ

## ಹನ್ನೊಂದನೆಯ ದೃಶ್ಯ

### ಕಟ್ ಜಂಗಲ್

(ವಿಶಾಲ ಬರುವಳು)

ವಿಶಾಲ– ಹೆಣ್ತನ ಕಳೆದುಕೊಂಡ ಹೆಣ್ಣಿಗೂ, ಮಣ್ಣು ಸೇರುವ ಹೆಣಕ್ಕೂ ಯಾವ ವ್ಯತ್ಯಾಸವೂ ಇಲ್ಲ. ಆದರೂ, ಹೆಣ್ತನ ಕಳೆದುಕೊಂಡು ಬದುಕುವ ಹೆಣ್ಣಿಗಿಂತಲೂ ಈ ಮಾನವ ಪ್ರಪಂಚವನ್ನೇ ಮರೆತು ಮಣ್ಣು ಸೇರುವ ಹೆಣವೇ ಎಷ್ಟೋ ಪಾಲು ಮೇಲು ಅಂದಾಗ, ನಾನು ಬದುಕುವುದರಲ್ಲಿ ಅರ್ಥವೇನಿದೆ? ಶೀಲ ಕಳೆದುಕೊಂಡಿರುವ ನಾನು ಈ ಸಮಾಜದಲ್ಲಿ ಮಾದರಿ ಹೆಣ್ಣಾಗಿ ಬದುಕಲು ಸಾಧ್ಯವಿದೆಯೇ? ಬದುಕಿದರೂ ಅದಕ್ಕೊಂದು ಬೆಲೆ ಇದೆಯೇ? ಬೆಲೆ ಇದ್ದರೂ, ಆ ಬದುಕಿಗೆ ನಿರ್ಧಿಷ್ಟವಾದ ನೆಲೆ ಸಿಗುತ್ತದೆಯೇ? ನೆಲೆ ಸಿಕ್ಕರೂ, ನನ್ನ ಶೀಲವನ್ನು ಕೊಲೆ ಮಾಡಿದವರ ತಲೆ ತೆಗೆಯಲು ನನ್ನಿಂದಾಗುತ್ತದೆಯೇ? ಖಂಡಿತಾ ಸಾಧ್ಯವಿಲ್ಲ. ಈ ಕಲಿಯುಗದ ಒಬ್ಬ ನೀಚ ಪುರುಷರ ತಲೆಗಳು, ಹೆಣ್ಣಿನ ಪಾಲಿಗೆ ಮಾರಕವಾಗಿ ಸೃಷ್ಟಿಯಾಗುತ್ತಲೆ ಇರುತ್ತವೆ. ಅಂದಾಗ, ಇಂಥವರ ತಲೆ ತಗಿಯುವ ಹುಚ್ಚು ಸಾಹಸ ಮಾಡುವುದಕ್ಕಿಂತ ನನ್ನ ಪ್ರಾಣ ಕಳೆದುಕೊಳ್ಳುವುದೇ ಲೇಸಲ್ಲವೆ?

(ನಗು) ಈ ಪ್ರಶ್ನೆಗೆ ಮತ್ತೊಬ್ಬರ ಉತ್ತರ ಕಾಯುವುದಕ್ಕಿಂತ, ನಾನೇ ಸತ್ತು ಹೋಗುತ್ತೇನೆ.

(ಹೋಗುವಾಗ ಧರ್ಮಯ್ಯ ಬರುವನು)

ಧರ್ಮಯ್ಯ– ನಿಲ್ಲು ತಾಯಿ.

ವಿಶಾಲ– ನೀವು......?

ಧರ್ಮಯ್ಯ– ಯಾಕಮ್ಮ, ನನ್ನ ಗುರ್ತು ಸಿಗಲಿಲ್ಲವೆ?

ವಿಶಾಲ– (ನೆನಪಾದವಳಂತೆ) ಅಂದು, ಆ ನೀಚರ ಮನೆಯಿಂದ ಹೊರ ಬೀಳುವಾಗ......

ಧರ್ಮಯ್ಯ– "ಹೆಣ್ಣಿನ ರೂಪದಲ್ಲಿ ಕಾಣುವ ನರರಾಕ್ಷಸಿಯನ್ನುವ ಮಾತನ್ನು ನಿನ್ನ ಬಾಯಿಂದ ಕೇಳಿದವನೂ ನಾನೆ. ನರರಾಕ್ಷಸಿಯಾಗಬೇಕಾದವ ಳಿಂದಲೇ ಸತ್ತು ಹೋಗುತ್ತೇನೆನ್ನುವ ಮಾತನ್ನು ಇಂದು ಕೇಳಿದವನೂ ನಾನೆ,

ವಿಶಾಲ– ಮನುಷ್ಯರನ್ನೇ ತಿಂದು ತೇಗುವ ರಾಕ್ಷಸರು ತುಂಬಿಕೊಂಡಿದ್ದಾರೆ ಇಂದಿನ ಸಮಾಜದಲ್ಲಿ. ಅಂದಾಗ ನನ್ನಂತ ಅಬಲೆ ಹೆಣ್ಣು, ರಾಕ್ಷಸಿಯ ವೇಷ ಹಾಕುವ ಸಾಹಸ ಮಾಡಿದ್ರು, ಆ ನಿಜವಾದ ರಾಕ್ಷಸರನ್ನು ನಾಶ ಮಾಡಲು ನನ್ನಿಂದ ಸಾಧ್ಯವಿದೆಯೇ?

ಧರ್ಮಯ್ಯ– ನೋಡಮ್ಮಾ. ಯಾವ ಕಾರ್ಯವನ್ನು ಸತ್ಯದ ಹಾದಿಯಲ್ಲಿ ಸಾಧಿಸಲು ಸಾಧ್ಯವಿಲ್ಲವೋ. ಆ ಕಾರ್ಯವನ್ನು ಮೋಸದಿಂದಾದರೂ ಸಾಧಿಸುವ ಧೈರ್ಯ ಮಾಡಬೇಕು.

ವಿಶಾಲ– ಧೈರ್ಯ ಈ ಕಾಲದಲ್ಲಿ? ಅದೂ ನನ್ನಂತ ಅಬಲೆ ಹೆಣ್ಣಿನಲ್ಲಿ? (ನಗು) ಯಜಮಾನ್ರೆ, "ಪ್ರೇಮ" ಅನ್ನುವ ಕುರುಡಿಯನ್ನು "ಕಾಮ" ಅನ್ನುವ ಕಟುಕ, "ಬಲತ್ಕಾರ" ಅನ್ನುವ ನೀರಿಲ್ಲದ ಭಾವಿಗೆ ತಳ್ಳಿ, "ನೀನು ಸಾಯುವುದಿಲ್ಲ, ಧೈರ್ಯವಾಗಿರು ಅಂತ, ಮೇಲೆ ನಿಂತುಕೊಂಡ್ರೆ ಬಾಯಿ ಬಡಿದುಕೊಂಡರೆ, ಆ ಕುರುಡಿಗೆ ಧೈರ್ಯ ಬರುವುದಾದರೂ ಹೇಗೆ? ಆಸರೆ ಕೊಟ್ಟು ಮೇಲೆತ್ತಿಕೊಳ್ಳುವ ದೊಡ್ಡ ಗುಣ ಆ ಕಟುಕನಿಗೆ ಬಂದರಲ್ಲವೆ! ಕುರು

ಡಿಗೆ ಧೈರ್ಯ, ಸ್ಥೈರ್ಯ ಬರುವುದೇ? ಅದೂ ನಿಜಾನೆ. ನನ್ನಂತವಳ ಧೈರ್ಯ, ಸ್ಥೈರ್ಯಕ್ಕೆ, ಈ ಕಾಲವೇ ಎದುರಾಗಿ ನಿಂತಿರುವಾಗ, ಪಾಪ! ಆ ಕಟುಕನಸಣ್ಣತನವೇನೂ ತಪ್ಪಲ್ಲ. ನಂಬಿದವರ ನಾಲಿಗೆಯ ಮೇಲೆ ನಂಜು ಸುರಿಸುವ ಕಾಲ ಯಜಮಾನ್ರೆ ಇದು.

ಧರ್ಮಯ್ಯ– ಹುಚ್ಚಮ್ಮಾ. ಕಾಲ. ತನ್ನ ದೈನಂದಿನ ಕರ್ತವ್ಯವನ್ನು ಪಾಲಿಸುತ್ತಿದೆ. ಆದರೆ. ಸೃಷ್ಟಿಯ ಮೂಲವನ್ನು ಹಾಳು ಮಾಡಲು ಹೊಂಚು ಹಾಕುತ್ತಿಲ್ಲ. ನಿನ್ನಂತೆ ಶೀಲ ಕಳೆದುಕೊಂಡವರು ಕಾಲವನ್ನು ಹೀಯಾಳಿಸುತ್ತಾರೆ. ದುಡಿದು ಹೊಟ್ಟೆ ತುಂಬಿಸಿಕೊಳ್ಳಲಾಗದ ಹೇಡಿಗಳು, ಸಮಾಜವನ್ನು ಜರಿಯುತ್ತಾರೆ. ಇನ್ನು ನಾವೇ ಬುದ್ಧಿವಂತರೆಂದು ತಮ್ಮಷ್ಟಕ್ಕೆ ತಾವೇ ತಿಳಿದುಕೊಂಡವರ ಕಣ್ಣಿಗೆ ಈ ಜಗದ ಜನರೆಲ್ಲರೂ ಕುರಿಗಳಂತೆ ಕಾಣುತ್ತಾರೆ. ಆದರೆ ಕಾಲವನ್ನು ಹೀಯಾಳಿಸುವವರಾಗಲಿ, ಸಮಾಜವನ್ನು ಜರಿಯುವವರಾಗಲಿ, ಜನರನ್ನು ಕುರಿಗಳಂತೆ ಕಾಣುವವರಾಗಲಿ ಅಸ್ತು ಅನ್ನಿಸಿಕೊಳ್ಳುವ ಪುಣ್ಯ ಜೀವಿಗಳಲಾಗುವುದಿಲ್ಲ. ತಿಪ್ಪೆಯಲ್ಲಿ ಬಿದ್ದು ಕೊಳೆತು ಹೋಗುವ ಕಸವಾಗುತ್ತಾರೆ. ಕಾರಣ, ಪೆಟ್ಟು ತಿಂದವರು ಕಾಲವನ್ನು ಹೀಯಾಳಿಸಬಾರದು. ಆ ಕಾಲವನ್ನೇ ಬಳಸಿಕೊಂಡು ಜಯ ಗಳಿಸುವ ಬುದ್ಧಿವಂತಿಗೆ ಮಾಡಬೇಕು.

ವಿಶಾಲ– ನಿಮ್ಮಾತು ಕೇಳಿದ್ರೆ, ನನ್ನಂತೆ ನಿಮ್ಮ ಜೀವನದ ಕಥೆಯಾ...

ಧರ್ಮಯ್ಯ– ವ್ಯಥೆಯನ್ನೇ ಹೆಣೆದುಕೊಂಡ ಸತ್ಯ ಕಥೆಯಮ್ಮ.

ವಿಶಾಲ– ಆ ನಿಮ್ಮ ವ್ಯಥೆಯ ಕಥೆ ಏನೆಂದು ನಾನು ಕೇಳಬಹುದೇ?

ಧರ್ಮಯ್ಯ– ಕೇಳುವುದು ನಿನ್ನ ಧರ್ಮ, ಹೇಳುವುದು ನನ್ನ ಕರ್ತವ್ಯ ಒಪ್ತೀನಿ. ಆದರೆ, ಆತ್ಮಹತ್ಯೆ ಮಾಡಿಕೊಂಡು ಮಣ್ಣು ಸೇರಲು ಹೊರಟಿರುವ ನಿನ್ಮುಂದೆ ನನ್ನ ಕಥೆ ಹೇಳಿದ್ರೆ, ಹೇಡಿಯ ಬೆನ್ನು ಬಿದ್ದ ಕರ್ಮಗೇಡಿ ನಾನಾಗ್ತೀನಿ.

ವಿಶಾಲ– ಅಂದ್ರೆ...?

ಧರ್ಮಯ್ಯ– ಛಲ ಸಾಧಿಸಲು ಹೊರಟವನು,ಬಲವಿಲ್ಲದವನ ಸಹಾಯ

ಕೇಳಿದ್ರೆ, ಈಜಲು ಬಾರದ ಮೂರ್ಖರಿಬ್ಬರು ಜೂಜು ಕಟ್ಟಿಕೊಂಡು ನದಿಗೆ ಬಿದ್ದು ಪ್ರಾಣ ಬಿಟ್ಟಂತಾಗುವುದಿಲ್ಲವೆ?

ವಿಶಾಲ– ನೀವೀಗ ನನ್ನ ಸಹಾಯ ಯೋಚಿಸಲು ಬಂದಿದ್ದೀರಾ?

ಧರ್ಮಯ್ಯ– ಯಾಚನೆಯಲ್ಲಮ್ಮಾ. ನಮ್ಮಿಬ್ಬರ ಗುರಿ ಸಾಧಿಸುವ ಯೋಚನೆ ಯಾವ ತಂದೆ ಮಗ ನಿನ್ನ ಶೀಲ ಕಳೆದು ಈ ಸ್ಥಿತಿಗೆ ತಂದರೊ ಆ ಚಂಡಾಲರೆ ನನ್ನ ಮಗಳ ಮಾನ ಕಳೆದು ಸಾವಿಗೀಡು ಮಾಡಿದರು ಅಷ್ಟೇ ಅಲ್ಲ, ಈಗ ಮತ್ತೊಂದು ನಿರಪರಾಧಿ ಹೆಣ್ಣಿನ ಬಾಳಿಗೆ ಬಿರುಗಾಳಿಯಾಗಿ ನಿಂತಿದ್ದಾರೆ. ನಿನ್ನ ವೈರಿ ಕದ್ದ ಮೂರನೇ ವ್ಯಕ್ತಿ ಆ ಅರವಿಂದನೊಂದಿಗೆ.

ವಿಶಾಲ– ನಿಮ್ಮಾತು ನಿಜವೆ?

ಧರ್ಮಯ್ಯ– ಸುಳ್ಳು ಹೇಳಿ ನಾನು ಸಾಧಿಸುವುದಾದರೂ ಏನಿದೆ ತಾಯಿ? ನೋಡಮ್ಮ ನೀನು ಸಾಯಲು ಹೊರಟಿದ್ದೀಯಾ. ಆದರೆ ಆ ನಿನ್ನ ಸಾವು ಸಾರ್ಥಕವಾಗಬೇಕು· ಈ ಕಾಮುಕರು ಮುತ್ತಿಗೆ ಹಾಕಿರುವ ಮುಗ್ಧ ಹೆಣ್ಣಿನ ಶೀಲ ಉಳಿಸುವ ಪುಣ್ಯ ಜೀವಿ ನೀನಾಗಬೇಕು. ಕಾರಣ ಆತ್ಮಹತ್ಯೆಗೆ ಹೊರಟಿರುವ ನಿರ್ಧಾರವನ್ನು ಬದಲಿಸಿ, ಈ ನೀಚರ ಸಂಹಾರಕೆ, ಕಂಕಣ ಕಟ್ಟಿ ನಿಲ್ಲು ತಾಯಿ.

ವಿಶಾಲ– ಅದು ನನ್ನಿಂದ ಸಾಧ್ಯವಿದೆಯೇ?

ಧರ್ಮಯ್ಯ– ರೊಚ್ಚಿಗೆದ್ದ ಹೆಣ್ಣಿಗೆ ಅಸಾಧ್ಯವಾದದ್ದು ಇತಿಹಾಸದಲ್ಲೇ ಯಾವುದೂ ಇಲ್ಲಮ್ಮಾ, ನೀನೇ ವಿಚಾರಿಸಿ ನೋಡು ಏನೂ ಅರಿಯದ ಮುಗ್ಧ ಹೆಣ್ಣಿನ ಬಾಳು ಈ ರಾಕ್ಷಸರಿಂದ ನಾಶವಾಗುವುದು ನ್ಯಾಯವೆ? ಭೋಗಕ್ಕೋಸ್ಕರವಾಗಿಯೇ ಬದುಕಿ, ತ್ಯಾಗದ ಸೋಗಿನಲ್ಲಿ. ಹೆಣ್ಣಿನ ಮನಗಳನ್ನು ಮಲೀನ ಮಾಡುವ ಇಂಥಾ ಕಾಮಾಂಧರ ಕಾಲ ಕಸವಾಗುವುದು ಧರ್ಮವೆ? ಸಮಾಜದಲ್ಲಿ ಸಾವಿರಾರು ಹೆಣ್ಣುಗಳ ಬಾಳು ಹಾಳಾಗುವುದನ್ನು ತಡೆಯಲು ಸಾಧ್ಯವಿಲ್ಲದಿದ್ದರೂ ಕಣ್ಣೆದುರಿಗೆ ಹಾಳಾಗುತ್ತಿರುವ ಈ ಒಂದು ಹೆಣ್ಣಿನ ಬಾಳನ್ನಾದರೂ ಉಳಿಸೋಣವೇ ಇಲ್ಲಾ ನಾವೇ ಅಳಿಸಿ ಹಾಕೋಣವೆ? ಅಥವಾ ನಾವೇ ಹಾಳಾದವರು, ಮತ್ತೊಬ್ಬರ ಬಾಳನ್ನೇಕೆ ಬೆಳಗಿಸುವ ಮೂರ್ಖತನ ಮಾಡೋಣವೆಂದು ನಾವೇ ಸತ್ತು ಮಣ್ಣು ಸೇರೋಣವೆ?

ವಿಶಾಲ– ಇಲ್ಲ ಯಜಮಾನ್ರೆ ಇಲ್ಲ, ಮಣ್ಣು ಸೇರಬೇಕಾದವರು ನಾವಲ್ಲ, ಮಾನವಂತ ಹೆಣ್ಣುಗಳೊಂದಿಗೆ ಚೆಲ್ಲಾಟವಾಡುವ ಆ ಕಾಮುಕ ಪಿಶಾಚಿಗಳು, (ನಿರ್ಧಾರವಾಗಿ) ಯಜಮಾನ್ರೆ, ಸಾಯುವ ನಿರ್ಧಾರವನ್ನು ಬದಲಿಸಿ, ಆ ನೀಚರ ಸಂಹಾರಕ್ಕೆ ಸಿದ್ಧಳಾಗಿದ್ದೇನೆ. ಹೇಳಿ ಪಾಪಿಗಳ ತಲೆ ಗಳನ್ನು ಚೆಲ್ಲಾಟವಾಡಿ ಉರುಳಿಸಲು ನಾನೇನು ಮಾಡಲಿ? ಚಂಡಿಯಾಗಲೆ, ಚಾಮುಂಡಿ ಯಾಗಲೆ? ಅಥವಾ ಆ ಭಂಡರಿಗೂ ಮಿಗಿಲಾದ ಜಗಭಂಡಳಾಗಿ, ಅವರ ರುಂಡ ಮುಂಡಗಳನ್ನು ಚೆಂಡಾಡಲು ದುರ್ಗಿಯಾಗಿ ನಿಲ್ಲಲೇ?

ಧರ್ಮಯ್ಯ– ದುರ್ಗಿಯಾಗಿ ನಿಲ್ಲಲೇ ಎಂದು ಕೇಳುವ ಸಮಯಕ್ಕೆ ಆಸ್ಪದವೆಲ್ಲಿದೆಯಮ್ಮ? ಬೆಳಗಾದರೆ ಆ ಹೆಣ್ಣಿನ ಬಾಳು ಹರಿದು ಚಿಂದಿ ಯಾಗುವ ಪರಿಸ್ಥಿತಿಯಲ್ಲಿದೆ. ಅಂಟುರೋಗದ ಸಂಕೇತವಾಗಿರುವ ಅವರನ್ನು ಜೀವದಿಂದಿರಲು ಬಿಟ್ಟರೆ, ಇಡೀ ಹೆಣ್ಣು ಕುಲವೇ ನಿನ್ನಂತೆ ಸಾವಿನ ದವಡೆಗೆ ತುತ್ತಾಗಲು ಸಿದ್ಧರಾಗಿ ನಿಲ್ಲಬೇಕಾಗುತ್ತದೆ. ಕಾರಣ ಬದುಕು ನೀರಸವಾಗಿರುವ ನಮ್ಮಿಬ್ಬರ ಜೀವ ಕೊಸರಿ ಹೋದರೂ ಚಿಂತೆಯಿಲ್ಲ, ಆ ಪಾಪಿಗಳ ಉಸಿರನ್ನು ನಾಮಶೇಷ ಮಾಡಲೇ ಬೇಕು. ಕಾಲ ಕಳೆಯುವುದರಲ್ಲಿ ಅರ್ಥವಿಲ್ಲ. (ಅಡ್ರೆಸ್ ಕಾರ್ಡ್ ತೆಗೆದು) ತಗೋಳಮ್ಮ ನೀನು ನೇರವಾಗಿ ವಿಳಾಸಕ್ಕೋಗು.ನಾನ್ಹಿಂದಿ ನಿಂದ ಬರ್ತಿನಿ.

ವಿಶಾಲ– ಸರಿ ಯಜಮಾನ್ರೆ (ಹೋಗುವಳು)

ಧರ್ಮಯ್ಯ– ಅಂತೂ ರೊಚ್ಚಿಗೆದ್ದ ಈ ಹೆಣ್ಣು ಸರ್ಪದಿಂದ ಆ ನೀಚರ ನಾಶವಾಗುವ ಭರವಸೆ ಮೂಡಿದಂತಾಯಿತು.(ಆ ಕಡೆ ನೋಡಿ) ಓ, ಅರವಿಂದ ವನಜ ಈ ಕಡೆನ ಬರ್ತಾಯಿದ್ದಾರೆ, ಬರ್ಲಿ (ಮರೆಯಾಗುವನು)

(ಅರವಿಂದ–ವನಜ ಹಾಡುತ್ತ ಬರುವರು)

ವನಜ– ಅರವಿಂದ ನಮ್ಮಾವನವರು ಮುಂದಿನ ವಾರದಲ್ಲಿ ನಮ್ಮ ಮದುವೆ ನಿಶ್ಚಯಿಸಿದ್ದು ನನಗೆಷ್ಟು ಸಂತೋಷವಾಗಿದೆ ಗೊತ್ತಾ?

ಅರವಿಂದ– ನಿನಗೇನು ಸಂತೋಷವಾಗಿದೆ. ಆದರೆ ಇನ್ನು ಒಂದು ವಾರ ಕಾಯ್ಬೇಕಲ್ಲ, ಅಂತ ನನಗೆ ಸಂಕಟವಾಗ್ತಾಯಿದೆ,

ವನಜ– ಪಾರ ಅನ್ನುವುದು ನಿಮಗಷ್ಟು ದೂರವಾಗಿ ತೋರುತ್ತಿದೆ ಯೇನು?

ಅರವಿಂದ– ದೂರವಷ್ಟೇ ಅಲ್ಲ, ಭಾರವಾಗ್ಯೂ ಇದೆ. ನೋಡು, ಭಾಗ್ಯ ಬರುವ ಸಮಯದಲ್ಲಿ ಅಯೋಗ್ಯರ ಹಾವಳಿ ಬಹಳ. ಕಾರಣ, ಬರುವ ಭಾಗ್ಯ ಆದಷ್ಟು ಬೇಗ ಬಂದರೆ ಒಳ್ಳೆಯದಲ್ಲವೆ ?

ವನಜ– ಭಾಗ್ಯ ಅಂದರೆ ನಿಮ್ಮ ದೃಷ್ಟಿಯಲ್ಲಿ...?

ಅರವಿಂದ– ನೀನು ಹುಚ್ಚಿ, ನಿನ್ನ ಸಂಪತ್ತಿಗೆ ಆ ಸಂಕೇತ ಕೊಟ್ಟೆನೆಂದು ತಿಳಿದರೆ, ನನ್ನನ್ನು ಅರ್ಥಮಾಡಿಕೊಂಡಿದ್ದೇ ವ್ಯರ್ಥ. ನನ್ನ ಪ್ರಾಣದೇವತೆಗೆ ಭಾಗ್ಯ ಎಂದು ಕರೆದೆನೇ ಹೊರತು...

ವನಜ– ನೋಡಿ ಅರವಿಂದ್, ಪ್ರೀತಿಗೆ ಕಣ್ಣಿಲ್ಲ. ಅದು ಮತ್ತೊಬ್ಬರಿಗೆ ಕಾಣುವುದೂ ಇಲ್ಲ. ಆದರೆ, ಪ್ರೀತಿಸಿದವನು ತನ್ನ ಪ್ರಿಯತಮೆಗೆ, ಹಾಲು ತುಂಬಿದೆಯೆಂದು ತಂದು ಕೊಟ್ಟ ಕಪ್ಪು ಸೀಸೆಯಲ್ಲಿ ಹಾಲಿದೆಯೋ, ಹಾಲಾ ಹಲವಿದೆಯೋ ಎಂದು ಪರೀಕ್ಷಿಸದೆ ಕುಡಿಯುವುದು, ಆ ಪ್ರಿಯತಮೆಯ ಮೂರ್ಖತವಲ್ಲ, ಅವಳ ಆದರ್ಶ ಪ್ರೀತಿಯ ಪ್ರತೀಕ.

(ಧರ್ಮಯ್ಯ ಬರುವನು)

ಧರ್ಮಯ್ಯ– ಆ ಪ್ರತೀಕ ಅತಿರೇಕವಾದಾಗ, ಆಪತ್ತುಗಳು ಮುತ್ತುವ ಸಂಭವ ಬಹಳವಮ್ಮ.

ವನಜ– ಏನ್ಹೇಳ್ತಿದಿರಿ ಧರ್ಮಯ್ಯ.

ಧರ್ಮಯ್ಯ– ಅಂಥಾದ್ದೇನೂ ಇಲ್ಲಮ್ಮ. ನೀವೇಳಿದ ಆದರ್ಶ ಪ್ರೇಮಿ ಗಳ ನಿದರ್ಶನ ಕೇಳಿದೆ. ಕೆಲ ಗಂಡಿನ ಪ್ರೀತಿಯ ಹಿನ್ನೆಲೆಯಲ್ಲಿ ಸ್ವಾರ್ಥವಿರುವು ದನ್ನು ತಿಳಿಯದೆ, ತಿಪ್ಪೆ ಕಸವಾಗಿರುವ ಕೆಲ ಹೆಣ್ಣುಗಳ ನೆನಪಾಗಿ, ಸಣ್ಣ ಉದಾಹರಣೆ ಕೊಟ್ಟೆನಷ್ಟೆ.

ವನಜ– ನಿಮ್ಮ ಉದಾಹರಣೆಗೆ ನನ್ನ ಅರವಿಂದರು ಹೋಣೆಯಾಗುವು ದಿಲ್ಲ. ಆ ಭರವಸೆ ನನಗಿದೆ.

ಅರವಿಂದ– ವನಜ, ನಮ್ಮ ಪ್ರೀತಿ ಸಾಚ ಎಂದು ಇವರಿಗೆ ಪರಿಚಯ ವಾಗುವತನಕ, ನಮ್ಮ ಪ್ರೀತಿ ಅರಿವಾಗುವದಿಲ್ಲ ಅಲ್ಲವೆ ಧರ್ಮಯ್ಯ.

ಧರ್ಮಯ್ಯ– ನಾನು ವಯಸ್ಸು ಕಳೆದ್ರೂ, ನಿಮ್ಮನುಭವ ನನಗಾಗಿಲ್ಲ ಸಾಹೇಬ್ರೆ. ಆದರೆ ನನಗೆ ತಿಳಿದಿರುವುದಿಷ್ಟೆ. "ಬೆಳ್ಳಗಿರುವುದೆಲ್ಲಾ ಹಾಲೆಂದು ತಿಳಿಯುವ ಮೂರ್ಖ ಜನ ಬಹಳ ಇದ್ದಾರೆ, ಕಳ್ಳರ ಸುಳ್ಳು ಪ್ರೀತಿಯ ತಿರುಳು ತಿಳಿಯದ ತಿಳಿಗೇಡಿಗಳಿದ್ದಾರೆ" ಎಂದು. ಈ ಮಾತನ್ನು ಎಲ್ಲ ಬಲ್ಲ ತಮಗೇಳು ವುದರಲ್ಲಿ ಅರ್ಥವಿಲ್ಲವೆಂದು ನನ್ನ ಭಾವನೆ. ಇದಕ್ಕೆ ನೀವೇನಂತೀರಿ ?

ವನಜ– ಅವರೇನಂತಾರೆ? ಕಳ್ಳ ಸುಳ್ಳರ ಪ್ರೀತಿ ನಮ್ಮದಲ್ಲ ಅಂತಾ ರಷ್ಟೆ. (ನಗುತ್ತಾ) ಒಳ್ಳೆ ಧರ್ಮಯ್ಯ. ಅರವಿಂದ, ಇವರು ಯಾವಾಗಲೂ ಹೀಗೆನೆ. ಆಗಿ ಹೋದ ಚರಿತ್ರೆಗಳನ್ನು ನನ್ನ ಮುಂದೆ ಉದಾಹರಣೆಗಳನ್ನಾಗಿ ನಿಲ್ಲಿಸ್ತಿರ್ತಾರೆ.

ಅರವಿಂದ– ಇವರ ಮನಸ್ಸು ಹಸುಗೂಸಿನಂತಾದ್ದು ಅಂತ ನನಗೊ ತ್ತಿದೆ ವನಜ ಸರಿ. ನೀ ಮುಂದಾಗು, ಸಧ್ಯ ನಿನ್ನ ಹಿಂದೆನೆ ನಾವೂ ಬರ್ತೀವಿ.

ವನಜ– ಸರಿ ಬೇಗ ಬನ್ನಿ. (ಹೋಗುವಳು)

ಅರವಿಂದ– ಏನು ಧರ್ಮಯ್ಯನವರೆ ಒಗಟಿನ ಮಾತಿನಲ್ಲಿ ನಾನು ಕೆಟ್ಟವ ನೆಂದು ಎತ್ತಿ ತೋರಿಸುವ ಪ್ರಯತ್ನ ಮಾಡುತ್ತಿದ್ದೀರಿ?

ಧರ್ಮಯ್ಯ– ಕದ್ದು ತಿಂದವರಿಗೆ ಯಾವ ಸುದ್ದಿ ಹೇಳಿದ್ರೂ, ತನಗೇ ತೆಗಳಿದನೆಂದು ತಪ್ಪು ತಿಳಿದುಕೊಳ್ಳುತ್ತಾರೆ. ಆದರೆ, ಅದಕ್ಕೆ ಕಾರಣ ನಾನಲ್ಲ, ಕದ್ದು ತಿಂದವರ ಕರ್ಮ.

ಅರವಿಂದ– ಹಾಗಾದರೆ, ಕದ್ದವನ ಸುಳಿವಿನ ಸುದ್ದಿಯನ್ನು ಊರ್ತುಂಬಾ ಹಬ್ಬಿಸುವವನಿಗೆ, ಯಾವ ಕಾಣಿಕೆ ಕೊಡುವುದು ಧರ್ಮವಾಗಬಹುದು, ಆ ಕದ್ದವನ ಪಾಲಿಗೆ?

(ಭೋಜರಾಜ ಬರುವನು)

ಭೋಜರಾಜ– ಅದನ್ನು ಕೇಳಿ ಕೊಡುವುದಕ್ಕಿಂತ, ಕೊಟ್ಟು ಸಂತೋಷ ಪಡುವುದು ಲೇಸಲ್ಲವೆ ಡಾಕ್ಟ್ರೆ?

ಅರವಿಂದ– ಹಾಗಾದರೆ..., ನಾನು ಕೇಳಿದ್ದು ತಪ್ಪೆ?

ಭೋಜರಾಜ– ತಪ್ಪೊ, ಒಪ್ಪೊ ಒಟ್ಟು ಮನ ಒಪ್ಪುವ ಕಾಣಿಕೆ ಕೊಟ್ಟು ಕರ್ತವ್ಯ ಮುಗಿಸಿದ್ರೆ ತೀರ್ತು, ಏನಂತೀರಾ?

ಧರ್ಮಯ್ಯ– ಮಾತಾಡಿ ಕೆಡುವವರಿಗಿಂತ, ಕೆಟ್ಟು ಮಾತಾಡುವವರಲ್ಲಿ ಅರ್ಥ ಬಹಳ ಇರುತ್ತದೆ. ನೀವು ಕೊಡುವ ಕಾಣಿಕೆಯನ್ನು ಸ್ವೀಕರಿಸಲು ನಾನು ಸಿದ್ಧನಿದ್ದರೂ, ಕೊಡುವ ಯೋಗ್ಯತೆ ನಿಮಗಿರಬೇಕಲ್ಲ.

ಭೋಜರಾಜ– ನಮ್ಮ ಯೋಗ್ಯತೆಯನ್ನು ಪ್ರತ್ಯಕ್ಷ ಪರಿಚಯ ಮಾಡಿ ಕೊಡುತ್ತೇವೆಯೇ ಹೊರತು, ನಿನ್ನಂಥ ಕ್ಷುಲ್ಲಕನ ಮುಂದೆ ವಿವರಿಸುವ ಮೂರ್ಖ ತನ ಮಾಡುವುದಿಲ್ಲ.

ಅರವಿಂದ– ಸಾರ್, ನಾವು ಇವನನ್ನು ಕ್ಷುಲ್ಲಕನೆಂದು ತಿಳಿದಿದ್ದರೆ, ಇವನು ನಮ್ಮನ್ನು ಲೋಭಿಗಳು ಅಂತ ತಿಳಿದಿದ್ದಾನೆ.

ಭೋಜರಾಜ– ಹೌದೇನೋ ಧರ್ಮಯ್ಯ?

ಧರ್ಮಯ್ಯ– ಅಲ್ಲಾ ಅನ್ನುವ ಮೂರ್ಖತನ ನಾನ್ಯಾಕ ಮಾಡ್ಲಿ? ಲೋಭಿಯನ್ನುವ ಎರಡಕ್ಷರದ ಅರ್ಥವೇ ನೀವು. ನಿಮ್ಮಂತವರನ್ನು ಕಂಡೇ ಆ ಸರ್ವಜ್ಞನು. "ಉಣ್ಣದೊಡವೆಯ ಗಳಿಸಿ, ಮಣ್ಣೊಳಗೆ ಬೈತಿಟ್ಟು, ಚನ್ನಾಗಿ ನೆಲವ ಸಾರಿಸಿದವನ ಬಾಯೊಳಗೆ ಮಣ್ಣು ಕಾಣಯ್ಯಾ ಸರ್ವಜ್ಞ" ಅಂತ ಹೇಳಿದ್ದಾನೆ.

ಭೋಜರಾಜ– ಸರ್ವಜ್ಞ ಹೇಳಿದನ್ನು ಬೊಗಳುವೆಯಾ ಭಿಕಾರಿ?

ಧರ್ಮಯ್ಯ- ಬೊಗಳುತ್ತಿಲ್ಲ, ನಿಮ್ಮ ಹೀನ ಗುಣಗಳನ್ನು ಹೊಗಳು ತ್ತಿದ್ದೇನೆ. ಯೇ ಭೋಜರಾಜ, ನೀನು ಯಾರು? ಮಾಡಿರುವ ಪಾಪವೇನೆಂಬು ದರ ಅರಿವು ನಿನಗಿಲ್ಲದಿದ್ದರೂ, ನನ್ನ ಮಗಳ ಶೀಲಗೆಡಿಸಿ, ಸಾವಿನ ದವಡೆಗೆ ನೂಕಿರುವ ನಿನ್ನ ಮುಖದ ಮರೆವು ಮಾತ್ರ ನನಗಾಗಿಲ್ಲ, ಆಗುವುದೂ ಇಲ್ಲ. ನನ್ನ ಮಗಳ ಸಾವಿಗೆ ಕಾರಣರಾದ, ನಿಮ್ಮ ಪ್ರಾಣ ತೆಗೆಯದೆ ಇಷ್ಟು ದಿನ ಯಾಕೆ ಬಿಟ್ಟಿದ್ದೇನೆ ಗೊತ್ತೆ? ಅಡಗಿರುವ ವಿಷ ಜಂತು ತಾನಾಗಿಯೇ ಬಯ ಲಿಗೆ ಬರಲೆಂದು ಯಾಕಂದ್ರೆ, ಪಾಪಿಗೆ ತಗುಲುವ ಶಾಪವನ್ನು ತಪ್ಪಿಸಲು ಯಾವ ಭೂಪನಿಗೂ ಸಾಧ್ಯವಿಲ್ಲ.

ಭೋಜರಾಜ– ಶಭಭಾಷ್ ಧರ್ಮಯ್ಯ ಶಹಭಾಷ್. ಇದುವರೆಗೂ ಪೆಟ್ಟು ತಿಂದ ಸರ್ಪದ ಪಕ್ಕದಲ್ಲಿ ಮೈಮರೆತು ಮಲಗಿದ್ದ ನನ್ನನ್ನು, ಇಂದು ನೀನೇ ಎಚ್ಚರಿಸಿದೆ. ಇನ್ನು ನಿನ್ನಿಚ್ಚೆಯ ಕಾಣಿಕೆಯನ್ನು ಖಂಡಿತಾ ಕೊಡುತ್ತೇನೆ. ಭೋಗಕ್ಕಾಗಿ ಬದುಕುವವರ ಮುಂದೆ ತ್ಯಾಗಕ್ಕಾಗಿ ಬದುಕುತ್ತೇನೆಂದು ಹೇಳುವ ನಿನ್ನಂತ ಅರಸಿಕನಿಗೆ ನಾ ಕೊಡುವ ಕಾಣಿಕೆ ಇದೆ. (ಗುಂಡು ಹಾರಿಸುವನು. ಧರ್ಮಯ್ಯ ಚೀರಿ ನರಳುತ್ತ)

ಧರ್ಮಯ್ಯ– ಅಯ್ಯೋ ಪಾಪಿ, ಸತ್ಯದ ತಲೆಯ ಮೇಲೆ ಚಪ್ಪಲಿ ಇಡುವ ಮೂರ್ಖನಾದೆಯಾ? (ಬಿದ್ದು ಸಾಯುವನು)

ಭೋಜರಾಜ– ಸತ್ಯಕ್ಕೆ ಸಾವೇ ಹೊರತು ಅಸತ್ಯವನ್ನು ಗೆಲ್ಲುವ ಸಾಮರ್ಥ್ಯ ಈ ಕಲಿಯುಗದಲ್ಲಿ ಬರುವುದಿಲ್ಲ. ನಿನ್ನ ಪ್ರಾಣದ ಪ್ರಯಾಣ ಸುಖಕರವಾಗಲಿ ಗುಡ್ ಬೈ.

ಅರವಿಂದ– ಅಂತೂ ಪ್ರಾಣಿ ಮಣ್ಣು ಸೇರ್ತು.

ಭೋಜರಾಜ– ಇನ್ನೂ ಸೇರಿಲ್ಲ, ಅಪಾಯ ನಮಗೊದಗದಂತೆ ಉಪಾಯವಾಗಿ ನಾವೇ ಸೇರಿಸ್ಬೇಕು. ಬನ್ನಿ ಹೇಳ್ತೀನಿ. (ಹೋಗುವರು)

## ಹನ್ನೆರಡನೆಯ ದೃಶ್ಯ

### ರಸ್ತಾ

ರಂಗ– ಏನಾತಲ್ರಿ ದೇವರಂತಾ ಧರ್ಮಯ್ಯನವರ ಗತಿ? ಹಾಡಗಲೇ ಗುಂಡಿಟ್ಟು ಕೊಂದಾರಲ್ಲ ಚಂಡಾಲ್ರು. ಇವರೇನವ್ರಿಗೆ ಅನ್ಯಾಯ ಮಾಡಿದ್ದಾರು ಅಂತೀನಿ? ಈ ನನ್ನ ಮಕ್ಳು ಸರಳ ಸಾಯುದಿಲ್ಲ, ಕೊಳತು, ಹುಳಬಿದ್ದು, ಗಬ್ಬು ನಾತಿಟ್ಟು ಸಾಯ್ತಾರ. ಪಾಪ, ವನಜಮ್ಮನ ಗೋಳಾಟ ನೋಡಬಾರದ್ರಿ, "ತಂದಿದ್ದಂಗಿದ್ರು, ತಬ್ಲಿ ಮಾಡಿ ಹೋದ್ರು" ಅಂತ ಹೆಣದ ಮ್ಯಾಲ ಬಿದ್ದು ಒಂದ್ಸ ಸವನ ಅತ್ತುಬಿಟ್ರು. ಅವರ ಮ್ಯಾಲ ಅಷ್ಟು ಪ್ರೀತಿನು ಇದ್ರವರು. ಅಂದಲ್ಲೇ ಮಿಲ್ಲಿನ ಮುಂದ ಧರ್ಮಯ್ಯನವ ಮೂರ್ತಿ ನಿಲ್ಲಿಸಿ ಬಿಟ್ಟಾರ.

(ಆ ಕಡೆ ನೋಡಿ) ಅಪ್ಪ, ಮಗ ಈ ಕಡೆನೆ ಬರ್‍ತಾರಲ್ಲ ಬರ್ಲಿ, ಬರ್ಲಿ (ಮರೆಯಾಗುವನು)

ವಿಕ್ರಂ– ಡ್ಯಾಡಿ ಅವತ್ತು, ನಾ ಹೇಳಿದ ವಿಷಯ ಸತ್ಯವಾಯ್ತಲ್ಲ? ನನಗೆ ಮೊದಲೇ ಗೊತ್ತಿತ್ತು. ಆ ಧರ್ಮಯ್ಯನಿಗೆ ನಮ್ಮ ವಿಷಯ ಗೊತ್ತಿದ್ದೇ, ನಮ್ಮ ನಾಶಕ್ಕೆ ಸಮಯ ಕಾಯ್ತಾಯಿದ್ದ ಅಂತ.

ಭೋಜರಾಜ– ಕರೆಕ್ಟ್ ಮೈ ಸನ್. ಅದಕ್ಕಾಗಿ ಈ ಭೂಪತಿ ಅವನನ್ನೇ ಸರ್ವನಾಶ ಮಾಡಿಬಿಟ್ಟೆ. ಈ ಭೋಜರಾಜನಿಗೆದುರಾಗಿ ನಿಂತವರು ಬಹಳ ಕಾಲ ಈ ಭೂಮಿಯ ಮೇಲೆ ಬದುಕಿರಲು ಸಾಧ್ಯವಿಲ್ಲಪ್ಪಾ.

ವಿಕ್ರಂ– ಸತ್ತವನ ಸುದ್ದಿ ಬಿಡಿ ಡ್ಯಾಡಿ. ಸಧ್ಯ ಆ ವಕೀಲಂತೂ ನಾವು ಹೇಳಿದಂತೆ ವಿಲ್ ಬರೆಯಲು ಒಪ್ಕೊಂಡ. ಆದ್ರೆ ವನಜಾಳಿಂದ ಸಹಿ ಮಾಡಿಸಿಕೊಂಡ ಖಾಲಿ ಬಾಂಡ್ ಪೇಪರಿನಲ್ಲಿ ವಿಲ್ ಬರೆಸುವಾಗ, ಆ ಅರವಿಂದನಿಗೂ ಆಸ್ತಿಯಲ್ಲಿ ಸಮಭಾಗ ಬರಸ್ತೀರೇನು?

ಭೋಜರಾಜ– ಏನಂದೆ? ಅರವಿಂದನಿಗೆ ಆಸ್ತಿಯಲ್ಲಿ ಸಮಭಾಗ? (ನಗು) ಅಯ್ಯೋ ಪೆಪ್ಪ. ನನ್ನ ಹಸಿವಿಗೇ ಸಾಲದ ಅನ್ನದಲ್ಲಿ ಭಿಕ್ಷುಕನಿಗೂ ದಾನ ಮಾಡುವ ಬುದ್ಧಿಗೇಡಿಯಲ್ಲಪ್ಪಾ ಈ ಭೋಜರಾಜ. ಆಳುವುದಾದರೆ ಚಕ್ರವರ್ತಿಯಾಗಿ ಆಳುವ ವಿಚಾರ ಮಾಡುತ್ತಾನೆಯೇ ಹೊರತು, ಸಾಮಾನ್ಯ ಸಾಮಂತ ರಾಜನಾಗಿ ಆಳುವ ಹೇಡಿ ವಿಚಾರವನ್ನು ಕನಸಿನಲ್ಲಿಯೂ ಮಾಡುವುದಿಲ್ಲ. ಬೀಜ ಸಸಿಯಾಗಿ, ಮರವಾಗಿ, ಫಲ ಬಿಡುವುದಕ್ಕಾಗಿ ನಾ ಹಾಕಿದ ಗೊಬ್ಬರವಷ್ಟೆ ಆ ಅರವಿಂದ. ಅದು ಮಣ್ಣಲ್ಲಿ ಮಣ್ಣಾಗುವುದೇ ಹೊರತು, ಹಣ್ಣು ತಿನ್ನುವ ಭಾಗ್ಯವನ್ನು ಬೇಡಿ ಬಂದಿರುವುದಿಲ್ಲ.

ವಿಕ್ರಂ– ಹಾಗಾದ್ರೆ ಅವರ ಮದುವೆ ಅವರ ಪಾಲಿಗೆ ಮಸಣವಾಗುತ್ತೆ ಅನ್ನಿ.

ಭೋಜರಾಜ– ಹೌದು. ಅವರ ಆನಂದದ ಮೊದಲ ರಾತ್ರಿ, ಅವರ ಪಾಲಿಗೆ ಜೀವನದ ಕೊನೆಯ ರಾತ್ರಿಯಾಗಬೇಕು. ಯಾರಿಗೂ ಅನುಮಾನ ಬರದಂತೆ. ಅಂದು ಅವರು ತಿನ್ನುವ ಹಣ್ಣೆನಲ್ಲಾಗಲೀ, ಕುಡಿಯುವ ಹಾಲಿನ

ಲ್ಲಾಗಲಿ ವಿಷ ಬೆರಸಿ ಅವರ ಉಸಿರನ್ನೇ ನಿಲ್ಲಿಸಬೇಕು. ಆಮೇಲೆ, ಆ ಸರ್ವ ಸಂಪತ್ತಿಗೆ ನಾನೇ ಚಕ್ರವರ್ತಿ.

ವಿಕ್ರಂ– ಡ್ಯಾಡಿ, ಇದು ರಸ್ತೆ. ಯಾರಾದ್ರೂ ಕೇಳಿಸಿಕೊಂಡಾರು ನಡಿರಿ. ಮೊದಲು ಅರವಿಂದ, ವನಜಾರ ಮದುವೆ. ಮಂತ್ರಕ್ಕೆ ನಾಂದಿ ಹಾಡೋಣ. (ಹೋಗುವಾಗ ರಂಗ ಬರುವನು) ಲೇ ರಂಗ.

ರಂಗ– ಯಾಕ್ರಿ ಸಾಹೇಬ್ರ?

ವಿಕ್ರಂ– ನಾವಿಲ್ಲಿ ನಿಂತಿದ್ದನ್ನು ನೋಡಿನೂ, ಎದೆ ಸೆಟಿಸಿ ನಮ್ಮುಂದೆನೆ ಹೋಗ್ತಿಯಲ್ಲ. ಎಷ್ಟು ಸೊಕ್ಕಲೆ ನಿನಗೆ?

ಭೋಜರಾಜ– ಇವನಿಗೆ ಕೊಬ್ಬು ಜಾಸ್ತಿ ಆಗಿದೆ. ರಸ್ತೆಯಲ್ಲಿ ನನಗ ಸೈತ ಸಿಕ್ಕಂಗ ಮಾತಾಡಿದಾನಿವನು ಅವತ್ತೇ ಇವನ ಸೊಕ್ಕು ಮುರಿತಿದ್ದೆ...

ರಂಗ– ಧೈರ್ಯ ಬರಲಿಲ್ಲ.

ವಿಕ್ರಂ– ರ್‍ಯಾಸ್ಕಲ್, ನಿನ್ನಂತವನ ಕೊಬ್ಬಿಳ್ಯಾಕೆ ಧೈರ್ಯಬೇಕೇನಲೆ?

ರಂಗ– ಧೈರ್ಯ ಅಷ್ಟ ಅಲ್ಲ, ನನ್ನ ತಡವಬೇಕಾದ್ರೆ ಹಣಬರ ಗಟ್ಟಿದ್ದವರ ತಡವಬೇಕು. ಕೊಬ್ಬಿಳ್ಯಾಕ ಬಂದವರ ಮುಬ್ಬು ಬಿಡ್ಸೊ ಭೂಪತಿ ರಂಗಿವನು.

ಭೋಜರಾಜ– ನೋಡಿದೇನಪಾ ವಿಕ್ರಂ, ಈ ಮಗನ ಪೊಗರೆಷ್ಟೈತಿ?

ವಿಕ್ರಂ– ಏಸಲೇ ಬಡ್ಡಿ ಮಗನೆ ನಾವ್ಕೊಡೊ ದುಡ್ಡು, ನಾಪ್ಹಾಕೊ ಅನ್ನ ತಿಂದು ಬದುಕೋ ನಾಯಿ ನೀನು. ನಮಗ್ಹ ಮರ್ಯಾದಿ ಕೊಡದಂಗ ಮಾತಾಡ್ತಿಯಾ?

ರಂಗ– ಈ ಮಾತಿಗೆ ಈಗಲೇ ನಿಮ್ಮಪ್ಪಗ ಉತ್ರ ಕೊಟ್ಟೇನಿ ಬೇಕಾರ ಮನಿಗೆ ಹೋದಿಂದ ಕೇಳಿ ತಿಳ್ಕೊಳ್ರಿ. ಆದ್ರ ನಂದೊಂದು ಮಾತು ಕೇಳ್ರಿ ಡೂಪ್ಲಿಕೇಟ್ ಸಾವ್ಕಾರ್ರೆ..., ನನ್ನ ಕೈಯಾಗ ಕಸುವೈತಿ, ಕಸುಬೂ ಐತಿ. ದುಡಿತಿನಿ ಅನ್ನೋ ದಮ್ಮೈತಿ. ಅಡವ್ಯಾಗಿದ್ರೂ ಬದುಕ್ತೇನಿ ಅನ್ನೋ ವಿಶ್ವಾಸೈತಿ. ಆದ್ರ ಮತ್ತೊಬ್ಬರ ಎಂಜಲಿಗೆ ಬಾಯಿ ತೆರ್ಕೊಂಡು ಬಿದ್ದಿರೋ ನಿಮ್ಮಂ

ತವರಿಗೆ ಬರಬಾರದ ಕೆಡುಗಾಲ ಬಂತಂದ್ರ ಏನ್ಹೇಳ್ಲಿ ನಿಮ್ಮ ಫಜೀತಿನ, ತುತ್ತು ಕೂಗಿಗಾಗಿ ಕೋಳಿಗತಿ ತಿಪ್ಪಿ–ತಿಪ್ಪಿ ಕೆದರಿಕೊಂತ ತಿರುಗ್ಬೇಕಾಗುತ್ತ.

ವಿಕ್ರಂ– ಸ್ಕೌಂಡ್ರಲ್. ನಮ್ಮನ್ನ ಎಂಜಲಿಗೆ ಬಿದ್ದವರು ಅನ್ನುವಷ್ಟು ಸೊಕ್ಕು ಬಂತೇನೋ ನಿನಗ (ಹೊಡೆಯಲು ಕೈ ಎತ್ತುವನು, ರಂಗ ಕೆ ಹಿಡಿದು)

ರಂಗ– ನನ್ನ ಹೊಡಿಯಾಕೆತ್ತಿದ ಈ ಕೈ ಕತ್ತರಿಸಿ. ಸಾಯಿ-ಸರಿ ಬಾಯಿಗೆ ಹಾಕ್ತಿದ್ದೆ. ಆದ್ರ ನಿಮ್ಮ ಪಾಪದ ತೂಕ ಎಷ್ಟು ಕೆ. ಜಿ. ಆಗೇತೊ. ಇನ್ನೂ ಎಷ್ಟು ಕೆ. ಜಿ. ಆಗೋದೈತೊ? ಇದನ್ನ ಲೆಕ್ಕ ಹಾಕಿ ಆ ದೇವರು ನಿಮಗ ಎಷ್ಟು ಕೆ. ಜಿ. ಕೊಡಬೇಕಂತ ವಿಚಾರ ಇಟ್ಟಾನೋ ನನಗೊತ್ತಿಲ್ಲಂದಲ್ಲಿ ಅದಕ ನಿಮ್ಮನ್ನ ಸರಳ ಕೈಬಿಡ್ತೀನಿ ಏನ್ನ ನಿಮಗ ಶಿಕ್ಷೆ ಆದ್ರೂ ಆ ದೇವರಿಂದಾನೆ ಆಗ್ಲಿ

ಭೋಜರಾಜ– ವಿಕ್ರಂ ಈ ಭಿಕಾರಿ ನನ್ನ ಮಗನ ಕೂಡ ಯಾಕ ಕೆಲ್ಸಕ ಬಾರದ ಪ್ರಯತ್ನ ನಡಸ್ತಿಯಾ?ಇವನಿಗೆ ಏನು ಮಾಡೋದು ನಾ ಮಾಡ್ತೀನಿ. ಬಾ ಹೋಗೋನ (ಹೋಗುವನು)

ವಿಕ್ರಂ– ಲೇ ರಂಗ ಇವತ್ತಿಂದ ಬಹಳ ಹುಷಾರಿಯಿಂದಿರು ಮಗನ (ಹೋಗುವನು)

ರಂಗ– ಹೋಗಲೇ ನನಗೇನು ಹುಷಾರಿಂದ ಇರಾಕ್ಹೇಳ್ತಿ? ಆ ದೇವರ ದೃಷ್ಟಿಯೊಳಗ ಹುಷಾರಿಂದ ಬದುಕ್ಬೇಕಾದವರು ನೀವು.

(ಲಿಲ್ಲಿ ಬರುವಳು)

ಲಿಲ್ಲಿ– ಆ ದೇವರಿಗೂ ಲಂಚಕೊಟ್ಟು; ಪಾಪದ ಹೊರೆ ಕಡಿಮೆ ಮಾಡ್ಕೊಳ್ಳಾಕ ಪ್ರಯತ್ನ ಪಡೋ ಭೂಪರದಾರ ವರು.

ರಂಗ– ಲಂಚಕೊಟ್ರೂ, ಇವರ ಗುಟ್ಟು ರಟ್ಟಾದ್ರ ಆ ದೇವರ ಚಟ್ಟ ಕಟ್ಟಿಸ್ತಾನ. ಈ ನನ್ನ ಮುಕ್ಕು ಧರ್ಮಯ್ಯನ್ನ ಕೊಲೆ ಮಾಡಿದ್ದಲ್ದೆ, ಈಗ ವಜನವ್ವನ ಪ್ರಾಣ ತಗಿಯೋ ವಿಚಾರ ನಡಸ್ಯಾರ ಗೊತ್ತೆನು ?

ಲಿಲ್ಲಿ– ಹೌದ? ಹಂಗಾರ, ಈ ದುಷ್ಟರ ನಿರ್ನಾಮ ಮಾಡುವುದಕ್ಕಾಗಿ ನಾನು ಕಂಕಣಬದ್ಧಳಾಗಿ ನಿಲ್ಲುತ್ತೇನೆ.

ರಂಗ– ಈ ಅವತಾರದ್ದಾಗ ದುಷ್ಟರನ್ನ ನಿರ್ನಾಮ ಮಾಡ್ತಿಯಾ ? ನಿನಗ ಸ್ವಲ್ಪರ ಬುದ್ಧೈತೆನು ?

ಲಿಲ್ಲಿ– ಯಾಕ ?

ರಂಗ– ಯಾಕಂತಿಯಲ್ಲ ? ಶ್ರೀಕೃಷ್ಣ ಪರಮಾತ್ಮ ಮೋಹಿನಿ ಅವತಾರ್ದಲ್ಲಿದ್ದಾಗ, ಆ ಪರಮೇಶ್ವರನೇ ಅವನ್ನ ಲವ್ ಮಾಡಾಕ ಹೋಗಿದ್ದ. ಇನ್ನೀ ನರಮನುಷ್ಯಾರು ಬಿಡ್ತಾರೇನು ? ಹರುಕು ಸೀರಿ ಉಟ್ಟು, ಮುರುಕು ರೊಟ್ಟಿ ಬೇಡಾಕ್ಬಂದ ತಿರುಕಿನ ಸೈತ ರೇಪ್ ಮಾಡೋ ತಲೀ ಕೆಟ್ಟವರಿರ ಬೇಕಾದ್ರೆ, ಇನ್ನು ನಿನ್ನಂತ ಟಿಪ್ ಟಾಪಿರೋ ಹುಡುಗಿನ ಹರ್ಕೊಂಡು ತಿಂದ್ನ ಬಿಡ್ತಾರ. ಹುಚ್ಚಿ, ನಡಿ ಮನಿಗೆ. ದುಷ್ಟರನ್ನ ನಿರ್ನಾಮ ಮಾಡಾಕೋಗಿ, ನೀನ್ನ ನಿರ್ನಾಮಾದಿಯಾ.

ಲಿಲ್ಲಿ– ಹೆಣ್ಣಿಗೆ ಅಸಾಧ್ಯವಾದದ್ದು ಯಾವದೂ ಇಲ್ಲ ರಂಗು.

ರಂಗ– ಹಿಂಗಂದವ್ನ ಬಾಳ ಜನ ಮಣ್ಣಿಗೋದ್ರು.

ಲಿಲ್ಲಿ– ಮಣ್ಣಿಗೋದ್ರೂ, ಎಂದಿಗೂ ಮರೆಯದ ಮಹಿಳೆಯರಾಗಿ ಉಳಿದಿದ್ದಾರೆ. ಇತಿಹಾಸದಲ್ಲಿ ಅವರ ಹೆಸರು ಅಜರಾಮರವಾಗಿಯೇ ಇದೆ.

ರಂಗ– ಲಿಲ್ಲಿ, ಸಧ್ಯ ನನ್ಕೂಡ ಲವ್ ಮಾಡ್ತಿಯೋ ? ದುಷ್ಟರನ್ನ ಹುಡುಕ್ಯಾಡಿ ಮರ್ಡರ್ ಮಾಡ್ತಿಯೋ ?

ಲಿಲ್ಲಿ– ನೀನು ಲವ್ ಮಾಡ್ತಿ ಬಿಡ ನಿನ್ನ, ಮೊದಲಿನ ಹುರುಪ್ನ ಬರುವಲ್ದೀಗ.

ರಂಗ– ಕಟಿದಾರು ನಿನ್ನ. ಯ್ಯಾವ ಸುದ್ದಿ–ಗದ್ಲಿಲ್ಲದಂಗ ತಣ್ಣಗಿದ್ದವನಿಗೆ ಲವ್ವಿನ ಹವಾ ತುಂಬಿ, ಹುರುಪೆಬ್ಸಿ, ಈಗ ನೀಂದು ಹೌಸಾಗೇತಂದ್ರ ಯಾಕ್ಕೇಳ್ತಾರ ?

ಲಿಲ್ಲಿ– ಪರವಾಯಿಲ್ಲ. ನಾ ಸ್ಟಾರ್ಟ್ ಮಾಡಿದ ಗಾಡಿ, ಆಫಾಗ್ದಂಗ ಛಾರ್ಜಿನ್ಯಾಗ ಉಳುದೈತನ್ನೋದು ಖಾತ್ರಿ ಆತು.

ರಂಗ– ಅಂದ್ರ ನೀ ಬಾಡಿ ಅನ್ನೊ ಗಾಡಿ ಪರೀಕ್ಷೆ ಮಾಡೋ ಮೆಕ್ಯಾನಿ

ಕ್ಕೇನು? ನೋಡು ಇನ್ನೊಂದು ತಿಂಗ್ಳೊಪ್ಪತ್ತು. ಕಚ್ಚಾ ರೋಡಿನ್ಯಾಗೋಡ್ಸಿ ಕೊನಿಗೊಮ್ಮೆ ಗುಡ್ಡ ಹತ್ತಿಸಿಳಿಸಿ ಖಾತ್ರಿ ಮಾಡ್ಕೊಂತಿಯೇನು?

ಲಿಲ್ಲಿ– ಬ್ಯಾಡ ಸುಮ್ನ ಗಾಡಿ ಸವೆಸಿದ್ರೆ ನನಗ ಲಾಸಾಗುತ್ತ.

ರಂಗ– ಅಪ್ಪರ ತಿಳ್ಕೊಂಡಿಯಲ್ಲ ನನ್ನ ಪುಣ್ಯ. ಅಂದಂಗ ಲಿಲ್ಲಿ ಆ ಮೂರ್ತಿ ಈಗಗ ನಿನ್ನ ಕಾಡೋದು ಬಿಟ್ಟಾನಿಲ್ಲೊ?

ಲಿಲ್ಲಿ– ಜೀವ ಬಿಟ್ರೊ. ಅವನೇನು ಕಾಡೋದು ಬಿಡದಿಲ್ಲ.

ರಂಗ– ಪಾಪ ಅವನದೂ ವಯಸ್ಸು ಹೆಂಗ ಬಿಡ್ತಾನ? ಅದಕ ಅವನೌನ ಜೀವನ್ದಾಗ ನೆನಪಿಟಿರ್ಬೇಕು ಅಂತ ಮದವಿನ ನಾವ ಮಾಡಿ ಬಿಡಾನ.

ಲಿಲ್ಲಿ– ಹೆಣ್ಣಲ್ಲಿಂದ ತರ್ತೀಯಾ?

ರಂಗ– ಕನಸಿನ್ಯಾಗ ಸೈತ ಕಂಡಿರ್ಲ್ಬಾದು ಅಂತ ಹೆಣ್ಣು ತರ್ತೀನಿ. ಬಾಯಿಲ್ಲಿ ಹೇಳ್ತೀನಿ (ಕಿವಿಯಲ್ಲಿ ಹೇಳಿ) ನೀ ಇಷ್ಟು ಮಾಡು ಮುಂದಿಂದು ನಾ ನೋಡ್ಕೊಂತೀನಿ.

ಲಿಲ್ಲಿ– ಇಷ್ಟ ಹೌದಿಲ್ಲ? ಚಿಂತಿಬಿಡು. ಮರಿಗೆ ನಿಂತು ನೋಡು.

ರಂಗ– ಬಂದ ನೋಡಲ್ಲಿ ಕೆಂಟ್ರ್ರಿ ಶೆರೆ ಕುಡ್ದ ವರ್ಗತಿ, ನಾನಿಲ್ಲೆ ಮಲಗಿರ್ತೆನಿ. ನಿನ್ನ ಕೆಲ್ಸ ಶುರು ಮಾಡಿಕೊ (ಮರೆಯಾಗುವನು)

(ಮೂರ್ತಿ ಬರುವನು)

ಮೂರ್ತಿ– ಹಾಯ್ ಲಿಲ್ಲಿ.

ಲಿಲ್ಲಿ– ಹಾಯ್ ಡಿಯರ್.

ಮೂರ್ತಿ ಆಂ! ಡಿಯರ್? (ಸುತ್ಲೂ ನೋಡಿ) ಯಾರಿಗಂದಿ? ಇಲ್ಲಂತು ಆ ರಂಗಿಲ್ಲ.

ಲಿಲ್ಲಿ– ನೀನದಿಯಲ್ಲ. ನಿನಗ ಅಂದಿದ್ದು ನನ್ನ ರಾಜಾ.

ಮೂರ್ತಿ– ನನಗೇನ ಕೆಡುಗಾಲನ ಬಂತಿದು. ಇಕಿ ಬಾಯಾಗ ಡಿಯರ್ರು ರಾಜಾ ಅಂತ ಬರಬೇಕಾದ್ರ. ನನ್ನ ಹಣ ಹೊರೊ ವಿಚಾರನ ಇರ್ಬೇಕಿದು. ಮಿಸ್ ಲಿಲ್ಲಿ, ನನಗ ಮೈಯಾಗ ಆರಾಮಿಲ ದವಾಖಾನೆಗೆ ಹೋಗಿ ಬರ್ತೀನಿ.

ಲಿಲ್ಲಿ– ಪ್ರಾಣಕಾಂತ. ನಿನ್ನ ಪ್ರಾಣವಲ್ಲಭೆಯನ್ನು ಬಿಟ್ಟೇ ಹೋಗುತ್ತಿರುವೆಯಲ್ಲ.

ಮೂರ್ತಿ– ಛಿಛೀ ಹೆಂಗಾದಿತು ? ನಿನ್ನ ಮಾತು ನಂಬಿ ಹತ್ರಕ್ಕ ಬಂದು, ಒದಿಸ್ಕೊಂಡು ಸಾಯ್ಬೇಕಿ ತಡಿ.

ಲಿಲ್ಲಿ– ಎಂಥಾ ಮಾತಾಡುತ್ತಿರುವಿ ಪ್ರಿಯ ?

ಮೂರ್ತಿ– ಪ್ರಿಯೆ ?? ದೊಡ್ಡ ಗೂಟಾನ ಜಡಿತಾಳ ಕಾಣುತ್ತ ನನಗ.

ಲಿಲ್ಲಿ– ನೀನೇ ನನ್ನ ಜೀವ. ನಿನಗೆ ಒದಿಯುತ್ತೇನೆಯೋ ?

ಮೂರ್ತಿ– ಬದಿತಿಯೋ. ಪ್ರಾಣ ತಗಿತಿಯೋ ? ಅದ್ಹ ತಿಳಿದಂಗಾಗೇತೀಗ, ನನ್ನ ಮಾರಿ ನೋಡಿದ್ಕೂಡ್ಲೆ ಯಾಕಲೇ, ಬೇವಾರ್ಸಿ. ಐವಾನ ಅನ್ನೋ ಶಬ್ದಗಳು ಬರ್ಬೇಕಾದ ನಿನ್ನ ಬಾಯಲ್ಲಿ. ಡಿಯರು, ರಾಜ, ಪ್ರಿಯ ಅನ್ನೊ ಶಬ್ದಗಳು ಬರ್ತದಾವಲ್ಲ, ಏನ್ಸಮಾಚಾರ ? ನನ್ನ ರಮಿಸಿ ಕರ್ಕೊಂಡ್ಹೋಗಿ, ಮರ್ಡರ್ ಮಾಡೋ ವಿಚಾರ್ವೈತೆನು ನಿನಗ ?

ಲಿಲ್ಲಿ– ಅದೇನಿಲ್ಲ. ನನಗ ನಿನ್ನ ಮ್ಯಾಲ ಮನಸ್ಸಾಗೇತಿ.

ಮೂರ್ತಿ– ನಿನಗ ನನ್ನ ಮ್ಯಾಲ ಮನಸ್ಸಾಗೇತ ? ಇದೇನಿದು. ಒಮ್ಮಿಗೆ ನಮ್ಮ ದೇಶದ ಸಂವಿಧಾನನೇ ಬದ್ಲಿ ಮಾಡಿದಂಗಾತಲ್ಲ. ಅಲ್ಲಾ, ಮುಂಗ್ಸಿ ಹಾವಿನ್ಕೂಡ ಗೆಳೆತನ ಮಾಡುತ್ತಂದ್ರ ಯಾರು ನಂಬ್ತಾರ ? ಸಾಧ್ಯನ ಇಲ್ಲದು. ಇವಳೇನೊ ಏನ್ಹ ಪ್ಲಾನ್ ಮಾಡ್ಯಾಳ. ಲಿಲ್ಲಿ ಖರೆ ಹೇಳು, ಆ ರಂಗ್ಯಾ ನಿನಗ ಈ ನಮೂನಿ ನಾಟಕ ಮಾಡಂತ ಹೇಳಿ ಕಳ್ಸ್ಯಾನ ಹೌದಿಲ್ಲೊ ?

ಲಿಲ್ಲಿ– ಥೂ, ಆ ಚಂಡಾಲನ ಹೆಸರೆತ್ತಬ್ಯಾಡ ನನ್ಮುಂದೆ. ನನಗವನು ಮಾಡಿರೋ ಅನ್ಯಾಯ ನೆನಸ್ಕೊಂಡ್ರೆ, ನನ್ನ ಮೈಯಲ್ಲಾ ಉರಿತೈತಿ.

ಮೂರ್ತಿ– ರಂಗ್ಯಾ, ನಿನಗನ್ಯಾಯ ಮಾಡಿದ್ನ ?

ಲಿಲ್ಲಿ– ಹೌದು. ನನ್ನ ಪ್ರೀತಿ ಮಾಡಂವಂಗ ನಾಟಕ ಮಾಡಿ, ಮದಿವ್ಯಾಗ್ತಿನಂತ ಮಾತು ಕೊಟ್ಟು, ಈಗ ಅದ್ಯಾವುದೋ ಹುಡುಗಿ ಕರ್ಕೊಂಡು ದಿನಾ ಸುಡುಗಾಡಿಗೋಕ್ಯಾನ ಲವ್ ಮಾಡಾಕ.

ಮೂರ್ತಿ– ಸುಡುಗಾಡಿಗೋಕ್ಯಾರ ? ಅಲ್ಲೇನು ಹೆಣ ಎಬ್ಬಿಸ್ತಾರೆನು ?

ಲಿಲ್ಲಿ– ಹಂಗಲ್ಲ. ಯಾರಿಗೂ ಗೊತ್ತಾಗಬಾರ್ದಂತ. ಆ ಹುಡ್ಗಿನ ಇವ್ನಿಗೆ ಸುಡುಗಾಡಿಗೆ ಬರಾಕೇಳ್ಯಾಳಂತ,

ಮೂರ್ತಿ– ಹೊಸಾದ್ದು ಕೇಳಿದಂಗಾತಿದು. ಸುಡುಗಾಡದಾಗ ಲವ್ ಮಾಡ್ತಾರಂದಿಂದ. ಅವರೌರ ರಾಕ್ಷಸ ವಂಶದವರಿರ್ಬೇಕು.

ಲಿಲ್ಲಿ– ಆದಕ, ಆ ರಾಕ್ಷಸ ವಂಶದವನ್ನ ಬಿಟ್ಟು. ಈ ಗಂಧರ್ವ ವಂಶದ ವನ್ನ ಲವ್ ಮಾಡ್ಬೇಕನ್ನೊ ಮನಸ್ಸಾಗೇತಿ.

ಮೂರ್ತಿ– ಲಿಲ್ಲಿ ನಿನ್ನ ಮಾತ್ಕೇಳಿ ನನಗ ನಡುಗ ಬರಾಕ್ಹತ್ತೇತಿ. ಮೊದಲ್ಲು ನೀನು ಬೆರಿಕಿ ಹೆಣ್ಣಾದಿ. ಲವ್ ಮಾಡ್ತೀನಿ ಅಂದು... (ಕೆನ್ನೆ ಮುಟ್ಟಿ ಕೋಂಡು) ಬ್ಯಾಡ ಮರಾಯುಳ ನಿನ್ನ ಸಹವಾಸನ್ನ ಬ್ಯಾಡ ನನಗ.

ಲಿಲ್ಲಿ– ಸರಿ ಬಿಡ್ರುಗಾರ. ಆ ರಂಗೊಬ್ಬಾಂವ ಮೋಸ ಮಾಡಿದ. ಈಗ ನೀನೂ ನನ್ನ ಕೈ ಬಿಡಾಕ ತಯಾರಾಗಿದಿ ಅಂದಿಂದ. ನಾನ್ಯಾಕ ಬದುಕಿರ್ಲಿ? ಇಲ್ಲೇ ಯಾವ್ದರ ಮರಕ್ಕ ಉರ್ಲು ಹಾಕ್ಕೊಂತಿನಿ, ಬರ್ತೀನಿ.

ಮೂರ್ತಿ– ಸ್ವಲ್ಪ ತಡಿ. ನಾನೀಗ ಒಲ್ಲೆ ಅಂದ್ರು. ಸಾಯ್ತಿಯಾ?

ಲಿಲ್ಲಿ– ಈಗ್ಹೊಂಟಿನಲ್ಲ ಸಾಯಾಕ.

ಮೂರ್ತಿ– ಖರೇನ..ನೀ ನನ್ನ ಪ್ರೀತಿ ಮಾಡ್ತೀಯಾ?

ಲಿಲ್ಲಿ– ಮೊದಲು ಹೂಂ ಅನ್ನು. ಆವ್ಯಾಲ , ನೋಡು. ಹೆಂಗ ಮಾಡ್ತೀನಿ ಪ್ರೀತಿನ?

ಮೂರ್ತಿ– ಹೂಂ ಅಂತೀನಿ. ಆದ್ರ ನೀ ನನಗ ಮೋಸ ಮಾಡಬಾರು ನೋಡು.

ಲಿಲ್ಲಿ– ನಿನಗನುಮಾನಿದ್ರ ನಾಳೆನೆ ಮದಿವ್ಯಾಗಿ ಬಿಡಸಲ್ಲ.

ಮೂರ್ತಿ– ಆಂ, ಈಗ ಪೂರಾ ಖಾತ್ರ್ಯಾತು ನನಗ. ನೀ ಯಸ್ ಅಂದ್ರೆ ಇವತ್ತ್ನ ಕಟ್ತೀನಿ ತಾಳಿನ?

ಲಿಲ್ಲಿ– ಹಂಗನ್ನೋ ನನ್ನ ಚಕೋರ.

–ಪದ–

(ಪದ ಮುಗಿದ ನಂತರ)

ಮೂರ್ತಿ– ಲಿಲ್ಲಿ, ನೀನಂದಗ ನಾಳಿನೆ ಮದಿವಿ ವ್ಯವಸ್ಥ ಮಾಡ್ತೀನಿ. ಆದ್ರ ಮದವಿ ಎಲ್ಲಿಟ್ಕೊಳ್ಳೋದು?

ಲಿಲ್ಲಿ– ಸುಡುಗಾಡಿನ್ಯಾಗ.

ಮೂರ್ತಿ– ಆ? ಸುಡುಗಾಡಿನ್ಯಾಗ್ಹ? –

ಲಿಲ್ಲಿ– ಹೌದು. ಯಾಕಂದ್ರ, ಆ ರಂಗನೂ ಹುಡಿಗಿ ಕೂಡ ಅಲ್ಲಿಗ್ಬಂದಿರ್ತಾನೆ. ನಾವು ಮದುವ್ಯಾಗಿದ್ದು, ಮೊದ್ಲು ಅವರ ಕಣ್ಣಿಗ್ಬೆ ಬೀಳ್ಬೇಕು. ಅವರ ಹೊಟ್ಟಿ ಉರಿಬೇಕು.

ಮೂರ್ತಿ– ನಿನ್ನ ವಿಚಾರೇನೋ ಬರೊಬ್ಬರಿನೆ. ಆದ್ರ, ಸುಡುಗಾಡಿನ್ಯಾಗ ಮದಿವ್ಯಾಗೋದಂದ್ರ ನನಗ್ಯಾಕೋ ಸರಿ ಕಾಣವಲ್ದು.

ಲಿಲ್ಲಿ– ನನ್ಮಾಸಿಗೆ ಒಪ್ತಿಯಿಲ್ಲೀನು?

ಮೂರ್ತಿ– ಒಪ್ತೀನಿ, ಸುಡುಗಾಡಂದ್ರೂ ಸೈ. ಗಟಾರಂದ್ರೂ ಸೈ ನಿನಗ ತಾಳಿ ಕಟ್ತೀನಿ. ಆ ರಂಗ್ಯಾನ ಸೊಕ್ಕು ಮುರಿತೆನಿ.

ಲಿಲ್ಲಿ– ಗಂಡಂದ್ರೆ ನೀನೆ. ಹಂಗಾರ ನಾಳೆ ನೀನು...

ಮೂರ್ತಿ– ಮದುಮಗನಾಗಿ. ತಾಳಿ ಸಮೇತ ಸುಡುಗಾಡಿಗ್ಬರ್ತೀನಿ ತಾಳಿ ಕಟ್ತೀನಿ, ಆ ರಂಗ್ಯಾನ ಸೊಕ್ಕು ಮುರ್ದು, ನಿನ್ನ ಅಂಡಮಾನ್ ದ್ವೀಪಕ್ಕೆ ಹನಿಮೂನಿಗೆ ಕರ್ಕೊಂಡ್ಹೊಕ್ಕೀನಿ. ಆದ್ರ, ನೀ ನನಗ ಮೋಸ ಮಾತ್ರ ಮಾಡಬ್ಯಾಡ?

ಲಿಲ್ಲಿ– ನನ್ನ ದೇವರು ನೀನು. ನಿನಗ ಮೋಸ ಮಾಡ್ತೀನಾ?

ಮೂರ್ತಿ– ನಾ ನಿನಗೇನೊ ದೇವರಾದೆ, ಆದ್ರ ನಾವು ದೆವ್ವಗಳ ಸಾಕ್ಷಿಯಾಗಿ ಮದಿವ್ಯಾಗ್ಬೇಕಾತಲ್ಲ. ಅದು ಛಲೊನ. ಯಾಕಂದ್ರ ನಮ್ಮ ಜೋಡಿ ಖಾಯಂ ಜಂಟಿಯಾಗಿರಾಕ, ಜನ ಸಾಮಾನ್ಯರ ಆಶೀರ್ವಾದಕ್ಕಿಂತ, ಭೂತ, ಪ್ರೇತಗಳ ಆಶೀರ್ವಾದನ್ಹ ಸರಿ. ಹಂಗಾರ ನಾ ಬರ್ಲ?

ಲಿಲ್ಲಿ– ಈಗ್ಹೋಗು, ಮರಿದೆ ನಾಳೀ...

ಮೂರ್ತಿ– ಸುಡುಗಾಡಿಗ್ಬರ್ತೀನಿ, ತಾಳಿ ಕಟ್ತೀನಿ. ಆ ರಂಗ್ಯಾನ ಸೊಕ್ಕು ಮುರಿತೆನಿ (ಹೋಗುವನು)

ಲಿಲ್ಲಿ– ಹೋಗು ಮಗನೆ ಯಾರ ಸೊಕ್ಕು ಮುರಿತೆತಿ ಅನ್ನೋದು ನಾಳೆ... (ರಂಗ ಬರುವನು)

ರಂಗ– ಸುಡುಗಾಡಿನ್ಯಾಗ ಗೊತ್ತಾಗುತ್ತ, ಅಂತೂ ಲಿಲ್ಲಿ, ಆ ಮಗನ ಮುಂದ ಚಂದ ನಾಟಕ ಮಾಡಿದೆ.

ಲಿಲ್ಲಿ– ಒಟ್ಟಿವನ್ನ ಸುಡುಗಾಡಿಗೆ ಬರಾಕ ವ್ಯವಸ್ಥೆ ಮಾಡೇನಿ ಮುಂದಿಂದು ಏನ್ಮಾಡೋದು, ಬಿಡೋದು ನಿನಗ ಕೂಡಿದ್ದು.

ರಂಗ– ಅದರ ಚಿಂತಿ ಬಿಡು ಇವನ ಮದಿವಿನ ಹೆಂಗ ಮಾಡ್ತೀನಿ ನೋಡುವಂತಿ ನಡಿ.

(ಹೋಗುವರು)

## ಹದಿಮೂರನೆಯ ದೃಶ್ಯ

### ಮಿಲ್ಲಿನ ಆವರಣ

(ವನಜ ಕಾಟನ್ ಮಿಲ್ಲಿನ ದ್ವಾರ ಬಾಗಿಲು ಅರ್ಧ ವೃತ್ತಾಕಾರದಲ್ಲಿ ಮಿಲ್ಲಿನ ಹೆಸರು. ಮಧ್ಯಭಾಗದಲ್ಲಿ ಧರ್ಮಯ್ಯನವರ ಶಿಲಾಮೂರ್ತಿಯನ್ನು ಪ್ರತಿಸ್ಥಾಪಿಸಿದೆ. ಆ ಮೂರ್ತಿಯನ್ನೇ ನೋಡುತ್ತಾ ವನಜ ಚಿಂತಾಕ್ರಾಂತಳಾಗಿ ನಿಂತಿದ್ದಾಳೆ, ಭೋಜರಾಜ ಬಂದು ಅವಳನ್ನು ನೋಡಿ)

ಭೋಜರಾಜ– ವನಜ..., (ಸುಮ್ಮನಿರಲು) ವನಜಮ್ಮಾ.

ವನಜ– (ಎಚ್ಚೆತ್ತು, ಕಣ್ಣೊರೆಸಿಕೊಳ್ಳುತ್ತಾ) ಓನ್ನಿ ಮಾವ.

ಭೋಜರಾಜ– ನೋಡಮ್ಮಾ ವನಜ, ಮುಗಿದು ಹೋದ ಕಥೆಯನ್ನು ಮುಂಬರುವ ಬದುಕಿಗೆ ವ್ಯಥೆಯಾಗಿ ಅರಿಸಿಕೊಳ್ಳಬಾರದು. ಪಾಪದ ಕೊಡ ತುಂಬಿದ ಮೇಲೆ ಆಯುಷ್ಯವನ್ನು ಕೈಗಡ ತರಲು ಸಾಧ್ಯವಿದೆಯೇನಮ್ಮಾ? ಖಂಡಿತಾ ಸಾಧ್ಯವಿಲ್ಲ. ಅದರಂತೆ ಆ ಧರ್ಮಯ್ಯನಿಗೂ, ಈ ಭೂಮಿಗೂ ಋಣ ತೀರ್‍ತು, ಪ್ರಾಣ ಹೋಯ್ತು. ಅದಕ್ಯಾಕಮ್ಮಾ ಇಷ್ಟು ಚಿಂತೆ ಮಾಡ್ತೀಯಾ?

ವನಜ– ಅವರ ಸಾವು ಸಹಜವಾಗಿದ್ದರೆ ನಾ೯ಷ್ಟು ವೇದನೆ ಪಡುತ್ತಿರ ಲಿಲ್ಲ. ನೀಚರ ಗುಂಡಿಗೆ ಸಾಚಾ ಮನುಷ್ಯ ಬಲಿಯಾಗಿದ್ದನ್ನು ಕಂಡು, ನನ್ನ ಬುದ್ಧಿಗೆ ಮಂಕು ಕವಿದು ಬಿಟ್ಟಿದೆ. ನೀವೇ ಹೇಳಿ ಮಾವ, ಆ ಧರ್ಮಯ್ಯ ಧರ್ಮರಾಯನ ಗುಣದವರಲ್ಲವೆ? ಅವರನ್ನು ಈ ರೀತಿ ಕೊಲೆ ಮಾಡಿರುವುದು ಅನ್ಯಾಯವಲ್ಲವೆ?

ಭೋಜರಾಜ– ಅನ್ಯಾಯವಮ್ಮ. ಮಹಾ ಅನ್ಯಾಯ. ಅವರಾರೀತಿ ಕೊಲೆಯಾಗಿದ್ದನ್ನು ಕಂಡು ಧರ್ಮವೇ ಸತ್ತು ಹೋಯ್ತಲ್ಲಾ. ಇನ್ನು ನಾವು ಬದುಕುವುದರಲ್ಲಿ ಅರ್ಥವಿಲ್ಲಾಂತ. ನನ್ನಾತ್ಮ ನೊಂದು–ಬೆಂದು ಹೋಗಿದೆ. ಆದರೇನು ಮಾಡೋದಮ್ಮ. ನಮ್ಮ ಪಾಪದ ಕೊಡ ತುಂಬೋವರೆಗೂ ಪಾಲಿಗೆ ಬಂದದ್ದನ್ನು ಅನುಭವಿಸ್ಲೇಬೇಕಲ್ಲ?

ವನಜ– ಆ ರೀತಿ ಅವರನ್ನು ಕೊಲೆ ಮಾಡಿದವರು ಯಾರಿರಬೇಕು ಮಾವ ?

ಭೋಜರಾಜ– ಎಂಥಾ ಪ್ರಶ್ನೆ ಕೇಳಿದೆಯಮ್ಮ ? ಕಳವು ಮಾಡೋನು ಸುಳಿವು ಕೊಟ್ಟು ಕದಿತಾನೇನಮ್ಮ ? ಧರ್ಮಯ್ಯನ ಕೊಲೆ ಯಾವ ರೀತಿ ಸಮಸ್ಯೆಯಾಗಿದೆಯೆಂದರೆ, ಕೊಟ್ಟಿಗೆಯಲ್ಲಿ ಕಟ್ಟಿದ ಪಸುವನ್ನು, ಕಾಡಿನಿಂದ ಹುಲಿ ಬಂದು ತಿಂದು ಹೋದಂತಾಗಿದೆ. ಅಂದರೆ, ಆ ಹುಲಿ, ಬಹಳ ದಿನ ತನ್ನ ಪರಿಸರದಲ್ಲಿ ಆಹಾರ ಸಿಗದೆ ಹಸಿದಿರಬೇಕು. ತಾಳ್ಮೆ ಕಳೆದುಕೊಂಡು ಊರಿಗೆ ನುಗ್ಗಿ, ಪಸುವನ್ನು ತಿಂದಿರಬೇಕು. ಕಾರಣ, ಬಗೆ ಹರಿಯದ ಸಮಸ್ಯೆಗೆ ತಲೆ ಬಿಸಿ ಮಾಡುವುದಕ್ಕಿಂತ, ಮುಂದಿನ ಆಶಾ ಜೀವನದ ಕಡೆ ಗಮನ ಹರಿಸು ವುದೇ ಒಳ್ಳೆಯದು.

ವನಜ– ದುಃಖ ವ್ಯಕ್ತವಾಗುವ ಈ ಸಮಯದಲ್ಲಿ, ಆಶಾ ಜೀವನದ ಕಡೆ ಗಮನ ಹರಿಸಲು ಮನಸ್ಸಾದರೂ ಹೇಗೆ ಬರುತ್ತದೆ ಮಾವ ?

ಭೋಜರಾಜ– ಹಾಗಂತ, ಗೊತ್ತು ಮಾಡಿರೋ ಮದುವೆನ ತಪ್ಸೋ ದಕ್ಕೆ ಬರುತ್ತೇನಮ್ಮ ? ಈಗಾಗ್ಲೆ ವಿಕ್ರಂ, ಅರವಿಂದ ಕೂಡಿ, ಲಗ್ನಪತ್ರಿಕೆ ಹಂಚಿ, ಮದುವೆ ಸಿದ್ಧತೆಯಲ್ಲಿದ್ದಾರೆ.

ವನಜ– ಹಾಗಾದ್ರೆ. ಮದುವೆ ಮುಂದೂಡಲು ಸಾಧ್ಯವಿಲ್ಲವೇ ?

ಭೋಜರಾಜ– ಸಾಧ್ಯವೊ. ಅಸಾಧ್ಯವೊ ನೀನೇ ವಿಚಾರಿಸಿ ನೋಡಮ್ಮ. ಮದುವೆ ದಿನ, ಮುಹೂರ್ತದ ವೇಳೆ ಎಲ್ಲ ನಿಶ್ಚಯಿಸಿ ಆಗಿದೆ. ದೂರದೂರುಗಳಿಂದ ಆಹ್ವಾನಿತರಾದ ಗಣ್ಯ ವ್ಯಕ್ತಿಗಳು ಬರುವ ನಿರೀಕ್ಷೆಯಿದೆ ಅಂದಾಗ. ಆಗಿ ಹೋದ ಅನಾಹುತಕ್ಕೆ ಅಳುತ್ತಾ ಕುಳಿತರೆ. ಮುಂದಾಗೊ ಅವಮಾನವನ್ನು ಸಹಿಸೋದು ಅಸಾಧ್ಯವಾಗೋದಿಲ್ವೇನಮ್ಮ ? ಸುಮ್ನೆ ಯಾಕಮ್ಮ ಇಲ್ಲದ ವಿಚಾರಗಳಿಗೆ ತಲೆ ಕೆಡಿಸಿಕೊಳ್ತಿಯಾ ? ನಾನು ನಿನ್ನ ಹಿತಚಿಂತಕನೇ ಹೊರತು.. ಮನಸೊಯ್ಯೋ ವಂಚಕನಲ್ಲಮ್ಮ. ಎಲ್ಲಾ ಸರಿಯಾಗುತ್ತೆ ನೀನೇನೂ ಯೋಚನೆ ಮಾಡ್ಬೇಡಮ್ಮ.

ವನಜ– ಸರಿ ಮಾವ. ನಿಮ್ಮಿಷ್ಟ. ಆದರೆ. ನೀವು ನನಗೆ ಕೊಟ್ಟ ಮಾತನ್ನು ನೆರವೇರ್ಸಿ ಕೊಡ್ತೀರಲ್ವೆ?

ಭೋಜರಾಜ– ಅದೇ, ಆಸ್ತಿಯನ್ನು ಅರವಿಂದನ ಹೆಸರಿಗೆ ಮಾಡ್ಸೊದಲ್ವೆ?

ವನಜ– ಹೌದು ಮಾವ.

ಭೋಜರಾಜ– ಆ ಯೋಚನೆನೆ ಮಾಡಬೇಡಮ್ಮ. ನಿನ್ನಾಸೆ ಖಂಡಿತ ನೆರವೇರ್ಸಿ ಕೊಡ್ತೀನಿ. ಆದರೆ...

ವನಜ– ಆದರೇನು?

ಭೋಜರಾಜ– ಮದುವೆ ನೋಡಿದ್ರೆ ಮೂರ್ದಿನ ಉಳಿದಿದೆ. ನೀನ್ಹೇಳ್ತಿಯಾ, ಆಸ್ತಿ ಅರವಿಂದನ ಹೆಸರಿಗಾದ ನಂತರವೇ ತಾಳಿ ಕಟ್ಟಿಸಿಕೊಳ್ತೀನಿ ಅಂತ. ಆದ್ರೆ, ನಮ್ಮ ಫ್ಯಾಮಿಲಿ ವಕೀಲ್ರು ಅಮೇರಿಕಾಕ್ಕ್ಹೋಗಿದ್ದಾರಂತೆ. ಬರೋದು ಇನ್ನೂ ಒಂದು ತಿಂಗಳು ತಡವಾಗುತ್ತಂತೆ. ಕಾರಣ ಏನು ಮಾಡ್ಬೇಕು ಅಂತಾನೆ ನನಗೆ ತೋಚ್ತಾಯಿಲ್ಲ.

ವನಜ– ಅದಕ್ಯಾಕೆ ಯೋಚನೆ ಮಾಡ್ತೀರಿ? ಬಾಂಡ್ ಪೇಪರ್ ತರಿಸಿ, ಸಹಿ ಮಾಡಿ ಬಿಡ್ತೀನಿ. ನಂತರ ವಕೀಲ್ರು ಬಂದ ಮೇಲೆ. ವಿಲ್ ಬರೆಸಿದರಾಯ್ತು. ಒಟ್ಟಿನಲ್ಲಿ ನನ್ನ ಒಡೆಯರಾಗೋ ಅರವಿಂದರು, ನನಗೆ ತಾಳಿ ಕಟ್ಟೋ ದಿನವೇ ನನ್ನಾಸ್ತಿಗೂ ಒಡೆಯರಾದರೆನ್ನುವ ಭಾವನೆಯಾದರೂ ನನ್ನ

ಮನಕ್ಕೆ ಉಳಿಯಬೇಕು. ನಾ ಕೊಟ್ಟ ಮಾತಿಗೂ ಬೆಲೆ ಸಿಕ್ಕಂತಾಗಬೇಕು. ಅದೇ ನನ್ನ ಬಯಕೆ.

ಭೋಜರಾಜ– ಅಂತೂ ಸಮಸ್ಯೆಯನ್ನು ಸಲೀಸಾಗಿ ಬಗೆ ಹರಿಸಿದಿಯಮ್ಮ. ಒಟ್ಟು. ನಿನ್ನಾಸೆಗೆ ಆತಂಕವಾಗಬಾರದು ಅಷ್ಟೆ ಸರಿ. ನೀನು ಮನೆಗೆ ನಡಿಯಮ್ಮ. ನಾನು ಬಾಂಡ್ ಪೇಪರ್ ತಗೊಂಡು ವಿಕ್ರಂ ಹಾಗೂ ಅರವಿಂದರನ್ನ ಕರ್ಕೊಂಡು ಬರ್ತೀನಿ. (ಹೋಗುವನು)

ವನಜ– ನಿಜಕ್ಕೂ ನಮ್ಮಾವ ಮನುಷ್ಯರೂಪಕ್ಕೆ ಹೊರತಾದ ದೇವರು.

(ವಿಶಾಲ ಬರುವಳು)

ವಿಶಾಲ– ದೇವರಲ್ಲ, ದೆವ್ವ.

ವನಜ– ಯಾರ್ನೀನು?

ವಿಶಾಲ– ವಿಧಿ ಅನ್ನುವ ವ್ಯಾಧಿಗೆ ತುತ್ತಾಗಿ ಬಾಧೆ ಪಡುತ್ತಿರುವ ದುರ್ಭಾಗ್ಯಳು.

ವನಜ– ಇದ್ದಹುದು ಆದರೆ ದೇವರಂತಾ ನಮ್ಮಾವನಿಗೆ ದೆವ್ವ ಅನ್ನಲು ಕಾರಣವೇನು ?

ವಿಶಾಲ– ದೆವ್ವಕ್ಕ ದೇವರು ಅಂದೆಯಲ್ಲ, ಅದೇ ಕಾರಣ ನೋಡಮ್ಮಾ ಕಣ್ಣಿಗೆ ಕಾಣುವಂತೆ ಕೆಟ್ಟತನ ಮಾಡೋರಲ್ಲಿ ಒಂದು ಪಕ್ಷ ಮಾನವೀಯತೆ ಮನೆ ಮಾಡಿಕೊಂಡಿರಬಹುದು. ಆದರೆ ಬಾಯ್ತುಂಬ ತಂಗಿ ಅಂತ ಕರೆದು ಮನದಲ್ಲಿ ಅವಳ ಶೀಲ ಹಾಳು ಮಾಡುವ ಕೆಟ್ಟ ವಿಚಾರ ಇದ್ದವರಲ್ಲಿ ಮಾನವೀಯತೆ ಮಣ್ಣಲ್ಲಿ ಮುಚ್ಚಿದ ಹೆಣವಾಗಿ ಹೋಗಿರುತ್ತದೆ.

ವನಜ– ಅಂದ್ರೆ ?

ವಿಶಾಲ– ಅಂದ್ರೆ ಪ್ರಾಮಾಣಿಕತನ ಎದ್ದು ಕಾಣುವ ಇಂಥಾ ದೊಡ್ಡವರಲ್ಲಿ, ಆ ಪ್ರಾಮಾಣಿಕತನ ಕದ್ದು ಮನೆ ಮಾಡಿಕೊಂಡಿರುತ್ತದೆ. ತಾಯಿ ತೋರುವ ಮಮತೆಯನ್ನು ತಮ್ಮ ಕಾಮುಕ್ಕಾಗಿ ಬಳಸಿಕೊಳ್ಳುವ ಇಂಥ ಕಾಮ ಪಿಶಾಚಿಗಳಿಗೆ ದೆವ್ವ ಅನ್ನದೆ ದೇವರು ಅನುವುದು ನಮ್ಮ ಮೂರ್ಖತನದ ಪರಮಾವಧಿ ಮೀರಿದಂತಾಗುವುದಿಲ್ಲವೆ?

ವನಜ– ನೀನೇನು ತಲೆಕೆಟ್ಟವಳೋ, ಹುಚ್ಚು ಹಿಡಿದವಳೋ ಅಥವಾ ಮತ್ತೊಬ್ಬರ ಮನಸ್ಸನ್ನು ಹಾಳು ಮಾಡಲು ಹೊರಟಿರುವ ಮಾಟಗಾತಿಯೋ? ದೇವರು ಕಲ್ಲಿನ ರೂಪದಲ್ಲಿದ್ದರೂ ಕರಣೆಯುಳ್ಳವನೆನ್ನುವ ನಂಬಿಕೆ ನನ್ನದಾಗಿರುವಾಗ, ಆ ನನ್ನ ನಂಬಿಕೆಯನ್ನು ಕೊಂದು ನೀನೇನು ಸಾಧಿಸಲು ಹೊರಟಿರುವೆಯೋ ನನಗರ್ಥವಾಗುತ್ತಿಲ್ಲ.

ವಿಶಾಲ– ತಪ್ಪು ತಿಳಿಬೇಡ ತಾಯಿ ಸತ್ಯವನ್ನೇ ಹೇಳ್ತೀನಿ. ನಾನು ಸಾಧಿಸಲು ಹೊರಟಿರುವುದೇನೋ ನಿಜ. ಆದರೆ ಆ ಸಾಧನೆ ಮತ್ತೊಬ್ಬರ ಮನಸ್ಸನ್ನು ಮಲಿನ ಮಾಡುವುದಲ್ಲಮ್ಮ. ಹೆಣ್ಣು ಕುಲಕ್ಕೆ ಹುಣ್ಣಾಗಿರುವ ವಿಷಘಾತುಕ ಸೈತಾನರ ಸಂಹಾರ ಮಾಡುವುದು,

ವನಜ– ಅಂದರೆ?

ವಿಶಾಲ– (ದುಃಖ) ಮದುವೆ ಹಂದರದಲ್ಲಿ ಮಧುಮಗಳಾಗಿ ನಿಲ್ಲಬೇಕಾದ ನನ್ನನ್ನು ಮನಬಂದಂತೆ ಭೋಗಿಸಿ ಬೀದಿಯಲ್ಲಿ ನಿಲ್ಲಿಸಿರುವವರ ರಕ್ತ ದೋಕುಳಿಯಾಡುವುದು. ನನ್ನಂತೆ ನೀನೂ ಹೆಣ್ಣಲ್ಲವೆ? ಶೀಲ ಕಳೆದುಕೊಂಡವಳ ಬದುಕು ಒಡೆದ ಮಡಿಕೆಯನ್ನುವುದರ ಅರಿವು ನಿನಗಿಲ್ಲವೆ? ಇದ್ದರೆ ನೀನೇ ಹೇಳಮ್ಮಾ ನನ್ನ ಹೆಣ್ತನವನ್ನು ಮಣ್ಣು ಗೂಡಿಸಿದವರನ್ನು ದೇವರೆಂದು ಪೂಜಿಸಲೇ ಅಥವಾ ಕಣ್ಣು ಕಿತ್ತು ಕುರುಡರನ್ನಾಗಿಸಲೆ?

ವನಜ– ಅಂಥವರನ್ನಾಗಿಸುವುದರಲ್ಲಿ ಯಾವ ಅರ್ಥವೂ ಇಲ್ಲ. ಕೆಟ್ಟತನಕ್ಕಾಗಿಯೇ ಹುಟ್ಟಿದ ಅವರು ತಡವರಿಸುತ್ತಾ ಬಂದಾದರೂ ತಮ್ಮ ಚಟ ತೀರಿಸಿಕೊಂಡು ಬಿಡುತ್ತಾರೆ. ಇಂಥವರನ್ನು ಕರುಣೆಯಿಲ್ಲದೆ ಕಡಿದು ನಾಯಿ ನರಿಗಳ ಬಾಯಿಗೆ ಚೆಲ್ಲಬೇಕು.

ವಿಶಾಲ– ಒಪ್ಪಿದೆ ತಂಗಿ... ನಿನ್ನ ಕಟು ಸತ್ಯವನ್ನು. ಕೇವಲ ನನಗಾದ ಅನ್ಯಾಯವನ್ನು ಕೇಳಿಯೇ ನಿನಗಿಷ್ಟು ರೋಷ ಉಕ್ಕಿರಬೇಕಾದ್ರೆ, ಆ ಅನ್ಯಾಯಕ್ಕೆ ಬಲಿಯಾಗಿರುವ ನನಗಿನ್ನೆಷ್ಟು ಆಕ್ರೋಶ ಕುದಿಯುತ್ತಿರಬೇಕು.

ವನಜ– ಆ ರೀತಿ ನಿನ್ನ ಬದುಕಿನೊಂದಿಗೆ ಚೆನ್ನಾಡಿದ ತಿಳಿಗೇಡಿಗಳು ಯಾರಮ್ಮಾ?

(ವಕೀಲ ಬರುವನು)

ವಕೀಲ– ಒಬ್ಬರಲ್ಲ ಮೂವರಮ್ಮ.

ವನಜ– ವಕೀಲ್ರ ನೀವು...?

ವಕೀಲ– ಹೌದಮ್ಮ ನಾನೆ. ನಾನೀಗಾಗ್ಲೆ ಅಮೇರಿಕಾಗೆ ಹೋಗಿರುವುದಾಗಿ ನಿನ್ನ ಮಾವನವರು ತಿಳಿಸಿರಬೇಕಲ್ಲವೆ?

ವನಜ– ಹೌದು. ಆದರೆ...

ವಕೀಲ– ನಾನು ಅಮೇರಿಕಾಗೆ ಹೋಗಿಲ್ಲ, ಹೋಗುವ ಅವಶ್ಯವೂ ನನಗಿಲ್ಲ. ಇದೆಲ್ಲ ನಿಮ್ಮಾವ ಭೋಜರಾಜರ ಕಾರಸ್ಥಾನವಮ್ಮ.

ವನಜ– ಏನು ಕಾರಸ್ಥಾನವೇ?

ವಕೀಲ– ಹೌದಮ್ಮಾ. ಹೌದು. ಯಾರನ್ನು ನೀನು ದೇವರೆಂದು ತಿಳಿದುಕೊಂಡಿರುವೆಯೋ ಅವರ್‍ಯಾರೂ ಖಂಡಿತ ನಿನ್ನ ಪಾಲಿನ ದೇವರಲ್ಲಮ್ಮಾ ದೆವ್ವಗಳು. ಈಗ ನಿನ್ನೆದುರು ನಿಂತಿರುವ ಈ ಹೆಣ್ಣಿನ ನೇರ ಪರಿಚಯ ನನಗಿಲ್ಲದಿದ್ದರೂ ಇವಳ ಹಿನ್ನೆಲೆಯ ವಿಷಯವೇನೆಂಬುದನ್ನು ಧರ್ಮಯ್ಯನವರಿಂದ ತಿಳಿದುಕೊಂಡಿದ್ದೇನೆ.

ವನಜ– ಹಾಗಾದರೆ ಇವಳು ಹೇಳಿದಂತೆ...

ವಕೀಲ– ಶೀಲ ಕಳೆದುಕೊಂಡವಳಮ್ಮ. ಅದು ಒಬ್ಬರಿಂದಲ್ಲ ಮೂವರಿಂದ. ಅವರ್‍ಯಾರು ಗೊತ್ತೇನಮ್ಮ? ನಂಬರ್ ಒನ್ ನಿನ್ನ ಕಣ್ಣಿಗೆ ಸಭ್ಯ ವ್ಯಕ್ತಿಯಂತೆ ಕಾಣಿಸಿಕೊಳ್ಳುತ್ತಿರುವ ವಿಕ್ರಂ, ನಂಬರ್ ಟು ನಿನ್ನ ಮೆದುಳಿನ ನಿಯಂತ್ರಣವನ್ನೇ ತನ್ನ ಕೈಯಲ್ಲಿಟ್ಟುಕೊಂಡಿರುವ ಭೋಜರಾಜ, ನಂಬರ್ ಥ್ರೀ ನಿನ್ನ ಕೊರಳಿಗೆ ತಾಳಿ ಕಟ್ಟಿ, ತನಗೆ ದಕ್ಕುವ ಸಂಪತ್ತಿನಾಶೆಗೆ ಬಾಯ್ದೆರೆದ ಹೆಬ್ಬಾವಿನಂತಿರುವ ಡಾ॥ ಅರವಿಂದ.

ವನಜ– ಸಾರ್ ನೀವ್ಹೇಳ್ತಿರೋದು...?

ವಕೀಲ– ನಿನ್ನ ಸುತ್ತ ಪ್ರೇತವಾಗಿ ತಿರುಗುತ್ತಿರುವ ಕಪಟ ಹಿತೈಷಿಗಳು, ಜಟದ ಪ್ರಿಯಕರನ ಬಗ್ಗೆ ಹೇಳುತ್ತಿದ್ದೇನೆ. ಇವರೆಲ್ಲರೂ ನಿನ್ನ ಸಂಪತ್ತನ್ನು ತಮ್ಮ ಕೈವಶ ಮಾಡಿಕೊಳ್ಳಲು ಹೆಣಗುತ್ತಿದ್ದಾರೆ. ನಿನ ಕೈಯಿಂದ

ಖಾಲಿ ಬಾಂಡ್ ಪೇಪರಿಗೆ ಸಹಿ ಮಾಡಿಸಿಕೊಂಡು, ನಂತರ ನನ್ನಿಂದ ವಿಲ್ ಬರೆ ಸುವ ವಿಚಾರದಿಂದ ಹಣದಾಸೆ ತೋರ್‍ಸಿ, ನನ್ನನ್ನು ಅವರ ತಾಳಕ್ಕೆ ಕುಣಿ ಯಲು ಪ್ರೇರೇಪಿಸಿದರು. ಆ ಕ್ಷಣದಲ್ಲಿ ಒಪ್ಪಿಕೊಂಡವನಂತೆ ನಾಟಕ ಮಾಡಿ. ಈಗ ನಿನ್ನೆದುರು ಸತ್ಯ ಬಿಚ್ಚಿಡಲು ಓಡಿ ಬಂದೆ. ಯಾಕಂದ್ರೆ, ನಾನು ನಿನ್ನ ತಂದೆಯವರ ಪರಮ ಸ್ನೇಹಿತನಮ್ಮ.

ವನಜ– ವಕೀಲ್ರೆ. ವಕೀಲ್ರೆ ನನಗಿದನ್ನು ನಂಬುವುದಕ್ಕೆ ಆಗ್ತಾಯಿಲ್ಲ.

(ರಂಗ ಬರುವನು)

ರಂಗ– ನಂಬ್ಲೇಬೇಕವ್ವಾ. ನಂಬ್ಲೆ ಬೇಕು. ಇಲ್ಲಿದ್ರೆ ಈ ನನ್ನ ಮಕ್ಳು ನಿಮಗೆ ಮಣ್ಣು, ಮಣ್ಣು ತಿನಿಸ್ತಾರವಾ.

ವನಜ– ರಂಗಣ್ಣ...!

ರಂಗ– ಹೌದವ್ವ. ನಿಮ್ಮ ಕೈಯಾಗಿನ ಅಳುಮಗನ ಬಾಯಿಂದ ಕಟ್ಟ ಮಾತುಗಳು ಬರ್‍ತಾವಲ್ಲ ಅಂತ ದಯ ಮಾಡಿ ನನ್ನ ಮ್ಯಾಲೆ ಬೇಸ್ರ ಮಾಡ್ಕೋ ಬ್ಯಾಡ್ರಿ, ಇಷ್ಟು ದಿನ ನಿಮ್ಮಾವನವರು ಮಾಡ್ತಿದ್ದ ಅನ್ಯಾಯಗಳನ್ನೆಲ್ಲಾ ಮನಸ್ನಲ್ಲೇ ಇಟ್ಕೊಂಡು ಮರುಗ್ತಿದ್ದೆ. ಆದ್ರಿವತ್ತು, ಅನಿವಾರ್ಯವಾಗಿ ಹೇಳ್ಬೇಕಾಗೇತಿ ವನಜವ್ವ, ನೀವು ತಂದೆ ಅಂತ ನಂಬಿರೋ ಭೋಜರಾಜರಾಗ್ಲಿ. ಸಾಧು ಹಸು ಅಂತ ತಿಳಿದಿರೋ ವಿಕ್ರಂರಾಗ್ಲಿ. ನೀವು ಪ್ರೇಮಿಸಿರೋ ಅರವಿಂದ ರಾಗ್ಲಿ ಮನುಷ್ಯ ಕುಲ್ದಾಗ ಹುಟ್ಟಬಾರ್‍ದಿತ್ತವಾ. ಹುಟ್ಟಿ. ಮನುಷ್ಯ ಜಾತಿಗೇ ಕಳಂಕ ಹಚ್ಚಿ ಬಿಟ್ಟಾರ. ಇವರು ಮಾಡ್ತಿರೋ ಅನ್ಯಾಯ ಒಂದಲ್ಲ ಎರಡಲ್ಲ, ನೂರಾರು. ಸಾವಿರಾರು.

ವಕೀಲ– ಈ ನೀಚರಿಂದ ಎಷ್ಟೋ ಹೆಣ್ಣುಗಳ ಶೀಲ ಮಣ್ಣು ಪಾಲಾಗಿವೆ.

ರಂಗ– ಅದೆಷ್ಟೋ ಹೆಣಗಳು ಕೆರೆ, ಭಾವಿಗಳಲ್ಲಿ ತೇಲಾಡಿದ್ದಾವೆ.

ವಕೀಲ– ಇದೇ ನಿಮ್ಮಾವ ಭೋಜರಾಜ. ಟೈಪಿಸ್ಟ್ ಲಿಲ್ಲಿನ ಬಲತ್ಕಾರ ಮಾಡಾಕ್ಹೋಗಿದ್ದ.

ರಂಗ– ಅಷ್ಟೇ ಅಲ್ಲವ್ವಾ, ದೇವರಂತ ಧರ್ಮಯ್ಯನವರ ಕೊಲೆ ಮಾಡಿದ ಚಂಡಾಲುಗ್ರು ಇವರೇ ಕಣವ್ವ, ಇವರೆ. (ವನಜ ತಲೆ ಸುತ್ತಿ ಬೀಳುವಳು. ಎಲ್ಲರೂ ಗಾಬರಿಯಿಂದ ಅವಳತ್ತ ಹೋಗುವಾಗ ತೆರೆ)

## ಹದಿನಾಲ್ಕನೆಯ ದೃಶ್ಯ

### ರಸ್ತೆ

(ಭೋಜರಾಜನಿಗೆ, ವಕೀಲ ಎದುರಾಗುವನು)

ವಕೀಲ– ನಾಶವಾಯ್ತು, ಭೋಜರಾಜರೆ, ಸರ್ವನಾಶವಾಯ್ತು.

ಭೋಜರಾಜ– ಯಾಕ್ರಿ, ಏನಾಯ್ತು?

ವಕೀಲ– ವನಜ ನಿಮ್ಮನಿಗೆ ಬಂದಿದ್ಲು.

ಭೋಜರಾಜ– ಏನು, ವನಜ ನಿಮ್ಮನಿಗೆ ಬಂದಿದ್ಲ?... ಅಂದ್ರ, ನಿಮ್ಮನ್ನ ನೋಡೇ ಬಿಟ್ಲ?

ವಕೀಲ– ನೋಡೋದೇನು, ಮಾತೂ ಆಡ್ಸಿದ್ಲು.

ಭೋಜರಾಜ– ವಕೀಲ್ರೆ, ವಕೀಲ್ರೆ ನಾ ಹೇಳಿದ್ದೇನು? ನೀವು ಮಾಡಿದ್ದೇನು? ನೀವೀಗಾಗ್ಲೆ ಅಮೇರಿಕಾಕ್ಕೆ ಹೋಗಿದ್ದೀರಿ ಅಂತ ಅವಳಿಗೆ ಹೇಳಿ ಬಿಟ್ಟಿದ್ದೆ. ಈಗ ನೀವಿಲ್ಲಿ ಎಂಥಾ ಅನಾಹುತ ಮಾಡಿ ಬಿಟ್ಟಿದ್ದೀರಿ. ನೀವ್ಯಾಕ ಹೊರಗ ಬರಾಕ್ಹೋಗಿದ್ರಿ?

ವಕೀಲ– ನಾನ್ಯಾಕ ಹೊರಗಡೆ ಬರ್ಲಿ? ಮನಿ ಒಳಗ್ಗ ಕುಂತಿದ್ದೆ. ವನಜ ತನ್ನ ಗೆಳತಿಯೊಬ್ಬಾಕಿನ ಕರ್ಕೊಂಡು, ಒಮ್ಮಿಗೆ ಒಳಗ ಬಂದೇ ಬಿಟ್ಲು. ಬಂದವಳ್ಹ ಯಾಕ್ರಿ ವಕೀಲ್ರೆ ಅಮೇರಿಕಾಕ್ಕೆ ಹೋಗಿಲ್ವೆ ಅಂತ ಕೇಳಿದ್ಲು.

ಭೋಜರಾಜ– ನೀವೇನ್ಹೇಳಿದ್ರಿ?

ವಕೀಲ– ಹೊರಟಿದ್ದೆ, ಆದ್ರ ನನ್ನ ಸ್ನೇಹಿತರೊಬ್ಬರು ತೀರಿಕೊಂಡ ಕಾರಣ ತಾತ್ಕಾಲಿಕ ತಡೆ ಹಿಡಿಬೇಕಾಯ್ತು ಅಂದೆ. ಅದಕ್ಕವಳು ಹಾಗಾಗಿದ್ದೇ ಒಳ್ಳೆದಾಯ್ತು ಅನ್ನಬೇಕೆ?

ಭೋಜರಾಜ– ಅಂದ್ರೆ, ಆಸ್ತಿನ ಅರವಿಂದನ ಹೆಸರಿಗೆ ವಿಲ್ ಬರಿಯೋ ವಿಚಾರ ಹೇಳಿದ್ಲೇನು?

ವಕೀಲ– ವಿಲ್ ಬರಿಯೋ ವಿಚಾರವೇನೋ ಹೇಳಿದ್ಲು. ಆದ್ರೆ ಅರವಿಂದನ ಹೆಸರಿಗಲ್ಲ, ತನ್ನ ಗೆಳತಿ ಹೆಸ್ರಿಗೆ.

ಭೋಜರಾಜ– ಏನ್ಹೇಳ್ತಾಯಿದೀರಿ ನೀವು?

ವಕೀಲ– ಇರೋ ವಿಷಯಾನೆ ಹೇಳ್ತೀದೀನಿ. ಅಲ್ಲಮ್ಮಾ ಇವಳ್ಯಾರು? ಆಸ್ತಿನ ಇವಳೆಸ್ಲರಿಗೆ ಬರ್ಕೋದಿಕ್ಕೆ ಕಾರ್ಣೇನು? ಅಂತ ಕೇಳಿದೆ. ಅದಕ್ಕವಳು, ಆ ವಿಷಯ ಏನೂ ಕೇಳ್ಬೇಡಿ. ನಾನು ಮೆಜಾರ್ಟಿಗೆ ಬಂದಿರೋಳು, ನನ್ನಾಸ್ತಿನ ಇಷ್ಟಾ ಬಂದವರಿಗೆ ದಾನ ಮಾಡ್ತೀನಿ ಅಂತ ನನ್ನ ಬಾಯಿ ಮುಚ್ಚಿಸಿಬಿಟ್ಲು. ಹೀಗಾಗಿ, ಬೇರೆ ದಾರಿ ಇಲ್ದೆ ನಾನವಳ ಗೆಳತಿ ಹೆಸರಿಗೆ ವಿಲ್ ಬರ್ದುಬಿಟ್ಟೆ.

ಭೋಜರಾಜ– ಏನಂದ್ರಿ... ವಿಲ್ ಬರ್ದೇ ಬಿಟ್ರ್ಯಾ? ನೀವ್ಹೇಳ್ತೀರೋದು

ವಕೀಲ– ನಮ್ಮಪ್ಪನಾಣೆ ಸತ್ಯ.

ಭೋಜರಾಜ– ಥತ್ ಮೂರ್ಖ ವಕೀಲ. ವಿಲ್ ಬರೆದು ಮುಗಿಸಿ, ಆ ವಿಷಯ ನನಗ ತಿಳಿಸಿ, ನನ್ನ ಹೊಟ್ಟೆಗೆ ಕಿಚ್ಚು ಹಚ್ಚಲು ಬಂದಿದ್ದೀಯಾ? ವಕೀಲ ಇದರಲ್ಲಿ ನಿನ್ನದೇನೋ ಕೈವಾಡವಿದೆ. ಆದರಿಷ್ಟೆ, ನಾ ಪ್ರತ್ಯಕ್ಷ ಪ್ರಮಾಣಿಸಿ ನೋಡಿದ ನಂತರ, ನನ್ನ ಸ್ವಾಧೀನವಾಗಬೇಕಾದ ಆಸ್ತಿಗೆ ಯಾರೇ ಮುತ್ತಿಗೆ ಹಾಕಿರಲಿ, ಅವರ ಪ್ರಾಣ ಹೀರದಿದ್ರೆ ನಮ್ಮಪ್ಪನ ಮಗನೇ ಅಲ್ಲ. ನೆನಪಿಟ್ಕೊ ವಕೀಲ, ನೆನಪಿಟ್ಕೊ (ಹೋಗುವನು)

ವಕೀಲ– ನನಗೇನು ನೆನಪಿಟ್ಕೋ ಅಂತಿಯೋ ಅವಿವೇಕಿ. ನ್ಯಾಯಕ್ಕೆ ದೂರಾಗಿ, ಅನ್ಯಾಯ ಹೋರಾಡಿ ಗೆಲ್ಲೋದು ಕಷ್ಟ. ಈ ಮಾತು ನೀ ನೆನಪಿಟ್ಕೊ. (ಹೋಗುವನು)

## ಹದಿನೈದನೆಯ ದೃಶ್ಯ
## ಸುಡುಗಾಡು ಸೀನಿನ ಪರದೆ

(ಮೂರ್ತಿ ಮದುಮಗನ ವೇಷದಲ್ಲಿ ಬರುವನು)

ಮೂರ್ತಿ– ಎಲ್ಲಿಗ್ಬಂತ್ರಿ, ನನ್ನ ಮದಿವಿ ಫಜೀತಿ? ಕೈ ತಪ್ಪಿದ ಹೆಣ್ಣು, ಮತ್ತ ದಕ್ತನ್ನೋ ಸಂತೋಷ ಒಂದು ಕಡಿಗಾದ್ರೆ, ಮದಿವಿ ಮುಹೂರ್ತ ಸುಡುಗಾಡಿನ್ಯಾಗ ಪ್ರಾರಂಭ ಆಗೋ ಹೊತ್ತ್ ಬಂತಲ್ಲಾ ಅನ್ನೋ ಸಂಕಟ ಮತ್ತೊಂದು ಕಡೆ. ಆಗ್ಲಿ ಸುಡುಗಾಡಿನ್ಯಾಗ್ಲ ಆಗ್ಲಿ. ಒಟ್ಟ ಆ ಲಿಲ್ಲಿ ಕೊಳ್ಳಿಗೆ ತಾಳಿ ಕಟ್ಟಿ ಅಕಿ ಸೊಕ್ಕು ಮುರಿತೆನಿ ತೀರ್ತು. ಹೌದು, ಇಕೇನು ಇನ್ನು ಬರ್ಲಿಲ್ಲಲ್ಲ? ಕೈ ಕೊಟ್ಲೇನು ಮತ್ತ? ಯಾಕಂದ್ರ ಬಲು ಚೆರಿಕೆ ಹೆಣ್ಣದು. (ಆ ಕಡೆ ನೋಡಿ) ಯಾರೋ ಯಜಮಾನ್ರು ಈ ಕಡೆನೆ ಬರ್ತಿದಾರಲ್ಲ? ನನ್ನ ಮದಿವ್ಯಾಗೋ ಕಾಲಕ್ಕ ಯಾಪ್ಪದ್ರ ಹೆಣ ತರಾಕ್ಹತ್ಯಾರೇನಂತೀನಿ? (ಯಜಮಾನನ ವೇಷದಲ್ಲಿ ಲಿಲ್ಲಿ ಬರುವಳು) ನಮಸ್ಕಾರ್ರಿ ಯಜಮಾನ್ರೆ.

ಲಿಲ್ಲಿ– ಯಾರದು? (ನೋಡಿ) ಮದುಮಗನ ವೇಷದಾಗ ಬಂದಿದಿಯಂದ್ರ, ಆ ಹುಡಿಗ್ಹೇಳಿದ ಹುಡುಗ ಸೀನ ಇರಬೇಕು. ನಿನ್ನ ಹೆಸರು ಮೂರ್ತೇನಪಾ?

ಮೂರ್ತಿ– ಹೌದು ಅಂದಂಗ ನೀವ್ಯಾರು? ಸುಡುಗಾಡಿಗೆ ಬಂದು ನನ್ನ ಹೆಸರು ಸೈತ ಹೇಳ್ತಿರಲ್ಲ.

ಲಿಲ್ಲಿ– ಎಂಥಾ ಹುಚ್ಚದಿಯೋ ನೀನು. ನನ್ನ ಕೈಯಾಗಿರೋ ಸಾಮಾನು ನೋಡಿದ್ರ ಗೊತ್ತಾಗುತ್ತ ನಾ ಯಾರು ಅಂತ.

ಮೂರ್ತಿ– ಗೊತ್ತಾತೇಳ್ರಿ. ಶವ ಇನ್ನೂ ದೂರೈತೇನ್ರಿ ?

ಲಿಲ್ಲಿ– ಶವ ? ಯಾವ ಶವ ? ಯಾರ ಶವ ?

ಮೂರ್ತಿ– ಸಧ್ಯ ನೀವ್ಯಾರ ಶವಕ್ಕ ಬಂದಿರಿ ?

ಲಿಲ್ಲಿ– ತಮ್ಮ, ನನ್ನ ಯಾರಂತ ತಿಳದಿ ನೀನು ?

ಮೂರ್ತಿ– ಸಮಾಧಿ ಮ್ಯಾಲ ಕುಂತು, ಮಂತ್ರ ಹೇಳೋ ಸ್ವಾಮ್ಯಾರಲ್ಲ ನೀವು ?

ಲಿಲ್ಲಿ– ತಪ್ಪು ನಿಂದಲ್ಲಪ್ಪಾ, ಆ ಹುಡುಗಿ ಮಾತು ಕೇಳಿ ಇಲ್ಲಿಗೆ ಬಂದೀನಲ್ಲ ನನ್ನ ತಪ್ಪು. ನೋಡಪಾ ನನ್ನ ಹೆಸರು ಗೋವಿಂದ ಶಾಸ್ತ್ರೀ ಅಂತ. ಸಧ್ಯ ನಿನ್ನ ಮದಿವಿ ಮಾಡಾಕ ಬಂದೀನಪ.

ಮೂರ್ತಿ– ಅಂದ್ರ ಲಿಲ್ಲಿ ಕಳಸ್ಯಾಳೇನ್ರಿ ನಿಮ್ಮನ್ನ?

ಲಿಲ್ಲಿ– ಹೂಂ. ಈಗ ತಿಳದಂಗಾತ ನೋಡು ನನಗ. ಆ ಹುಡುಗಿ ನನ್ನ ಹತ್ರ ಬಂದು ಹಿಂಗ ಸುಡುಗಾಡಿನ್ಯಾಗ ಮದಿವಿ ಇಟ್ಕೊಂಡಿವಿ. ದಯಮಾಡಿ ನೀವು ಬಂದು ನಮ್ಮ ಮದಿವಿ ಮಾಡಿ, ಆಶೀರ್ವಾದ ಮಾಡ್ಬೇಕು ಅಂದ್ಲು. ಮದಿವಿ ಜಗಾ ಕೇಳೀ ವಿಚಾರಕ್ಕ ಬಿದ್ದಿದ್ದೆ. ಕೂಸಿಗೆ ಆಕಿನ ಎಲ್ಲಾ ತಿಳಿಸ್ಯಾಳಿ. ಇಲ್ಲಿಗೆ ಕಳಿಸಿಕೊಟ್ಟಾಳೇನಪಾ.

ಮೂರ್ತಿ– ದಯಮಾಡಿ ಕ್ಷಮಾ ಮಾಡ್ರಿ. ನಾ ಬ್ಯಾರೆನ ತಿಳಿದಿದ್ದೆ ನಿಮ್ಮನ್ನ. ಈ ಸುಡುಗಾಡಿನ್ಯಾಗ ನಿಂತೀನಲ್ಲ ದಿಕ್ಕ ತಿಳಿದಂಗಾಗೇತಿ ನನಗ. ಅಲ್ರಿ ಶಾಸ್ತ್ರಿಗಳ ಹಿಂದಕ್ಯಾವರ ಸುಡುಗಾಡಿನ್ಯಾಗ ಮದಿವ್ಯಾಗ್ಯಾವೇನ್ರಿ? ಯಾಕಂದ್ರ ನಾನ್ನ ಮೊದಲಿನವನಾಗಬಾರ್ದಂತ.

ಲಿಲ್ಲಿ– ರಗಡಾಗ್ಯಾವ ನೀ ಚಿಂತಿ ಬಿಡು. ಇದಕ್ಕಿಂತ ಪವಿತ್ರವಾದ ಜಗ ಮತ್ತೊಂದಿಲ್ಲೇನಪಾ. ಇಲ್ಲಿ ನಿಂತು ನೀ ಹಾಕೋ ತಾಳಿ ಗಂಟು, ಬ್ರಹ್ಮ ಗಂಟಾಗುತ್ತ.

ಮೂರ್ತಿ– ನೀವಿಷ್ಟು ಧೈರ್ಯ ಕೊಟ್ಟವ್ಯಾಲ ಮಾತ್ಯಾಕ ತಡ. ಎಲ್ಲಿದಾಳ ಕರಿರಿ ಲಿಲ್ಲಿನ ಸಟ್ನ ಕಟ್ಟೇ ಬಿಡ್ತೀನಿ ತಾಳಿನ.

ಲಿಲ್ಲಿ– ಸ್ವಲ್ಪ ತಡಿ ತಮ್ಮ ನಾನಕಿನ ಇಲ್ಲೆ ದೇವಸ್ಥಾನದಾಗ ಕುಂದ್ರಿಸಿ ಬಂದೀನಿ. ಸಧ್ಯ ಕರ್ಕೊಂಡ್ಬಂದು ಮದಿವಿನೂ ಮಾಡ್ತೀನಿ. ಆದ್ರ, ನಾನು ಆ ಹುಡುಗಿಗೆ ತಂದಿದ್ದಂಗ. ಹಿಂಗಾಗಿ ನಮ್ಮ ಸಂಪ್ರದಾಯದ ಪ್ರಕಾರ ಮದಿವಿ ಮಾಡಿ ಕೊಡ್ತೀನು ಅದಕ್ಕ ನೀನು ಅಡ್ಡಿ ಮಾಡಬಾರದು.

ಮೂರ್ತಿ– ಸುಡುಗಾಡಿನ್ಯಾಗ ನಿಂತೀನಿ, ಸುಡುಗಾಡು ಸಂಪ್ರದಾಯದಾಗ ಮದಿವಿ ಮಾಡಿಕೊಡ್ರಿ. ನಾ ಕಣ್ಣು ಮುಚ್ಕೊಂಡು ತಾಳಿ ಕಟ್ತೀನಿ. ಮುದಲಕೀನ

ಲಿಲ್ಲಿ– ಅಲ್ಲಂಗಾರ ಸಭ್ಯ ಕರ್ಕೊಂಡು ಬರ್ತೀನಿ.

ಮೂರ್ತಿ– ಅಂತೂ ನನ್ನ ಮದಿವಿ ಗಟ್ಟ್ಯಾದಂಗಾತು. ಅದ್ರೂ ಲಿಲ್ಲಿ ಕೊರಳಿಗೆ ತಾಳಿ ಕಟ್ಟಿ. ಆ ರಂಗ್ಯಾನ ಮುಂದ ಮೀಸಿ ಮುರಿ ಮಾಡಿ ನಿಂತಾಗ ನನಗ ಸಮಾಧಾನ.

(ಲಿಲ್ಲಿ ಹೆಣ್ಣಿನ ವೇಷದಲ್ಲಿರುವ ರಂಗನನ್ನು ಕರೆತರುತ್ತಾ)

ಲಿಲ್ಲಿ– ಬಾ ತಂಗಿ ಬಾ. ಈಗ್ಲೆ ಇಷ್ಟು ನಾಚಕೊಂಡ್ರ ಹೆಂಗ.

ಮೂರ್ತಿ– ಹಾಯ್ ಲಿಲ್ಲಿ...

ಲಿಲ್ಲಿ- ಅಂ...ಅ... ಸಂಪ್ರದಾಯ. ಸಂಪ್ರದಾಯ ತಾಳಿ ಕಟ್ಟೋತನ ಇಕಿನ್ನ ಮಾತಾಡಿಸಬಾರ್ದು. ನೋಡ್ತಾರ್ದು ತಿಳಿತಿಲ್ಲ?

ಮೂರ್ತಿ– ಹೌದ್ದು. ತಾಳಿ ತರ್ರಿಲ್ಲಿ

ಲಿಲ್ಲಿ– ಕೊಡ್ತೀನಿ ಯಾಕವಸರ ಮಾಡ್ತಿ? (ಹೂವಿನ ಹಾರ ಕೊಡುತ್ತಾ) ಮೊದ್ಲು ಹಾರ ಒಬ್ಬರಿಗೊಬ್ರು ಹಾಕ್ರಿ. (ಇಬ್ರೂ ಹಾರ ಬದಲಾಯಿಸುವರು) ತಾಳಿ ಹಿಡ್ಕೊ ತಮ್ಮ (ಕೊಟ್ಟು) ನಾ ಮಂತ್ರ ಅಂತೀನಿ, ನೀನು ಕಣ್ಣು ಮುಚ್ಚಿಕೊಂಡು ತಾಳಿ ಕಟ್ಬೇಕು.

ಮೂರ್ತಿ– ಕಣ್ಣು ಮುಚ್ಚಿಕೊಂಡ?

ಲಿಲ್ಲಿ– ಸಂಪ್ರದಾಯ–ಸಂಪ್ರದಾಯ.

ಮೂರ್ತಿ– ಆತು. ದೌಡು ಮಂತ್ರ ಅನ್ರಿ. ಕಣ್ಣು. ಕಿವಿ ಎಲ್ಲಾ ಮುಚ್ಕೊಂಡೇ ತಾಳೀ ಕಟ್ತೀನಿ.

ಲಿಲ್ಲಿ– ಹಂಗಾರ ಶುರು ಮಾಡ್ಲಾ ?

ಮೂರ್ತಿ– ಇನ್ನೂ ಕೇಳ್ತಿರಲ್ಲ. ತಡ ಅದ್ರ. ನಾನ್ನ ಶುರು ಮಾಡ್ತೀನಿ ಮಂತ್ರ ಅನ್ನಾಕ.

ಲಿಲ್ಲಿ– ಬ್ಯಾಡ ನಾನಂತೀನಿ (ಮಂತ್ರ ಅನ್ನುವಳು, ಮೂರ್ತಿ ತಾಳಿ ಕಟ್ಟುವನು) ಅಡ್ಡಿ ಇಲ್ಲ ತಾಳಿ ಚಂದ ಕಟ್ಟಿ. ಸರ್ವೀಸ್ ಚಾಳಾಗಿರ್ಬೇಕು.

ಮೂರ್ತಿ– ಅಂದ್ರ. ಒಂದೈದಾರ್ನೂರು ತಾಳಿ ಕಟ್ಟೇನಂತ ತಿಳಿದೀದೇನು?

ಲಿಲ್ಲಿ– ಹಂಗಲ್ಲ. ಮದವಿ ಮನಿ ಬಾಳಹ್ವಾಡಿದಿ ಅಂದೆ.

ಮೂರ್ತಿ– ಆತು, ನಮಗ ಆಶೀರ್ವಾದ ಮಾಡಿ ಜಗಾ ಬಿಡ್ರಿ. ಲಿಲ್ಲಿ ಯಜಮಾನರ ಕಾಲಿಗೆ ಬೀಳು. (ಕಾಲಿಗೆ ಬೀಳುವರು)

ಲಿಲ್ಲಿ– ವರ್ಷ ತುಂಬೋದ್ರಾಗ ಅವಳಿ–ಜವಳಿ ಪ್ರಾಣಿಗಳಿಗೆ ಜೀವ ಕೊಡ್ರಿ.

ಮೂರ್ತಿ– ಪ್ರಾಣಿಗಳಿಗಾ...?

ಲಿಲ್ಲಿ– ಅಂದ್ರ ನಮ್ಮ ಸಂಪ್ರದಾಯದಾಗ....

ಮೂರ್ತಿ– ಸ್ಟಾಪ್. ನಿಮ್ಮ ಸಂಪ್ರದಾಯದ ಅವಧಿ ಮುಗಿತು. ಇನ್ನು ನನ್ನ ಸಂಪ್ರದಾಯ ಪ್ರಾರಂಭಾಗುತ್ತ. ನೀವು ಮನಿಗೆ ನಡಿರಿ. ಆಮ್ಯಾಲ ಬಂದು ದಕ್ಷಿಣೆ ಕೊಡ್ತೀನಿ.

ಲಿಲ್ಲಿ– ಹಂಗ ಮಾಡು ಯಾರು ಬ್ಯಾಡಂತಾರ. (ರಂಗನಿಗೆ) ತಂಗಿ ನಾ ನಡಿಲೇನವಾ? (ರಂಗ ತಲೆಯಾಡಿಸುವನು) ಹುಡಿಗಿ ಬಾಳ ನಾಚುತ್ತ. ನಾ ನಡಿತೇನಿ. ನಿನ್ನ ರಸ ಸನ್ನಿವೇಶ ಪ್ರಾರಂಭ ಮಾಡಿಕೊ. (ಹೋಗುವಳು)

ಮೂರ್ತಿ– ಲಿಲ್ಲಿ ಹೋಗಿಗೂ ನೀ ನನ್ನ ಹೆಂಡ್ತಿ ಆದೆಲ್ಲ. ನಾನೇ ಪುಣ್ಯವಂತ. ಸಧ್ಯ ಈ ಮುಸುಕು ತೆಗೆದು ನಿನ್ನ ಮುದ್ದು ಮುಖ ತೋರ್ಸು. ಸಣ್ಣ ಮುತ್ತು ಕೊಡ್ತೀನಿ. ಅದ್ನ ಮತ್ತಿನಾಗ ಹನಿಮೂನಿಗೆ ಹೋಗೂಣಂತ.

ರಂಗ– (ಮುಸುಕು ತೆಗೆದು) ನೋಡ್ಹಂಗಾರ ನನ್ನ ಮುಸುಡಿನ. ಕೊಡು ನಿನ್ನ ಮುತ್ತನ್ನ.

ಮೂರ್ತಿ– ರಂಗ್ಯಾ...ನೀನ್ನು...? (ಓಡಿಹೋಗುವಾಗ ಹಿಡಿದು)

ರಂಗ– ಎಲ್ಲಿಗ್ಹೋಗುವೆ ಪ್ರಾಣಕಾಂತ ?

ಮೂರ್ತಿ– ಕೈ ಬಿಡಲೆ ರಂಗ, ನಿನ್ನ ಕಣ್ಣಿಗೆ ಕಾಣದಂಗ್ಹೊಕ್ಕೀನಿ.

ರಂಗ– ಇದೇನು ಪತಿದೇವಾ ? ಈಗ ತಾನೆ ಭೂತ. ಪ್ರೇತಗಳ ಸಾಕ್ಷಿಯಾಗಿ ತಾಳಿಕಟ್ಟಿ. ಈಗೊಮ್ಮಿತ್ಗೆ ಹೋಗ್ತೀನಿ ಅಂತಿರಲ್ಲ ? ಯಾಕೆ ನನ್ನ ರೂಪ ನಿಮಗೆ ಹಿಡಿಸಲಿಲ್ಲವೆ ? ನನ್ನ ಜೊತೆಗೆ ಹನಿಮೂನಿಗೆ ಬರುವುದಿಲ್ಲವೆ ?

ಮೂರ್ತಿ– (ಬಾಯಿ ಬಡಿದುಕೊಂಡು) ನಿನ್ನೊಡ ಹೆಸಿಮೂನ ? ಬ್ಯಾಡಲಿಯುಪ್ಪಾ. ನನ್ನ ಕೈ ಬಿಟ್ಟುಬಿಡು.

ರಂಗ– ಹಾಗಂದ್ರೆ ಹೇಗೆ ಪ್ರಿಯ ? ನಾವಿಬ್ರೂ ಹನಿಮೂನಿಗೆ ಹೋಗಬೇಕು, ಗಂಡು ಮಗನ್ನ ಹಡದು, ನಿಮ್ಮ ವಂಶಜ್ಯೋತಿ ಬೆಳಗಿಸಬೇಕು.

ಮೂರ್ತಿ– ಶ್ರೀಹರಿ. ಪಾಂಡುರಂಗಾ. ಕೇಳಲಾರೆ... ಕೇಳಲಾರೆ.

ರಂಗ– ಪತಿದೇವ, ವಿರಹ ವೇದನೆ ನಾ.ತಾಳಲಾರೆ... ತಾಳಲಾರೆ.

ಮೂರ್ತಿ– ನಾನಿನ್ನ ಮುಖ ತೋರಿಸಲಾರೆ... ತೋರಿಸಲಾರೆ. (ಕೊಸರಿಕೊಂಡು ಓಡುವನು)

ರಂಗ– ಪತಿದೇವಾ... ಪ್ರಾಣಕಾಂತಾ... ನಾನೂ ಬರುತ್ತೇನೆ ತಡಿ ಪ್ರಿಯ. (ಹಿಂಬಾಲಿಸುವನು)

## ಹದಿನಾರನೆಯ ದೃಶ್ಯ

### ಮಿಲ್ಲಿನ ಆವರಣ

(ವಿಶಾಲ, ವನಜಾ, ವಕೀಲ ಇರುವರು)

ವಕೀಲ– ನೋಡವ್ಮಾ ವನಜ ಬಹಳ ಜಾಣ್ಮೆಯಿಂದ ಆ ಮೂವರ ಅಂತರಾತ್ಮದ ಗುಟ್ಟು ತಿಳಿಯಲು ಪ ಯತ್ನ ಪಡು. ದುಡುಕಬೇಡ. ಅಷ್ಟರಲ್ಲಿ ನಾನು ಪೋಲೀಸರನ್ನು ಕರೆದುಕೊಂಡು ಬರ್‍ತೀನಿ. ನೀನು ಅಷ್ಟೆ ವಿಶಾಲಮ್ಮ. ಅವರಿಂದ ವಂಚಿತಳಾಗಿದ್ದೇನೆಂದು, ಆವೇಶದಲ್ಲಿ ಅನಾಹುತ ಮಾಡಬೇಡ. ಅವರನ್ನು ಕಾನೂನಿಗೆ ಒಪ್ಪಿಸೋಣ. ಶಿಕ್ಷೆ ನಂತರ ತೀರ್ಮಾನವಾಗಲಿ.

ವಿಶಾಲ– ವಕೀಲ್ರೆ. ಸಧ್ಯ ನಾನು ಮನುಷ್ಯಳಾಗಿ ಉಳಿದಿಲ್ಲ. ಆದ್ರೂ ಕರ್ತವ್ಯ ಮರೆಯುವುದಿಲ್ಲ. ನೀವು ಹೋಗಿ ಬನ್ನಿ (ಒಳಗ್ಹೋಗುವಳು)

ವಕೀಲ– ವನಜಮ್ಮ. ಇವಳ ಮಾತು ಕೇಳಿದ್ರೆ, ನನಗೇಕೋ ಭಯವಾಗ್ತಿದೆ. ನೀ ಸ್ವಲ್ಪ ಹುಷಾರಿಯಿಂದಿರಮ್ಮ. ನಾ ತಕ್ಷಣ ಬಂದ್ಬಿಡ್ತೀನಿ.

ವನಜ– ನನ್ನ ಮನಸ್ಸು ಸ್ತಿಮಿತದಲ್ಲಿಲ್ಲ ವಕೀಲ್ರೆ. ಆದೇನು ಮಾಡ್ತಿರೊ ನೀವೇ ಮಾಡ್ರಿ.

ವಕೀಲ– ನೀವೇನೂ ವಿಚಾರ ಮಾಡಬೇಡಮ್ಮ. ಆ ಮೂರ್ತಿ ಹಿಂಭಾಗದಲ್ಲಿ ಟೇಪ್‌ರಿಕಾರ್ಡರ್ ಆನ್ ಮಾಡಿಟ್ಟಿದ್ದೇನೆ. ಯಾಕಂದ್ರೆ ಕೋರ್ಟಿನಲ್ಲಿ ಇವರ ವಿರುದ್ಧ ಸಾಕ್ಷಿಗೆ ಅದೇ ಆಧಾರವಾಗುತ್ತದೆ. ಧೈರ್ಯವಾಗಿರಮ್ಮ ಬರ್ತೀನಿ. (ಹೋಗುವನು)

ಭೋಜರಾಜ– ವನಜಾ...

ವನಜ– ಬರಬೇಕು ಮಾವನವರು. ಯಾಕೆ. ಬಹಳ ಖಿನ್ನವಾಗಿದ್ದೀರಲ್ಲ?

ಭೋಜರಾಜ– ಇಲ್ಲ. ಆಸ್ತಿಯನ್ನು ಕಂಡವರ ಹೆಸರಿಗೆ ಬರೆದಿರುವ ನಿನ್ನ ಮುಂದೆ ಶಿರಬಾಗಿ ನಿಲ್ತೀನಿ.

ವನಜ– ನನ್ನ ಆಸ್ತಿಯನ್ನು ಕಂಡವರ ಹೆಸರಿಗೆ ಬರೆದಿಲ್ಲ ಮಾವ. ನನ್ನ ಜೀವದ ಗೆಳತಿಗೆ ತ್ಯಾಗ ಮಾಡಿದ್ದೇನೆ.

ವಿಕ್ರಂ– ಇದು ತ್ಯಾಗವಲ್ಲ. ನಿನ್ನ ಹುಚ್ಚುತನ ಅಂತಾ. ನಿನ್ನ ಜೀವದ ಗೆಳತಿಯಾಗಿದ್ದರೆ, ಅವಳ ಮೇಲೆ ಅಷ್ಟೊಂದು ಪ್ರೀತಿಯಿದ್ದರೆ. ಅವಳನ್ನು ಮನೆಯಲ್ಲೇ ಇಟ್ಟುಕೊಂಡು ಸಾಯೋವರ್‍ಗೂ ಹೊಟ್ಟೆ. ಬಟ್ಟೆಗೆ ಕೊರತೆಯಾಗದಂತೆ ನೋಡಿಕೊಳ್ಳಬೇಕಾಗಿತ್ತು. ಅದೆಲ್ಲ ಬಿಟ್ಟು ಇಡೀ ಆಸ್ತಿಯನ್ನು ತ್ಯಾಗದ ರೂಪದಲ್ಲಿ ಅವಳಿಗೊಪ್ಪಿಸಿರುವುದು. ನಿನ್ನ ದುಡುಕು ಬುದ್ಧಿಯ ಅತಿರೇಕತನ.

ವನಜ– ಆ ರೀತಿ ಭಾವಿಸಿದರೆ. ನನ್ನ ದುರ್ಧೈವ. ಅದೃಷ್ಟ. ನನ್ನ ಗೆಳತಿಯ ಸಮಸ್ಯೆಯೊಂದನ್ನು ಬಗೆ ಹರಿಸುವುದಕ್ಕಾಗಿ ನಾನಿಂತ ತ್ಯಾಗ ಮಾಡ್ಲೇಬೇಕಾಯ್ತು.

ಭೋಜರಾಜ– ಏನದವಳ ಅಂಥಾ ಸಮಸ್ಯೆ?

ವನಜ– ಯಾರೋ ನೀಚನೊಬ್ಬ ನನ್ನ ಗೆಳತಿಯನ್ನು ಪ್ರೇಮಿಸಿ ಮದುವೆಯಾಗುವೆನೆಂದು ನಂಬಿಸಿ, ಮೈಕೆಡ್ಸಿ, ಈಗ ಕೈಕೊಟ್ಟಿದ್ದಾನೆ. ನನ್ನ ಗೆಳತಿ ಅವನನ್ನು ಮದುವೆಯಾಗೆಂದು ಒತ್ತಾಯಿಸಿದಾಗ. ನಿನ್ನನ್ನು ಪ್ರೀತಿಸಿದ್ದು, ಮೋಹಿಸಿದ್ದು ಮೋಜಿಗೇ ಹೊರತು. ಮದುವೆಯಾಗುವುದಕ್ಕಲ್ಲ ಅಂದನಂತೆ ಆ ವಂಚಕ. ನಿನ್ನನ್ನು ಮದುವೆಯಾದರೆ ನನಗೆ ಸಿಗುವ ಭಾಗ್ಯ

ಮೇನು? ಬಯಸಿದವರಿಗೆ ಬಂಗಾರ ತುಂಬಿಕೊಂಡು ಹೊಸ್ತಿಲು ದಾಟಿ ಬರುವ ಹೆಣ್ಣುಗಳು ಸಾಕಷ್ಟಿವ್ದಾರೆ ಎಂದು ಬಡಾಯಿ ಕೊಚ್ಚಿಕೊಂಡಿದ್ದಾನಂತೆ. ಅಂದಾಗ, ಅವನ ಅಂತಸ್ತು ಯಾವ ಮಟ್ಟದಲ್ಲಿರಬೇಕು ನೀವೇ ಹೇಳಿ ಮಾವ.

ಭೋಜರಾಜ– ಅವನನ್ನು ನೋಡಿದ್ದರಲ್ಲವೆ ಹೇಳುವುದು.

ವನಜ– ಅಂತವರು, ನಮ್ಮಂತವರಿಗೆ ಕಾಣುವುದೂ ಕಷ್ಟ ಮಾವ. ಯಾಕಂದ್ರೆ, ಅವರ ಅಂತಸ್ತು ಕುಬೇರನ ಪ್ರತಿರೂಪದಲ್ಲಿದೆಯೋ. ತಿರಿದು ತಿನ್ನುವ ತಿರುಕನಿಗಿಂತಲೂ ಕೀಳಾಗಿದೆಯೋ ಅನ್ನುವುದು ನಮಗೆ ತಕ್ಷಣ ಗೊತ್ತಾಗಿ ಬಿಡುತ್ತದೆ. ಆದ್ರೂ ಆ ನೀಚ ಯಾವ ಕೊರತೆಯನ್ನು ಕಂಡು ನನ್ನ ಗೆಳತಿಯನ್ನು ಕೈ ಬಿಟ್ಟಿದ್ದಾನೋ, ಆ ಕೊರತೆ ನೀಗಿದವಳೆಂದು ಅರಿತು, ಮತ್ತವಳ ಸ್ಥಿತಿ ಸುಧಾರಿಸಲಿ ಎಂದು ನಾನೀ ಕೆಲಸ ಮಾಡಿದ್ದೀನೆ. ಇದನ್ನು ಒಪ್ಪುತ್ತೀರೋ, ತಪ್ಪು ಅಂತೀರೂ?

ಭೋಜರಾಜ– ತಪ್ಪೊ, ಒಪ್ಪೊ ಒಟ್ಟು ನೀನು ತಿಪ್ಪೆಯ ಪಾಲಾಗುವುದು ನಿಜ. ನಿನ್ನ ಗೆಳತಿ ಕೊರಳಿಗೆ ತಾಳಿ ಕಟ್ಟುವವನ ಅಧೀನಕ್ಕೆ ಆಸ್ತಿಯಾಗುವ ನಿನ್ನಾಸ್ತಿ, ಮತ್ತೆ ಬಯಸಿದರೆ ಸಿಗುವುದೆಂದು ಭಾವಿಸಿರುವಿಯೇನು?

ವನಜ– ಸಿಗಲಿ, ಬಿಡಲಿ. ನನಗಂತೂ ನೋವಿಲ್ಲ. ಜೀವದ ಗೆಳತಿಯ ಬಾಳು ಬಂಗಾರವಾದ್ರೆನ್ನುವ ಸಂತೋಷವಾದ್ರು ಆಗುತ್ತೆ.

ಭೋಜರಾಜ– ನಿನ್ನ ಸಂತೋಷಕ್ಕೆ ಬೆಂಕಿ ಬಿತ್ತು. ಮುಂದಿನ ನಮ್ಮ ಬದುಕು. ನಿನ್ನ ಬದುಕಿನ ಬಗ್ಗೆ ವಿಚಾರ ಮಾಡಿರುವಿಯೇನು?

ವನಜ– ನನ್ನ ಬದುಕಿನ ಬಗ್ಗೆ ನಾ ವಿಚಾರ ಮಾಡಿದ್ದೀನೆ. ಆದ್ರೆ, ನಿಮ್ಮ ಬದುಕಿನ ಬಗ್ಗೆ ನಾನ್ಯಾಕೆ ವಿಚಾರ ಮಾಡ್ಲಿ? ನೀವು ನನ್ನಾಸ್ತಿಯನ್ನೇ ನಂಬಿ ಬದುಕುತ್ತಿಲ್ಲವಲ್ಲ? ತಂದೆ ತಾಯಿ ಕಳೆದುಕೊಂಡವಳೆಂದು ತಿಳಿದು, ನನ್ನನ್ನು, ನನ್ನಾಸ್ತಿಯನ್ನು ಸಂರಕ್ಷಿಸುವ ಹೊಣೆ ಹೊತ್ತಿದ್ದಿರಷ್ಟೆ. ಎಷ್ಟಾದ್ರೂ ನೀವು ನಿಸ್ವಾರ್ಥ ಜೀವಿಗಳು. ಮೇಲಾಗಿ ಮೀಸೆ ಹೊತ್ತ ಗಂಡಸರು. ನಿಮ್ಮ ಬದುಕನ್ನು ನಿಮ್ಮ ಸ್ವಂತಿಕೆಯಲ್ಲಿ ರೂಪಿಸಿಕೊಳ್ಳುವ ಸ್ವಾಭಿಮಾನಿಗಳೇ ಹೊರತು, ಬಾಂಧವ್ಯ ಸಂಬಂಧಗಳ ನೆಪದಲ್ಲಿ, ಕಂಡವರ ಆಸ್ತಿಯನ್ನು ಆಶಿಸುವ ಅಜ್ಞಾನಿಗಳಲ್ಲ ಅಂದಾಗ, ನಿಮ್ಮ ಬದುಕಿನ ಬಗ್ಗೆ ನಾನ್ಯಾಕೆ ವಿಚಾರ ಮಾಡ್ಲಿ? ಇನ್ನು

ನನ್ನ ಬದುಕಿನ ಬಗ್ಗೆ ನಾನೇನೂ ವಿಚಾರ ಮಾಡುವಂತಿಲ್ಲ. ಯಾಕೇಂದ್ರೆ ಅರವಿಂದರು ನನ್ನನ್ನು ಮದುವೆಯಾಗಿ, ನನ್ನ ಬದುಕಿಗೆ ಮಾರ್ಗದರ್ಶಕರಾಗ್ತಾರೆ. ಅಲ್ಲವೆ ಅರವಿಂದ?

ಅರವಿಂದ– ಈ ನಿನ್ನ ಹುಚ್ಚುತನದ ಮಾತಿಗೆ ನಗಬೇಕೋ. ಅಳಬೇಕೋ ಗೊತ್ತಾಗುತ್ತಿಲ್ಲ. ಜಿಪುಣನ ಹತ್ತಿರ ದಾನ ಕೇಳಿದಂತಾಯ್ತು ನಿನ್ನ ಪ್ರಶ್ನೆ.

ವನಜ– ಆದರೆ, ನೀವೇನು ಜಿಪುಣರಲ್ಲವಲ್ಲ?

ಅರವಿಂದ– ಜಿಪುಣನಲ್ಲ, ಅವನಿಗಿಂತ ನಿಪುಣ, ಜಿಪುಣ. ಪೈಸಕ್ಕೆ ಪೈಸಾ ಸೇರ್ಸಿ ಗಂಟು ಮಾಡ್ತಾನೆ, ನಿಪುಣ. ಕೂಡಿಟ್ಟ ಗಂಟನ್ನ ಲಪಟಾಯಿಸ್ತಾನೆ. ಅದರಂತೆ ನಾನಾದ್ರೂ ನಿನ್ನನ್ನು ಪ್ರೀತಿಸಿದ್ದು ಅಂದ ಚಂದ ನೋಡಿಯಲ್ಲ, ನಿನಗೆ ತಾಳಿ ಕಟ್ಟಿದರೆ ಸಿಗಬಹುದಾದ ಧನಕನಕಗಳ ಆಸೆಯಿಂದ.

ವನಜ– ಹಾಗಾದ್ರೆ ನಿಮ್ಮ ಪ್ರೀತಿ. ಪ್ರೇಮ. ಆದರ್ಶ ಎಲ್ಲಾ ಸುಳ್ಳೆ?

ಅರವಿಂದ– ಸುಳ್ಳಲ್ಲ ನಿಜವೆ! ಆದರೆ, ಮರಣ ಪರ್ಯಂತರ ಅಲ್ಲ, ಕಾರ್ಯ ಸಾಧಿಸುವತನಕ ಇದುವರೆಗೂ ನಿನ್ನಾಸ್ತಿಯನ್ನುವ ಸೂಜಿಗಲ್ಲು. ನನ್ನ ಮೆದುಳೆನ್ನುವ ಕಬ್ಬಿಣವನ್ನು ತನ್ನೆಡೆಗೆ ಸೆಳೆದುಕೋಡು ವಿಚಾರ ದೂರ ಹೋಗದಂತೆ ತಡೆ ಹಿಡಿದಿತ್ತು. ಯಾವಾಗ ನಿನ್ನಾಸ್ತಿ ಮತ್ತೊಬ್ಬರ ಸೊತ್ತಾಯಿತೋ ಆವಾಗಲೇ ಸೂಜಿಗಲ್ಲು, ಸಾಮಾನ್ಯ ಕಲ್ಲಾಗಿ ತನ್ನ ಆಕರ್ಷಣ ಶಕ್ತಿಯನ್ನು ಕಳೆದುಕೊಂಡು ವಿಚಾರ ಕವಲೊಡೆಯಲು ನನ್ನ ಮೆದುಳಿಗೆ ಪರ್ಮಿಷನ್ ಕೊಟ್ಟಂತಾಯಿತು. ಸಧ್ಯ ನನ್ನ ಮೆದುಳನ್ನು ನಿಯಂತ್ರಿಸುವ ಕೇಂದ್ರಬಿಂದು ಎಲ್ಲಿದೆಯೋ ನನಗೂ ತಿಳಿದಿಲ್ಲ.

ವನಜ– ಅರ್ಥವಾಯ್ತು ಡಾಕ್ಟ್ರೆ, ನಿಮ್ಮ ಒಳಗುಟ್ಟಿನ ಮರ್ಮ ಅದರಂತೆ ನನ್ನಂತರಾತ್ಮದ ಗುಟ್ಟೊಂದು ನಿಮಗೂ ಅರ್ಥವಾಗಬೇಕಲ್ಲ?

ಅರವಿಂದ– ಏನದು ನಿನ್ನ ಗುಟ್ಟು?

ವನಜ– ಅಂ... ಆ..., ಹೇಳ್ತೀನಿ. ಅದಕ್ಕಿಂತ ಮೊದ್ಲು, ನಿಮ್ಮ ನೀಚ

ಗುಣಗಳ ಪರಿಚಯವನ್ನು ನೀವಾಗೇ ನನಗೆ ಮಾಡಿ ಕೊಟ್ಟಿದ್ದಕ್ಕೆ ನನ್ನ ಧನ್ಯ ವಾದಗಳು. ವಿ॥ ಭೋಜರಾಜ...

ಭೋಜರಾಜ– ವನಜ ಏನಿದು?

ವನಜ– ಯಾವುದು?

ಭೋಜರಾಜ– ನೀನು ನನ್ನನ್ನು ಭೋಜರಾಜ ಎಂದು ಕರೆಯುತ್ತಿರುವುದು.

ವನಜ– ನೀನು ಭೋಜರಾಜನಲ್ಲದೆ ಮತ್ತೇನು ತ್ಯಾಗರಾಜನೆ? ಎಲ್ಲಿಯವರೆಗೆ ನಿನ್ನ ಒಳಮುಖದ ಪರಿಚಯವಿರಲಿಲ್ಲವೋ, ಅಲ್ಲಿಯವರೆಗೂ ಮಾವನಾದರೂ ತಂದೆಯ ಸ್ಥಾನದಲ್ಲಿದ್ದೆ. ಈಗ ನಿನ್ನ ವ್ಯಾಘ್ರಮುಖ ಕಂಡ ನಂತರ ತಂದೆಯಾದರೂ ನನ್ನ ದೃಷ್ಟಿಯಲ್ಲಿ ಹಂದಿಯೇ ಹೋಗತು. ಮಹಾತ್ಮ ಗಾಂಧಿಯಾಗಲಾರೆ. ನೀವು ಮನುಷ್ಯರೂಪಕ್ಕೆ ಹೊರತಾದ ಪಶುಗಳು. ಹೆಂಡತಿ ಯಾರು? ತಾಯಿ ಯಾರು? ಮಗಳಿಗೂ ಇವರಿಗೂ ಇರುವ ವ್ಯತ್ಯಾಸವೇನು? ಯಾರೊಡನೆ ಯಾವ ರೀತಿ ವರ್ತಿಸಬೇಕೆನ್ನುವ ಪರಿಜ್ಞಾನವಿಲ್ಲದೆ, ಭಾರತ ಮಾತೆಯ ಪ್ರತಿರೂಪವಾದ ಹೆಣ್ಣಿನ ಶೀಲವನ್ನು ಹಂಚಿಕೊಂಡವರೇ.... ನೀವು ಸಾಮಾನ್ಯ ಕಾಮುಕರಲ್ಲ. ತಾಯಿಯ ಪಕ್ಕದಲ್ಲಿ ಮಲಗಿ ನಾಯಿಯಂತೆ ವರ್ತಿಸುವ ತಾಯ್ಗಂಡರು ನೀವು.

ವಿಕ್ರಂ– ವನಂದೇ......?

ಭೋಜರಾಜ– ವಿಕ್ರಂ, ಯಾಕಪ್ಪಾ ಸುಮ್ಮನೆ ತ್ರಾಸು ತಗೊಂತಿಯ? ಪಾಪ, ಬಹಳ ದಿನದ ನಂತರ ನಮ್ಮ ದೊಡ್ಡಗುಣ ಅವಳಿಗೆ ಅರ್ಥವಾಗಿದೆ ಯೆಂಬಾಗ. ಆನಂದ ಹೆಚ್ಚಾಗಿ ಆತುರದಲ್ಲಿ ಸ್ವಲ್ಪ ಅಂಕೆ ತಪ್ಪಿ ಮಾತಾಡ್ತಿದ್ದಾಳೆ ಅಷ್ಟೆ. ಇದನ್ನೆಲ್ಲಾ ತಿಳಿದವರಾದ ನಾವು ಸೀರಿಯಸ್ಸಾಗಿ ತಗೋಬಾರ್ದು. ನಮಗವಳು ತಂದೆ ಅಂದ್ರೇನು? ಹಂದಿ ಅಂದ್ರೇನು? ನಾವಂತೂ ಈ ಸಮಾಜದಲ್ಲಿ ಜೂನಿಯರ್ ಗಾಂಧಿಗಳಾಗೇ ಇರ್ತೀವಿ. ಅಂದ ಹಾಗೆ, ವನಜಾ ದೇವಿ..., ಈ ಆಸ್ತಿಯ ಅಧಿಕಾರಿ, ಆ ನಿನ್ನ ಗೆಳತಿ ಎಲ್ಲಿದ್ದಾಳೆ ಹೇಳ್ತೀಯೇ ನಮ್ಮಾ?

(ವಿಶಾಲ ಒಳಗಿನಿಂದ ಬರುವಳು)

ವಿಶಾಲ– ನಾನಿಲ್ಲಿ ಇದ್ದೇನೆ ಭೋಜರಾಜ.

ಭೋಜರಾಜ– ಯಾರು, ವಿಶಾಲ...?

ವನಜ– ಹೌದು ವಿಶಾಲ. ನನ್ನಾಸ್ತಿಯನ್ನು ಇವಳಿಗೇ ತ್ಯಾಗ ಮಾಡಿರುವುದು ಯಾಕೆಗೊತ್ತೇನು? ಹಣ್ಣಿನಂತೆ, ಇವಳ ಶೀಲ ಹಂಚಿ ತಿಂದಿರುವ, ನಿಮ್ಮನ್ನು ಹುರುಪುಗೊಳಿಸುವುದಕ್ಕಾಗಿ. ಯಾಕಂದ್ರೆ. ಆಸ್ತಿ ದಕ್ಕುವುದೆಂದರೆ, ಒಂದು ಪೆಣ್ಣು ಕತ್ತೆಗೂ ತಾಳಿ ಕಟ್ಟಲು ಸಿದ್ಧರಿರುವ ದೊಡ್ಡಗುಣದವರಲ್ಲವೆ ನೀವು?

ಭೋಜರಾಜ– ವೆರಿಗುಡ್ ಚನ್ನಾಗರ್ಥ ಮಾಡಿಕೊಂಡಿರುವಿ ನಮ್ಮ ಗುಣಗಳನ್ನು. ಈ ಮೊದಲು ಆಸ್ತಿಯಿಲ್ಲದ ಇವಳನ್ನು ಕೇವಲ ನಮ್ಮ ಭೋಗದ ವಸ್ತುವಾಗಿ ಬಳಸಿಕೊಂಡೆವು. ವೇಶಿಯೆಂದು ಅಪಹಾಸ್ಯ ಮಾಡಿದವು ಆದರೆ ಸಧ್ಯ ಆಸ್ತಿಯ ಬಡತಿಯಾಗಿರುವ ಇವಳೀಗ ನಮಗೆ ಮಹಾ ಪತಿವ್ರತೆಯಾಗಿ ಕಾಣುತ್ತಿದ್ದಾಳೆ.

ವಿಕ್ರಂ– ಸಧ್ಯ ಅವಳೊಪ್ಪಿದ್ರೆ ಸಾಕು. ಭಾರತದ ಯಾವ ಹೆಣ್ಣಿಗೂ ದೊರೆಯದ ಭಾಗ್ಯವೆನ್ನುವಂತೆ ಮೂರು ತಾಳಿಗಳು ಅವಳ ಕೊರಳಿಗೇರಲು ಸಿದ್ಧ ಕಾರಣ ತಾಳಿ ಕಟ್ಟಿಸಿಕೊಳ್ಳುವವಳ ವಿಚಾರವೇನಿದೆ ಕೇಳು, ನಾವು ಕಟ್ಟುವ ಮೂರು ತಾಳಿಗಳಿಗಷ್ಟೇ ಕೊರಳು ನೀಡುತ್ತಾಳೊ ಅಥವಾ...

ಅರವಿಂದ– ಹೊಸ ಇತಿಹಾಸ ಸೃಷ್ಟಿಸುವುದಕ್ಕಾಗಿ, ಒಬ್ಬರಿಂದ ಎರಡರಂತೆ ಆರು ತಾಳಿಗಳನ್ನು ಕಟ್ಟಿಸಿಕೊಳ್ಳಲು ಬಯಸುತ್ತಾಳೋ?

ವನಜ– ಛೀ... (ವನಜ ಹೋಗುವಳು)

ವಿಶಾಲ– ಭಲೇ ಗಂಡಸರೇ ಭಲೇ ನಿಮ್ಮನ್ನು ಹೊತ್ತು ನಿಂತಿರುವ ಭೂದೇವಿ ಕೂಡ ಹೆಮ್ಮೆ ಪಡಬೇಕು. ನಿಮ್ಮ ದಯಾಳು ಮಾತು ಕೇಳಿ. ಒಂದೇ ತಾಳಿಯ ಬಾಗಕ್ಕಾಗಿ ಹೆಣಗಿ ಹೆಣವಾಗುತ್ತಿರುವ ಹೆಣ್ಣುಗಳ ಸಾಲಿನಲಿ

ಆರು ತಾಳಿಗಳ ಭಾಗ್ಯ ಪಡೆದು ಬಂದಿರುವ ಪುಣ್ಯವಂತೆ ನಾನೆಂದರೆ ತಪ್ಪಾಗಲಾರದು. ಆದರೆ...

ವಿಕ್ರಂ– ಆದರೆ...?

ವಿಶಾಲ– ಆರು ತಾಳಿಗಳನ್ನು ಕಟ್ಟಲು ನೀವು ಸಿದ್ಧರಿದ್ದರೂ, ಕಟ್ಟಿಸಿಕೊಳ್ಳಲು, ಹಿಂದೂ ಸಂಸ್ಕೃತಿ ಆದರಿಸುವ ನನ್ನ ಮನಸೊಪ್ಪುತ್ತಿಲ್ಲ. ಕಾರಣ...

ಅರವಿಂದ– ಕಾರಣ...?

ವಿಶಾಲ– ನನ್ನ ಮೈ ಕದ್ದಿರುವ ಮೂವರಲ್ಲಿ ಯಾರಾದರೊಬ್ಬರು ನನಗೆ ಪತಿಯಾಗಬಹುದು. ಯಾರು ನನ್ನ ಕೊರಳಿಗೆ ತಾಳಿ ಕಟ್ಟುವರೋ ಅವರೇ ನನ್ನಾಸ್ತಿಗೆ ಒಡೆಯರಾಗುತ್ತಾರೆ. ಇದನ್ನು ಗಮನದಲ್ಲಿಟ್ಟುಕೊಂಡು. ವಿಚಾರಿಸಿ. ಯಾರು ನನ್ನ ಕೊರಳಿಗೆ ತಾಳಿ ಕಟ್ಟುವಿರೋ ಹೇಳಿ.

ಅರವಿಂದ– ಯಾರೇಕೆ? ನಾನು ನಿನ್ನ ಕೊರಳಿಗೆ ತಾಳಿ ಕಟ್ಟುತ್ತೇನೆ.

ವಿಕ್ರಂ– ಅದೆಂದಿಗೂ ಸಾಧ್ಯವಿಲ್ಲ. ಇವಳನ್ನು ಪ್ರೀತಿಸಿ, ಮದುವೆಯಾಗುತ್ತೇನೆಂದು ಮಾತು ಕೊಟ್ಟ ಮೊದಲಿಗ ನಾನು. ಅಂದಾಗ, ಇವಳನ್ನು ಮದುವೆಯಾಗುವ ಹಕ್ಕು ನನಗಲ್ಲದೆ ಮತ್ತಾರಿಗೂ ಇಲ್ಲ.

ಅರವಿಂದ– ಹಕ್ಕು? ಯಾವ್ದೋ ನಿನ್ನ ಹಕ್ಕು? ನೀನಿವಳನ್ನು ಪ್ರೀತಿಸಿರಬಹುದು, ಮದುವೆಯಾಗುತ್ತೇನೆಂದು ಮಾತೂ ಕೊಟ್ಟಿರಬಹುದು. ಅದ್ರದು, ಮುಗಿದ ಕಥೆ, ಕಾಣದ ಕೃತ್ಯ. ನಾನಿವಳನ್ನು ಭೋಗಿಸಿರುವುದನ್ನು ನೀವೇ ಸಿದ್ಧ ಮಾಡಿ ತೋರಿಸಿದ್ದೀರಿ. ಅಂದಾಗ ಇವಳನ್ನು ಮದುವೆಯಾಗುವ ಹಕ್ಕು ನನಗೆ ಮಾತ್ರ ಇರೋದು.

ವಿಕ್ರಂ– ನೆವ್ಹರ್, ಇವಳನ್ನು ಮದುವೆಯಾಗುವವನು ನಾನು.

ಅರವಿಂದ– ನೀನಲ್ಲ, ನಾನು.

ವಿಕ್ರಂ– ಬೇಡ ಅರವಿಂದ, ಸುಮ್ಮನೆ ಹಟ ಮಾಡಬೇಡ.

ಅರವಿಂದ– ನೀನೂ ಅಷ್ಟೆ. ಇವಳಾಸೆ ಬಿಟ್ಟು ಇಲ್ಲಿಂದ ತೊಲಗು ಇಲ್ಲಾಂದ್ರೆ...

ವಿಕ್ರಂ– ಇಲ್ಲಾಂದ್ರೆ . ? ಏನೋ ಮಾಡ್ತಿಯಾ?.

ಅರವಿಂದ– (ಪಿಸ್ತೂಲು ತೆಗೆಯುತ್ತ) ಏನ್ಮಾಡ್ತೀನಿ?...ನಿನ್ನ ಪ್ರಾಣ ತೆಗಿತಿನಿ. (ಭೋಜರಾಜ ಅರವಿಂದನಿಗೆ ಗುಂಡು ಹಾರಿಸುವನು. ಚೀರಿ ನೆಲಕ್ಕೆ ಕುಸಿಯುತ್ತಾ) ಭೋಜರಾಜ, ನನಗೆ ಮೋಸ ಮಾಡಿದ ನಿನ್ನನ್ನೂ... (ಗುಂಡು ಹಾರಿಸಲು ಪ್ರಯತ್ನಿಸುವಾಗ, ಭೋಜರಾಜ ಮತ್ತೆ ಗುಂಡು ಹಾರಿಸುವನು, ಅರವಿಂದ ಸಾಯುವನು)

ವಿಕ್ರಂ– ಫೆಂಟಾಸ್ಟಿಕ್ ಡ್ಯಾಡಿ ಫೆಂಟಾಸ್ಟಿಕ್. ಇವನ್ನ ಕೊಂದು ಒಳ್ಳೆ ಕೆಲ್ಸ ಮಾಡಿದ್ರಿ, ಇನ್ನಿವಳ ಕೊರಳಿಗೆ ನಾನು ಸುಲಭವಾಗಿ ತಾಳಿ ಕಟ್ಟಬಹುದು.

ವಿಶಾಲ– ಸ್ವಾರಿ ವಿಕ್ರಂ ನಾನು ನಿನ್ನನ್ನು ಮದುವೆಯಾಗಲು ಸಾಧ್ಯವಿಲ್ಲ.

ವಿಕ್ರಂ– ಕಾರಣ?

ವಿಶಾಲ– ತಂದೆ, ಮಗ ಇಬ್ಬರೂ ನನ್ನ ಮೈ ಕದ್ದಿದ್ದೀರಿ ಅಂದಾಗ ಮದುವೆಯಾಗಿ ನಿಮ್ಮಿಬ್ಬರ ಹೆಂಡತಿಯಾಗಿರಲು ಹೇಗೆ ಸಾಧ್ಯ? ಒಂದು ವೇಳೆ ಮಗನ ಹೆಂಡತಿಯೆಂದು. ಮಗಳಂತೆ ಕಾಣುವ ದೊಡ್ಡಗುಣ ಇವರು ಮಾಡಿದರೂ. ಸ್ತ್ರೀ ಸಹಜವಾದ ಸಂಕುಚಿತ ಭಾವನೆ ಇವರನ್ನು ತಂದೆಯೆಂದು ಒಪ್ಪಿಕೊಳ್ಳಲು ನನಗಡ್ಡಿ ಪಡಿಸುತ್ತದೆ, ಕಾರಣ?

ವಿಕ್ರಂ– ಕಾರಣ ?

ವಿಶಾಲ– ನಿಮ್ಮಿಬ್ಬರಲ್ಲಿ ಯಾರಾದರೊಬ್ಬರು...(ನಗುವಳು)

ವಿಕ್ರಂ– ಏನು ನಿನ್ನ ಮಾತಿನ ಅರ್ಥ

ಭೋಜರಾಜ– ಮಗನು ಅವಳಿಗೆ ಕೇಳುವದು ವ್ಯರ್ಥ. ಸಧ್ಯ ನಾನು ಮಾಡ್ತೀನಿ ಇತ್ಯರ್ಥ.

ವಿಕ್ರಂ– ಡ್ಯಾಡಿ ಇವಳೇನ್ಹೇಳ್ತಿದ್ದಾಳೆ ಅಂದ್ರೆ...

ಭೋಜರಾಜ– ನಮ್ಮಿಬ್ಬರಲ್ಲಿ ಯಾರಾದರೊಬ್ಬರು ಸಾಯ್ಬೇಕು, ಅಂತಿದ್ದಾಳೆ ಅಷ್ಟೇ. ಅದರಲ್ಲಿ ಆಶ್ಚರ್ಯ ಪಡುವಂತಾದ್ದೇನಿದೆ. ನನ್ನ ಡೂಪ್ಲಿ ಕೇಟ್ ಮಗನೆ?

ವಿಕ್ರಂ– ಡ್ಯಾಡಿ ಏನ್ಹೇಳ್ತಾಯಿದೀರಿ?

ಭೋಜರಾಜ– ಇದ್ದ ವಿಷಯಾನೆ ಹೇಳ್ತಿದ್ದೇನೆ. ನೀನು ನನ್ನ ಹೊಟ್ಟೆಯ ಮಗನಲ್ಲ ನನ್ನಿಚ್ಛೆ ಪೂರೈಕೆಗಾಗಿ ತಂದು ಸಾಕಿದ ಡೂಪ್ಲಿಕೇಟ್ ಮಗ.

ವಿಕ್ರಂ– ಅಂದ್ರೆ

ಭೋಜರಾಜ– ಅಂದ್ರೆ ನನ್ನ ಹೆಂಡತಿ ಗಂಡು ಮಗುವಿಗೆ ಜನ್ಮ ಕೊಟ್ಟು ತಾನೂ ಸತ್ತಳು, ಹುಟ್ಟಿದ ಮಗುವನ್ನೂ ಕರೆದೊಯ್ದಳು. ಆಗ ನಾನು ದುಃಖ ಪಡಲಿಲ್ಲ. ಮುಂದಾಲೋಚನೆಗೆ ಬುದ್ಧಿ ಖರ್ಚು ಮಾಡಿದೆ. ಅಪಾರ ಸಂಪತ್ತಿನ ಒಡತಿಯಾಗಿ ನನ್ನ ತಂಗಿ ಮುಂದೊಂದು ದಿನ ಹೆಣ್ಣು ಮಗುವಿಗಾಗಲೀ ಗಂಡು ಮಗುವಿಗಾಗಲೀ ಜನ್ಮವಿತ್ತಾಗ ನನಗೆ ಮಗಳಾಗಲೀ, ಮಗನಾಗಲೀ ಇದ್ದರಲ್ಲವೆ, ಸಂಬಂಧದ ನೆಪದಲ್ಲಿ ಆಸ್ತಿಯನ್ನು ಲಪಟಾಯಿಸಲು ಸಾಧ್ಯ? ಅದಕ್ಕಾಗಿ ಡಾಕ್ಟ್ರಿಗೆ ಹಣದಾಸೆ ತೋರಿಸಿ,ಸತ್ತ ನನ್ನಹೆಂಡತಿಯ ಪಕ್ಕದಲ್ಲಿದ್ದ ಸತ್ತ ಶಿಶುವಿನ ಸ್ಥಳದಲ್ಲಿ ಬೇರೊಂದು ಶಿಶುವನ್ನು ತರಿಸಿ ಹಾಕಿದೆ. ಆ ಶಿಶುವೇ ನೀನು

ವಿಕ್ರಂ– ಹಾಗಾದರೆ ನಾನು ನಿಮ್ಮ ಮಗನಲ್ಲವೆ? ನಾನು ಪರದೇಶಿಯೇ? ಡ್ಯಾಡಿ, ಇದುವರೆಗೂ ನನ್ನನ್ನು ಸಾಕಿ ಸಲುಹಿದ್ದಿರಿ, ವಿದ್ಯಾವಂತನನ್ನಾಗಿ ಮಾಡಿದ್ದೀರಿ. ಹೊಟ್ಟೆಯ ಮಗನಲ್ಲದಿದ್ದರೂ ನಿಮ್ಮ ಕೈಕೂಸಾಗಿ ಬೆಳೆದಿದ್ದೇನೆ. ತಂದೆ–ತಾಯಿ ಗೊತ್ತಿಲ್ಲದ ನನಗೆ ನೀವೇ ತಂದೆ–ತಾಯಿ ದಯಮಿಟ್ಟು ಈ ಹೆಣ್ಣಿನ ಹೆಸರಿನಲ್ಲಿರುವ ಆಸ್ತಿಗಾಗಿ ನಮ್ಮಿಬ್ಬರ ಸಂಬಂಧ ಮಾತ್ರ ಕಡಿದು ಹಾಕಬೇಡಿ. ನಿಮ್ಮ ಕಾಲಿಗೆ ಬಿದ್ದು ಬೇಡಿಕೊಳ್ಳೀನಿ.

ಭೋಜರಾಜ– ಹುಚ್ಚಪ್ಪಾ, ಈ ಆಸ್ತಿಗಾಗಿ ನಾ ಪಟ್ಟಿರುವ ಕಷ್ಟ ಅಷ್ಟಿಷ್ಟಲ್ಲ. ಈಗವಳು ನಿನ್ನನ್ನು ಮದುವೆಯಾಗಲೊಪ್ಪಿ, ಆಸ್ತಿಯನ್ನು ನಿನ್ನ ಹೆಸರಿಗೆ ಬರೆಯುವಂತಾಗಿದ್ದರೆ, ಖಂಡಿತ ನಾನೀ ಗುಟ್ಟನ್ನು ಬಿಚ್ಚುತ್ತಿರಲಿಲ್ಲ. ನಿನ್ನನ್ನು ದೂರ ಮಾಡುತ್ತಿರಲಿಲ್ಲ. ಆದರೀಗ ಸಂದರ್ಭವೇ ಹಾಗೆ ಬಂದು ಬಿಟ್ಟಿದೆ. ನಮ್ಮಿಬ್ಬರಲ್ಲೊಬ್ಬರು ಇಲ್ಲವಾದಾಗ ಮಾತ್ರ. ಇವಳು ತಾಳಿ ಕಟ್ಟಿಸಿಕೊಳ್ಳುತ್ತಾಳೆ. ಈ ಆಸ್ತಿಗೆ ಅಧಿಕಾರಿ ಮಾಡುತ್ತಾಳೆ. ಕಾರಣ, ಅನಿವಾರ್ಯವಾಗಿ ನಿನ್ನೆದೆಗೆ ಗುಂಡಿಡುವ ಪ್ರಸಂಗ ಬಂದು ಬಿಟ್ಟಿದೆ.

ವಿಕ್ರಂ– ಡ್ಯಾಡಿ......

ಭೋಜರಾಜ– ಆಯ್ ಆ್ಯಮ್ ಸೊ ಸ್ಸಾರಿ ಮೈ ಡೂಪ್ಲಿಕೇಟ್ ಸನ್. (ಗುರಿ)

ವಿಕ್ರಂ– ಬೇಡ ಡ್ಯಾಡಿ. ನನ್ನನ್ನು ಸಾಯಿಸ್ಬೇಡಿ.

ಭೋಜರಾಜ– ಸಾಯಿಸದೆ ಬೇರೆ ದಾರಿನೆ ಇಲ್ಲ. ದೇವರು ನಿನಗೆ ಒಳ್ಳೇದು ಮಾಡ್ಲಿ (ಗುಂಡು ಹಾರಿಸುವನು)

ವಿಕ್ರಂ– (ಚೀರಿ) ಎಂತಾ ಕೆಲ್ಸ ಮಾಡಿಬಿಟ್ರಿ ಡ್ಯಾಡಿ, ಎಂತಾ ಕೆಲ್ಸ... ಮಾಡಿಬಿಟ್ರಿ... (ಬಿದ್ದು ಸಾಯುವನು)

ವಿಶಾಲ– ಶಹಭಾಷ್ ಭೋಜರಾಜ...ಶಹಭಾಷ್, ಮೆಚ್ಚಿದೆ ನಿನ್ನ ದಿಟ್ಟತನವನ್ನು,

ಭೋಜರಾಜ– ಮೆಚ್ಚಿಕೆಯು ಹಾಗಿರಲಿ, ನಿನ್ನಿಚ್ಛೆಯ ಗಂಡನಾಗಲು ನಾನೀಗ ಸಿದ್ಧನಿದ್ದೇನೆ. ಹೇಳು ಯಾವಾಗ ನಮ್ಮ ಮದುವೆ?

ವಿಶಾಲ– ಎಲ್ಲಿ, ಯಾವಾಗ ಯಾಕೆ? ಇಲ್ಲೆ, ಈಗಲೇ ಈ ಸತ್ಪುರುಷ ಧರ್ಮಯ್ಯನವರ ಪ್ರತಿಮೆಯೆದುರೆ ಆಗುವುದು...

ಭೋಜರಾಜ– (ನಗು) ನಮ್ಮಿಬ್ಬರ ಮದುವೆ.

ವಿಶಾಲ– ಅಲ್ಲ, ನಿನ್ನ ಮಸಣ ಯಾತ್ರೆ (ಗುಂಡು ಹಾರಿಸುವಳು)

ಭೋಜರಾಜ– (ನರಳುತ್ತ) ಮೋಡಿಯ ಮಾತಾಡಿ. ನನ್ನ ಜೀವಕ್ಕೆ ಕುತ್ತು ತಂದೆಯಾ ಮೋಸಗಾತಿ.

ವಿಶಾಲ– ನಾನು ಮೋಸಗಾತಿಯಲ್ಲ, ಛಲಗಾತಿ. ನಾ ಮಾಡಿದ ಪ್ರತಿಜ್ಞೆ ನೆರವೇರಿತು. ಧರ್ಮಯ್ಯನವರ ಆತ್ಮಕ್ಕೆ ಶಾಂತಿ ಸಿಕ್ಕಿತು, ನನ್ನ ಛಲ ತೀರಿತು. ಸ್ತ್ರೀಕುಲಕ್ಕೆ ಬಲ ಬಂದಿತು (ನಗುವಾಗ, ಭೋಜರಾಜ ಗುಂಡು ಹಾರಿಸಿ, ಬಿದ್ದು ಸಾಯುವನು) ಅಮ್ಮಾ...

(ವನಜ, ವಕೀಲ, ಪೋಲಿಸರು, ರಂಗ, ಲಿಲ್ಲಿ ಬರುವರು)

ವನಜ– ವಿಶಾಲಕ್ಕ, ಇದೇನು ಅನ್ಯಾಯ ಮಾಡಿಕೊಂಡು ಬಿಟ್ಟೆ ?

ವಕೀಲ– ವಿಶಾಲಮ್ಮ, ದುಡಿಕಿ ಅನಾಹುತ ಮಾಡಿಕೊಂಡುಬಿಟ್ಟಿರುವಿಯಲ್ಲಮ್ಮ

ವಿಶಾಲ– ನಾನೆಲ್ಲ ಸರಿ ಮಾಡಿದ್ದೇನೆ ವಕೀಲ್ರೆ...ಎಲ್ಲರಿಗೂ ನನ್ನ ಕೊನೆಯ ನಮಸ್ಕಾರಗಳು...(ಸಾಯುವಳು)

–ಹಿನ್ನೆಲೆ–

**ಶುಭಂ**

ಇವನ ಮಗ ವಿಕ್ರಂ ಒಬ್ಬವನು ಬಂದ್ರಂತೂ ಮುಗಿದೇ ಹೋಯ್ತು. ಜೋಬಿ ನಲ್ಲಿದ್ದ ಚಿಲ್ಲರೆ ಹೊರಗ ಬಿಟ್ಟಂತಾಗುತ್ತದೆ. ಬಾರಮ್ಮ ಬಾ, ಸಧ್ಯ ಅವನಿಗೆ ಹಣ ಕಳಿಸ್ಬೇಕಾಗಿದೆ.

(ಹೋಗುವರು)

## ಎರಡನೆಯ ದೃಶ್ಯ

## ಉದ್ಯಾನವನ

(ವಿಶಾಲ ವಿಕ್ರಂ ಬರುವರು)

ವಿಶಾಲ— ವಿಕ್ರಂ, ಇಷ್ಟವಸರವಾಗಿ ನನ್ನೇಕಿಲ್ಲಿಗೆ ಕರ್ಕೊಂಡ್ಬಂದ್ರಿ?

ವಿಕ್ರಂ— ನಿನಗೊಂದು ಮುಖ್ಯವಾದ ವಿಷಯ ತಿಳಿಸ್ಬೇಕಾಗಿತ್ತು, ಅದ ಕ್ಕಿಲ್ಲಿಗೆ ಕರ್ಕೊಂಡ್ಬಂದೆ.

ವಿಶಾಲ— ವಿಷಯ... ಸಿಹಿ ತಾನೆ?

ವಿಕ್ರಂ— ಅದು ಸಿಹಿಯೋ, ಕಹಿಯೋ? ನಾ ಬಾಯಿಬಿಟ್ಮೇಲೆ ನಿನಗೇ ಗೊತ್ತಾಗುತ್ತೆ. ಆದ್ರೇ...

ವಿಶಾಲ— ಆದ್ರೇನು ವಿಕ್ರಂ?

ವಿಕ್ರಂ— ನೀ ನಿರೀಕ್ಷೆ ಮಾಡದ ವಿಷಯಾನ ಇಂದು ನನ್ನ ಬಾಯಿಂದ ಕೇಳ್ತೀಯಾ. ಅದ್ರಿಂದ ನಿನ್ಮನಸ್ಸು ಅದ್ರುತ್ತೋ, ಬೆದರುತ್ತೋ ನನಗೊತ್ತಿಲ್ಲ.

ವಿಶಾಲ— ನನಗೆ ಬಾಳ್ಕೊಡೋ ದೇವರ ಬಾಯಿಂದ ನನ್ಮನ ಅದುರ್ಸೋ ಶಬ್ದಗಳು ಬರೋದಿಲ್ಲ ಅನ್ನೋ ನಂಬಿಕೆ ನನಗಿದೆ.

ವಿಕ್ರಂ— ಆ ನಂಬಿಕೆ ನಿನಗಿರಬೇಕಾದ್ದೆ. ಯಾಕಂದ್ರೆ, ನೀನು..., ಹೆಣ್ಣು! ಈ ಹೆಣ್ಣು ಹಣ್ಣಾಗಿ ಈ ಪುರುಷನ ಬಾಯಿಗೆ ಈಗಾಗಲೇ ರುಚಿ ಕೊಟ್ಟು ಬಿಟ್ಟಿದೆ. ಆದರೆ, ರುಚಿ ನೋಡಿದಂಥಾ ಈ ನಾಲಿಗೆಯಿಂದ ಬರೋ ವಿಷಯ [illegible], ಅಳಿಸುವುದೋ ನನಗೂ ತಿಳಿದಿಲ್ಲ ನಿನಗೂ ತಿಳಿ ದಿಲ್ಲ. ಕಾರಣ, ಆ ಮುಂದಿನ ನಾಳೆ ಬಾಳಿನ ಅರಿವು ನಮಗಾಗುವುದಕ್ಕಿಂತ

ಮೊದಲು ನಮ್ಮಿಬ್ಬರ ಪ್ರಥಮ ಮಿಲನದಂದು ಮೂಡಿ ಬಂದ ಪ್ರೇಮ ಗೀತೆಯನ್ನು ನನ್ನ ಮನಸ್ಸು ಮತ್ತೊಂದು ಬಯಸುತ್ತಿದೆ. ಅದಕ್ಕೆ ನೀನು ಸಮ್ಮತಿಸುವೆಯೋ? ಇಲ್ಲಾ ನಾ ಹೇಳಬೇಕೆಂದ ವಿಷಯವನ್ನು ಮೊದಲೇ ಕೇಳ ಬಯಸುವೆಯೋ?

ವಿಶಾಲ– ನೀವ್ಹೇಳುವ ವಿಷಯ ನನಗೆಂದೂ ವಿಷವಾಗದೆನ್ನುವ ವಿಶ್ವಾಸ ನನಗಿದೆ. ಕಾರಣ, ಮೊದಲು ನಿಮ್ಮ ಮನದ ಬಯಕೆಯನ್ನು ಮನ್ನಿಸುವುದೇ ನನಗೆ ಶ್ರೇಯಸ್ಸು.

ಪದ

(ಪದ ಮುಗಿದ ನಂತರ)

ವಿಕ್ರಂ– ವಿಶಾಲ...,

ವಿಶಾಲ– ಏನ್ವಿಕ್ರಂ?

ವಿಕ್ರಂ– ಈಗ ನಾ ಹೇಳೋ ವಿಷಯಾನ...?

ವಿಶಾಲ– ಕೇಳುವುದಕ್ಕೆ ಕಾತುರಳಾಗಿದ್ದೇನೆ.

ವಿಕ್ರಂ– ನೋಡು ವಿಶಾಲ, ನಾಳೆ ನಾ..., ಊರಿಗ್ಹೋಗ್ತೀನಿ.

ವಿಶಾಲ- (ಗಾಬರಿ) ಏನು? ನಾಳೆ ಊರಿಗ್ಹೋಗ್ತೀರಾ??

ವಿಕ್ರಂ- ಹೌದು ಪರೀಕ್ಷೆ ಮುಗಿತಲ್ಲ.

ವಿಶಾಲ- ಪರೀಕ್ಷೆಯೇನೋ ಮುಗೀತು. ಆದರೆ ನನ್ನ ನಿರೀಕ್ಷೆಗೆ ಶಿಕ್ಷೆ ಮಾತ್ರ ಕೊಟ್ಹೋಗ್ಬೇಡಿ.

ವಿಕ್ರಂ- ಅಂದ್ರೆ...?

ವಿಶಾಲ– (ಬಳಸಿ) ಅಂದ್ರೆ..., ಈ ಹೆಣ್ಣಿನ ಕೊರಳಿಗೆ ತಾಳಿಕಟ್ಟಿ, ನನ್ನೂ ನಿಮ್ಜೊತೆಯಲ್ಲೇ ಕರೆದುಕೊಂಡು ಹೋಗಿರೆಂದು ಹೇಳಿದೆ.

ವಿಕ್ರಂ ಏನಂದೆ?...ನಾನು..., ನಿನ್ನ ಕೊರಳಿಗೆ..., ತಾಳಿ ಕಟ್ಬೇಕಾ? ಯಾವ ಕಾರಣಕ್ಕಾಗಿ?

ವಿಶಾಲ– ಯಾವ ಕಾರಣಕ್ಕಾಗಿ?! ವಿಕ್ರಂ, ನೀವು..., ಎಚ್ಚರವಾಗಿದ್ದೀರಿ ತಾನೆ? ನನ್ನ ಮನಸ್ಸನ್ನು ಕದ್ದು ಪ್ರೀತಿ, ಪ್ರೇಮಗಳ ಪರಿಚಯ ಮಾಡಿಕೊಟ್ಟು, "ನಿನ್ನನ್ನು ಮದುವೆಯಾಗಿ, ವರದಕ್ಷಿಣೆ ರೋಗ ಪೀಡಿತ ಪುರುಷರ ಪಾಲಿಗೆ ಸೂಜಿಮೊನೆಯಾಗಿ ನಿಲ್ಲುತ್ತೇನೆ" ಅಂತ ಪ್ರತಿಜ್ಞೆ ಮಾಡಿದ ನೀವು..., ಇಂದು ಇಂಥಾ ಪ್ರಶ್ನೆ ಕೇಳುತ್ತಿರುವುದು ತಮಾಷೆಗಾದರೂ ನನಗೆ ನಿರಾಸೆಯಾಗುತ್ತಿದೆ.

ವಿಕ್ರಂ– ನಾ ತಮಾಷೆ ಮಾಡ್ತಾಯಿದೀನಿ ಅಂತ ನೀ ತಪ್ಪು ತಿಳ್ಕೊಂಡಿದಿ ವಿಶಾಲ. ನಿನಗೆ ಮೊದಲೇ ತಿಳಿಸಿಲ್ವೆ? ನಾ ಹೇಳೋ ವಿಷಯದಿಂದ ನಿನ್ನಾಸೆ ಚಿಗುರುತ್ತೋ, ಕಮರಿ ಹೋಗುತ್ತೋ ಗೊತ್ತಿಲ್ಲವೇದು? ಆದ್ರೂ ವಿಷಯ ನಿನ್ನ ಪಾಲಿಗೆ ವಿಷವಾಗುವ ಮೊದಲು ಪಾಪ್ನಮನಸ್ಸು ಕೊನೆಗೊಮ್ಮೆ ಹರುಷಗೊಳ್ಳಲಿಯೆಂದು ನಿನ್ನೊಂದಿಗೆ ಹಾಡಿ, ಕುಣಿದು ನಂತರ ವಿಷಯ ತಿಳಿಸಿದ್ದು ನಿನಗೆ ನಿರಾಸೆಗೊಳಿಸಿದ್ದು.

ವಿಶಾಲ– ಅಂದ್ರೆ...ನಿಮ್ಮಾತಿನ ಅರ್ಥ?

ವಿಕ್ರಂ– ಅರ್ಥ? ನಿನ್ನ ಕೊರಳಿಗೆ ನಾ ತಾಳಿ ಕಟ್ಟಲು ಸಾಧ್ಯವಿಲ್ಲ ಅನ್ನೋದು ಅರ್ಥ ಸತ್ಯವಾದರೆ, ನೀ ನನ್ನ ಹೆಂಡತಿಯಾಗೋದು ಕನಸಿನ ಮಾತೆನ್ನುವುದು ಇನ್ನರ್ಧ ಸತ್ಯ.

ವಿಶಾಲ- ಪ್ಲೀಜ್ ವಿಕ್ರಂ ನಿಮಗೆ ಕೈ ಮುಗಿತಿನಿ ಈ ರೀತಿ ಮುಚ್ಚುಮರೆ ಮಾತಾಡಬೇಡಿ. (ದುಃಖ) ನನ್ನ ತಂದೆ ಬಡವನಾದರೂ ಹಿಂದು ಸಂಸ್ಕೃತಿಯ ಬಂಧನದಲ್ಲಿರಿಸಿ ಬೆಳೆಸಿದ್ದಾರೆ. ಮದುವೆಗೆ ಮೊದಲೇ ಮಕ್ಕಳ್ಹೇರುವ ಜಾತಿ ಹೀನೆ ನಾನಾಗುವುದಿಲ್ಲವೆಂದು ಭಾವಿಸಿದ್ದಾರೆ. ಆದರೆ ನಾನು?..., ಅವರ ಆಚಾರ, ವಿಚಾರಕ್ಕೆ ವಿಕಾರ ರೂಪ ಕೊಟ್ಟು ಬಿಟ್ಟಿದ್ದೇನೆ. ನಿಮ್ಮ ಪ್ರೀತಿ ಪ್ರೇಮಗಳ ವಶವಾಗಿ ಒಂದೇ ಒಂದು ಕ್ಷಣ ಮೈ ಮರೆತು ನಿಮ್ಮ ತೋಳ ಬಂಧನದಲ್ಲಿ ಸಿಲುಕಿದ ತಪ್ಪಿಗೆ ಇಂದು ನಿಮ್ಮ ಬೀಜದ ಫಲವನ್ನು ಹೊತ್ತು ನಿಂತಿದೆ ನನ್ನ ಹೊಟ್ಟೆ. ಮದುವೆಗಿಂತ ಮೊದಲೇ ಹೊಟ್ಟೆಯಲ್ಲಿ [illegible]

ಹೊತ್ತಿಸಲ್ಲಾ ಅನ್ನುವ ನೋವಿದ್ದರೂ, ಮಗುವಿನ ತಂದೆ ಮರೆಯದೆ ಮಡದಿ ಸ್ಥಾನ ಕೊಡುತ್ತಾರೆ ಅನ್ನುವ ನೆಮ್ಮದಿಯಿಂದ ಬದುಕಿದ್ದೆ. ಈಗ ನೀವೇನಾದರೂ ನನ್ನನ್ನು ಕೈಬಿಟ್ರೆ ಖಂಡಿತ ಜೀವಿಸಿರಲಾರೆ ವಿಕ್ರಂ ಜೀವಿಸಿರಲಾರೆ. (ಅಳು)

ವಿಕ್ರಂ– ನೀನತ್ತು ಸತ್ತರೂ ನನಗಾವ ನಷ್ಟವೂ ಇಲ್ಲ ವಿಶಾಲ. ಯೌವನದಲ್ಲಿ ನಡೆಯೋ ಇಂಥಾ ಘಟನೆಗಳನ್ನು ಹುಡುಗಾಟವೆಂದು ತಿಳಿಯಬೇಕು. ತಕ್ಷಣ ಮರೆತು ಮುಂದಿನ ಜೀವನದಾಟಕ್ಕೆ ಸಿದ್ಧರಾಗಿ ನಿಲ್ಲಬೇಕು. ಅದು ಬುದ್ಧಿವಂತರ ಲಕ್ಷಣ.

ವಿಶಾಲ- (ಕೋಪದಿಂದ) ಏನಂದೇ ಪಾಪಿ? ನಿನ್ನನ್ನು ಮೋಹಿಸಿ, ಮಡದಿಯಾಗಬೇಕೆಂದು ಬಯಸಿ..., ಮೈ ಮನಗಳೆರಡನ್ನೂ ನಿನಗರ್ಪಿಸಿ. ನಿನ್ನ ವಂಶದ ಪಿಂಡ ಹೊತ್ತು ನಿಂತಿರುವ ನಾನು...? ಇದೆಲ್ಲವನ್ನೂ ಹುಡುಗಾಟವೆಂದು ತಿಳಿದುಕೊಳ್ಳಬೇಕೆ? ಥೂ ನರಪಿಶಾಚಿಯೇ..., ಮನುಷ್ಯತ್ವವಿದ್ದ ಪುರುಷನಾಗಿದ್ದರೆ ಈ ರೀತಿ ಮಾತಾಡುತ್ತಿದ್ದೆಯಾ? ನೀನಾಗಿ ನನ್ನನ್ನು ಬೆಂಬತ್ತಿ ಬಂದೆ, ನೀನಾಗಿ ನನ್ನಲ್ಲಿ ಪ್ರೇಮಭಿಕ್ಷೆ ಕೇಳಿದೆ, ನೀನಾಗಿಯೆ ನನಗೆ ಬಾಳು ಕೊಡುತ್ತೇನೆಂದು ದೇವರ ಮುಂದೆ ಪ್ರಮಾಣ ಮಾಡಿದೆ. ನನ್ನನ್ನು ನಂಬಿಸಿ, ಬೇಡವೆಂದರೂ ಒತ್ತಾಯಿಸಿ, ನನ್ನ ಶೀಲವನ್ನು ದೋಚಿದೆ. ಈಗ? ನನ್ನನ್ನು ಪ್ರೀತಿಸಿದ್ದು ಸುಳ್ಳು ಮೋಹಿಸಿದ್ದು ಸುಳ್ಳು, ನಿನ್ನ ವಂಶದ ಕುಡಿ ನನ್ನ ಹೊಟ್ಟೆಯಲ್ಲಿ ಬೆಳೆಯುತ್ತಿರುವುದು ಹುಡುಗಾಟದ ಪಿಂಡವೆಂದು ಮಾತಾಡುತ್ತಿರುವಿಯಲ್ಲಾ ನೀನು ಮನುಷ್ಯನೆ? ನಿನಗೆ ಹೃದಯವಿದೆಯೇ? ನಿನ್ನ ಹುಚ್ಚು ಹುಡುಗಾಟಕ್ಕೆ ನನ್ನ ದೇಹವೇ ನಿನಗೆ ಮೈದಾನವಾಗಬೇಕಿತ್ತೆ? ನಾನು ನಿನಗೇನು ದ್ರೋಹ ಬಗೆದಿದ್ದೆನೆಂದು ನನಗಿಂಥಾ ಶಿಕ್ಷೆ?

ವಿಕ್ರಂ- ನೋ, ನೋ ಖಂಡಿತ ನೀ ನನಗ ದ್ರೋಹ ಬಗೆದಿಲ್ಲ. ಆದರೆ, ನಿನ್ನ ಬದುಕಿಗೆ ನೀನೇ ದ್ರೋಹ ಬಗೆದುಕೊಂಡೆ. ಆ ತಪ್ಪಿಗೆ ನೀನಿಂದು ಶಿಕ್ಷೆ ಅನುಭವಿಸಲೇ ಬೇಕು.

ಕೆ. ಎನ್. ಮಂಜುನಾಥ ಕವಿ ವಿರಚಿತ

# ಮೂರೂ ಬಿಟ್ಟವರು





ಶ್ರೀ ವೀರೇಶ ಪ್ರಕಾಶನ, ಹುಬ್ಬಳ್ಳಿ

ಶ್ರೀ

॥ ಶ್ರೀ ರಂಗಾಂಜನೇಯರು ಕಾಯಲಿ ॥

ಸ್. ಮಂಜುನಾಥರವರಿಂದ ರಚಿಸಲ್ಪಟ್ಟ



# ಮೂರೂ ಬಿಟ್ಟವರು

(ಸಾಮಾಜಿಕ, ಹಾಸ್ಯ, ಕುತೂಹಲಭರಿತ ನಾ



ಪ್ರಕಾಶಕರು, ಮುದ್ರ

ಶ್ರೀ ವೀರೇಶ ಪ್ರಕಾಶನ

ಬಮ್ಮಾಪುರ ಓಣಿ, ಹುಬ್ಬಳ್ಳಿ-28.

ಬೆಲೆ: 15-00

**ಹವ್ಯಾಸಿ ಕಲಾವಿದರ ಗಮನಕ್ಕೆ**

ಹವ್ಯಾಸಿ ಕಲಾವಿದರು ಈ ನಾಟಕವನ್ನು ಆಡುವಾಗ, ನನ್ನ ಗಮನಕ್ಕೆ ತಂದು ಆಡುವುದು ಒಳ್ಳೆಯದು. ಆದರೆ, ಯಾವ ಗೌರವ ಧನವನ್ನೂ ನೀವು ಕೊಡಬೇಕಾಗಿಲ್ಲ. ಅದು ನಿಮ್ಮ ನಿಮ್ಮ ಅಂತರಂಗಕ್ಕೆ ಬಿಟ್ಟಿದ್ದು. ಅಕಸ್ಮಾತ್ ನನ್ನ ಗಮನಕ್ಕೆ ತರದೆ ಆಡಿದರೂ, ಕೃತಿಯನ್ನು ಮೊದಲು ಕೂಲಂಕುಷವಾಗಿ ಅಭ್ಯಾಸ ಮಾಡಿ, ಬೇಕಾಗುವ ಸಾಮಗ್ರಿಗಳನ್ನು ಒದಗಿಸಿಕೊಂಡು ನಾಟಕದ ಮೂಲ ಅರ್ಥಕ್ಕೆ ಸಮರ್ಥ ಶ್ರೇಯಸ್ಸು ತರಬೇಕೆಂದು ಕಳ-ಕಳಿಯಿಂದ ಪ್ರಾರ್ಥಿಸುವ.

ನಿಮ್ಮ

**ಎನ್. ಮಂಜುನಾಥ**

---

**[illegible]ಭೂಮಿಯ ಮಾಲೀಕರ ಗಮನಕ್ಕೆ**

ಈ ನಾಟಕವನ್ನು [illegible]ರಂಗಭೂಮಿಯ ಮೇಲೆ ಅಭಿನಯಿಸಲು ಇಚ್ಛಿಸುವವರು. ನನ್ನ ಅಧಿಕ[illegible] ಪಡೆದು, ಲಿಖಿತ ಒಪ್ಪಂದ ಮಾಡಿಕೊಂಡು ಪ್ರಯೋ[illegible]ದು [illegible] ನನ್ನ ಅನುಮತಿ ಇಲ್ಲದೆ ಆಡುವುದು ಕಂಡು ಬ[illegible]ತ್ತ ಕ್ರಮ ಕ[illegible]ಳ್ಳಬೇಕಾಗುತ್ತದೆ. ಇದಕ್ಕೆ ಕಾನೂನು [illegible]ರತಿಲ್ಲ.

[illegible]ಳಾಸ :

**ಕೆ. ಎನ್. [illegible]ನಾಥ, ಕವಿಗಳು** ಸಾ॥

ಮುಕ್ಕಾಂ – ಕುಂದೂರ ಪೋಸ್ಟ–ಕುಂದೂರ

ತಾಲ್ಲೂಕ್–ಹೊನ್ನಾಳಿ ಜಿಲ್ಲಾ – ಶಿವಮೊಗ್ಗ

ಪಿ. ನಂ.–577219.

---

॥ ಶ್ರೀ ರಂಗಾಂಜನೇಯರು ಕಾಯಲಿ ॥

# ಅರ್ಪಣೆ

ಸ್ವರ್ಗಸ್ಥರಾದರೂ ನನ್ನ ಹೃದ್ಭೂಮಿಯಲ್ಲಿ ಸ್ಥಿರವಾಗಿ, ಚಿರರೂಪದಲ್ಲಿ ಪ್ರತಿಬಿಂಬಿಸುತ್ತಿರುವ "ಪೂಜ್ಯ ತಂದೆ"...,

ನನಗೆ ಸ್ಫೂರ್ತಿಯಾಗಿ, ಚೈತನ್ಯವಾಗಿದ್ದು, ಅನಿರೀಕ್ಷಿತ ಘಟನೆಯಿಂದ ಮುತ್ತೈದೆ ಸಾವು ಪಡೆದು, ನನ್ನ ಕಣ್ಣ ಕೊಳಬನಿಗಳಲ್ಲಿ, ತನ್ನ ಬಿಂಬ ಬಿಂಬಿಸುತ್ತಾ ನಿರಂತರ ಅಂತರಂಗದಲ್ಲಿ ನೆನಪಿನ ತರಂಗಗಳನ್ನು ಸೃಷ್ಟಿಸುತ್ತಿರುವ "ನನ್ನ ಅಕ್ಕ"...,

ಬಾಳಿನುದ್ದಕ್ಕೂ ಬರೀ ಬವಣೆ ಪಡುತ್ತ ಬದುಕುತ್ತಿದ್ದರೂ, ನನ್ನ ಬದುಕಿಗೆ ಭದ್ರ ಬುನಾದಿ ಒದಗಿಸಲು ಹೆಣಗುತ್ತಿರುವ "ನನ್ನ ತಾಯಿ"...!

ಇವರನ್ನು ಸ್ಮರಿಸಿ, ಶ್ರೀರಕ್ಷೆ ಬಯಸಿ.... ಆಘಾತಗಳನ್ನು ಎದುರಿಸಲು ಅಸಮರ್ಥನಾಗಿ ಸಾವಿಗೆ ಶರಣು ಹೋಗಲು ಸಿದ್ಧನಾಗಿದ್ದಾಗ "ಜೊತೆಯಲಾಗಿ ನಾನಿದ್ದೇನೆ" ಎಂದು ಭುಜ ತಟ್ಟಿ, ಬವಣೆ ಮೆಟ್ಟಿ ನಿಲ್ಲಲು ಪ್ರೇರೇಪಿಸಿ, ಬದುಕಿಸಿ. ಬದುಕುಳಿಸುತ್ತಿರುವ ನನ್ನ ಆತ್ಮೀಯ ಮಿತ್ರ ಸಹೋದರ "ಶ್ರೀಯುತ ಕೆ. ಹೆಚ್. ರಾಜಣ್ಣ" ಇವರಿಗೆ ಈ ಕೃತಿಯನ್ನು ಪ್ರೀತಿ-ಪೂರ್ವಕ ಅರ್ಪಿಸುತ್ತೇನೆ.

**ಕೆ. ಎನ್. ಮಂಜುನಾಥ**

ಕುಂದೂರು

# ಸೀನರಿಗಳು

1) ರಸ್ತಾ
2) ಉದ್ಯಾನವನ
3) ವನಜಾಳ ಬಂಗಲೆ
4) ಆಸ್ಪತ್ರೆ
5) ಜಂಗಲ್ ರಸ್ತಾ
6) ಕಟ್ ಜಂಗಲ್
7) ಮಿಲ್ಲಿರುವ ಪರದೆ, ಮಿಲ್ ಕಂಪೌಂಡ್ ಮಿಲ್ಲಿನ (ವನಜಾ ಕಾಟನ್ ಮಿಲ್) ಹೆಸರಿರುವ ಗೇಟ್
8) ಧರ್ಮಯ್ಯನವರ ಶಿಲಾಮೂರ್ತಿ
9) ಸುಡುಗಾಡು ಸೀನಿನ ಪರದೆ

## — ಪಾತ್ರಗಳ ಪರಿಚಯು —

### — ಪುರುಷರ ಪಾತ್ರಗಳು —

| | | | |
|---|---|---|---|
| 1) | ಧರ್ಮಯ್ಯ | — | ಸಾತ್ವಿಕ, ಜವಾಬ್ದಾರಿ ವ್ಯಕ್ತಿ |
| 2) | ಭೋಜರಾಜ | — | ವಿಷಘಾತುಕ, ವಿಕ್ರಂನ ತಂದೆ, ವನಜಾಳ ಸೋದರ ಮಾವ |
| 3) | ವಿಕ್ರಂ | — | ಭೋಜರಾಜನ ಮಗ (ಡೂಪ್ಲಿಕೇಟ್)ತಂದೆಯ ಪ್ರತಿಗುಣದವನು |
| 4) | ಅರವಿಂದ | — | ಡಾಕ್ಟರ್ ವನಜಾಳ ಪ್ರಿಯಕರ ಕಪಟ |
| 5) | ರಂಗ | — | ಡ್ರೈವರ್ |
| 6) | ಮೂರ್ತಿ | — | ಕಾರಕೂನ |
| 7) | ಜಗ್ಗು | — | ಕಂಪೌಂಡರ್, ತಲೆ ಹಿಡುಕ |
| 8) | ವಕೀಲ | — | ವನಜಾಳ ಹಿತ ಚಿಂತಕ |

### ಸ್ತ್ರೀಯರ ಪಾತ್ರಗಳು —

| | | | |
|---|---|---|---|
| 1) | ವಿಶಾಲ | — | ಅತ್ಯಾಚಾರಕ್ಕೆ ಒಳಗಾದ ಹೆಣ್ಣು |
| 2) | ವನಜ | — | ಮಿಲ್ಲಿನ ಒಡತಿ |
| 3) | ಲಿಲ್ಲಿ | — | ಟೈಪಿಸ್ಟ್ |

॥ ಶ್ರೀ ಗಣೇಶಾಯ ನಮಃ ॥



# ಮೂರೂ ಬಿಟ್ಟವರು

## ಪ್ರಥಮ ದೃಶ್ಯ

### ರಸ್ತೆ

(ಕೈಯಲ್ಲಿ ಪತ್ರ ಹಿಡಿದ ಧರ್ಮಯ್ಯನು ಭೋಜರಾಜನನ್ನು ಹಿಂಬಾಲಿಸಿ ಬಂದು)

ಧರ್ಮಯ್ಯ– ಯಜಮಾನ್ರೆ

ಭೋಜರಾಜ– (ನಿಂತು) ಯಾರು?... ಓ ಧರ್ಮಯ್ಯ! ಬಂದ ವಿಷಯವೇನು?

ಧರ್ಮಯ್ಯ– ತಮ್ಮಾಗ ವಿಕ್ರಂ ಪತ್ರ ಬರೆದಿದ್ದಾರೆ.

ಭೋಜರಾಜ– ಏನಂತ ಬರೆದಿದ್ದಾನೆ?

ಧರ್ಮಯ್ಯ– ತುರ್ತಾಗಿ ಎರಡು ಸಾವಿರ ರೂಪಾಯಿ ಕಳಿಸಿ ಕೊಡಿ ಅಂತ ಬರೆದಿದ್ದಾರೆ.

ಭೋಜರಾಜ– ಕಳಿಸ್ಬೇಕಾಗಿತ್ತು. ಅದನ್ನ ನನ್ಮುಂದೆ ತಿಳ್ಸೋ ಅವಶ್ಯವೇನಿತ್ತು?

ಧರ್ಮಯ್ಯ– ನೋಡಿ, ನಾನೀ ರೀತಿ ಹೇಳ್ತೀನಿ ಅಂತ ತಪ್ಪು ಭಾವಿಸಬಾರದು. "ವನಜಾ ಕಾಟನ್ ಮಿಲ್ಲಿನ" ಸಂಪೂರ್ಣ ಜವಾಬ್ದಾರಿಯನ್ನು ನನಗೆ ವಹಿಸಿಕೊಟ್ಟು ವನಜಮ್ಮನವರು ಡೆಲ್ಲಿಗ್ಹೋಗಿದ್ದಾರೆ. ಅವರು ಮರಳಿ ಬರುವ ತನಕ ಆದಾಯವನ್ನು, ಸಂಬಂಧಪಟ್ಟ ವ್ಯವಹಾರಗಳಿಗೆ ಮಾತ್ರ ಬಳಸಬೇಕಾದ ಪರಿಸ್ಥಿತಿ ನನಗೆ ಅನಿವಾರ್ಯವಾಗಿದೆ. ಹೀಗಿದ್ದಾಗ ತಮ್ಮಾಗ ಹಣಕ್ಕಾಗಿ ಮೇಲಿಂದ ಮೇಲೆ ಪತ್ರ ಬರೆಯುತ್ತಿದ್ದರೆ ಹೇಗೆ? ಆದಾಗ್ಯೂ ಈ ತಿಂಗಳಲ್ಲಿ ಅವರಿಗೆ ಕಳಿಸಿರುವ ಹಣವೆಷ್ಟು ಗೊತ್ತೇ?

ಭೋಜರಾಜ– ಹೇಳ್ತಾಯಿದಿಯಲ್ಲಾ ಮುಂದುವರಿಸು.

ಧರ್ಮಯ್ಯ– ಹತ್ತು ಸಾವಿರ ರೂಪಾಯಿಗಳು. ನಿಮ್ಮಗ ಹೋಗಿರುವುದು ವಿದ್ಯಾಭ್ಯಾಸಕ್ಕಾಗಿಯೆಂದಾಗ, ಹಣವನ್ನು ಈ ರೀತಿ ದುಂದು ವೆಚ್ಚ ಮಾಡೋ ಅವಶ್ಯವಾದರೂ ಏನಿದೆ?

ಭೋಜರಾಜ– ಅವಶ್ಯವಿದ್ದೇ ಅವನು ಹಣ ಖರ್ಚು ಮಾಡ್ತಿರೋದು. ಅವನು ನನ್ಮಗ, ಒಂದಿನಕ್ಕೆ ಐವತ್ತು ಸಾವಿರ ಖರ್ಚು ಮಾಡ್ತಾನೆ. ಇಷ್ಟಬಂದ ರೀತಿ ಮಜಾ ಮಾಡ್ತಾನೆ. ಅದನ್ನ ಕೇಳೋಕೆ ನಿನಗೇನು ಅಧಿಕಾರವಿದೆ?

ಧರ್ಮಯ್ಯ– ಇದು ಅಧಿಕಾರವಲ್ಲ ಯಜಮಾನ್ರೆ. ಮಿಲ್ಲಿನ ಸಧ್ಯದ ವ್ಯವಹಾರಗಳ ಬಗ್ಗೆ ನನಗಿರುವ ಜವಾಬ್ದಾರಿ.

ಭೋಜರಾಜ– ಇರ್ಬಹುದು. ಆದ್ರೆ ಈ ನಿನ್ನ ಜವಾಬ್ದಾರಿ ನನ್ನ ಅಧಿಕಾರದ ಕೆಳಗಿದೆ ಅನ್ನೋದನ್ನ ಮರಿಬೇಡ. ವನಜಾ ನಿನಗೂ, ಮಿಲ್ಲಿಗೂ ಒಡತಿಯಿರಬಹುದು. ನನಗಲ್ಲ. ಅವಳು ನನ್ನ ತಂಗಿ ಮಗಳು. ತಂದೆ. ತಾಯಿ ಇಬ್ಬರನ್ನೂ ಕಳೆದುಕೊಂಡು ತಬ್ಬಲಿಯಾದ ಅವಳನ್ನು ಹೂವಿನಂತೆ ಜೋಪಾನ ಮಾಡಿಕೊಂಡು ಬಂದವನು ನಾನೆಂದಾಗ ನಿನಗೂ. ಮಿಲ್ಲಿಗೂ ಅಷ್ಟೆ ಅಲ್ಲ ನಿನ್ನೊಡತಿಗೂ ನಾನೇ ಅಧಿಕಾರಿ. ಅವಳಿಡೀ ಸಂಪತ್ತನ್ನೇ ಖರ್ಚು ಮಾಡೋ ಹಕ್ಕು ನನಗಿದೆ. ಇದೇ ಕೊನೆ ನನ್ನ. ನನ್ನ ಮಗನ ಖರ್ಚಿನ ಲೆಕ್ಕವನ್ನು ಪುಸ್ತಕದಲ್ಲಷ್ಟೇ ಬರೆದಿಡುವ ಕೆಲಸ ಮಾಡು. ಅದನ್ನ ಬಿಟ್ಟು ನನ್ಮುಂದೆ ಖರ್ಚಿನ ವಿವರಣೆ ಕೇಳೋ ಮೂರ್ಖತನ ಮಾಡಬೇಡ. "ಬೀಜದಂತೆ ಫಲ, ತಂದೆಯಂತೆ ಮಗ" ನೆನಪಿರ್ಲಿ ಬರ್ತೀನಿ. (ಹೋಗುವಾಗ ನಿಂತು) ಆಂ...., ಧರ್ಮಯ್ಯ, ಟೈಪಿಸ್ಟ್ ಲಿಲ್ಲಿ ಇವತ್ತು ಕೆಲ್ಸಕ್ಕೆ ರಾಜೀನಾಮೆ ಕೊಟ್ಟಿದ್ದಾಳೆ.

ಧರ್ಮಯ್ಯ– (ಆಶ್ಚರ್ಯವಾಗಿ) ಏನಂದ್ರಿ? ಟೈಪಿಸ್ಟ್ ಲಿಲ್ಲಿ ಕೆಲಸಕ್ಕೆ ರಾಜೀನಾಮೆ ಕೊಟ್ಟಿದ್ದಾಳಾ? (ಸಂಶಯ ದೃಷ್ಟಿ) ಕಾರಣ?

ಭೋಜರಾಜ– ವಿನಾಕಾರಣ ಒಟ್ಟು ರಾಜೀನಾಮೆ ಕೊಟ್ಟಿದ್ದಾಳೆ. ಅವಳ ಜಾಗಕ್ಕೆ ಬೇರೆಯವರನ್ನು ನಾನು ಭರ್ತಿ ಮಾಡ್ತೀನಿ. ನೀನು ಮಾತ್ರ ಈ ವಿಷಯದಲ್ಲಿ ತಲೆ ಹಾಕದಂಗ ತೆಪ್ಪಗಿದ್ದುಬಿಡು. ಹುಷಾರಿ, ಇದು ಎಚ್ಚರಿಕೆ, ಮರ್ತೀಯಾ? (ಹೋಗುವನು)

ಧರ್ಮಯ್ಯ– ಎಚ್ಚರಿಕೆ ಮರ್ರೀಯಾ?... ಭೋಜರಾಜ, ನೀನಾಡಿದ ಮಾತು ಮರೆತರೂ, ಮಾಡಿದ ಕೃತ್ಯ ನನ್ನ ಹೃದಯದಲ್ಲಿ ಲಾವಾರಸವಾಗಿ ಹರಿಯುತ್ತಿದೆ ಅಂದಾಗ, ನಿನ್ನನ್ನು ಜೀವಂತ ಸಮಾಧಿ ಮಾಡಬೇಕೆಂದಿರುವ ನನ್ನರಿವೆಗೆ ಮರೆವಾಗಲು ಅದೆಂತು ಸಾಧ್ಯ ಭೋಜರಾಜ ? ತಂದೆ–ಮಗ ಕೂಡಿಕೊಂಡು ನನ್ನ ಮಗಳ ಶೀಲಗೆಡಿಸಿ, ಸಾಯಿಸಿ, ಇತಿಹಾಸ ಪುಟದಲ್ಲಿ ವಿಚಿತ್ರ ಚಿತ್ರ ಮೂಡಿಸಿರುವ ನಿಮ್ಮ ಬಿಸಿ ಗುಂಡಿಗೆಯ ರಕ್ತ ಚಿಮ್ಮಿಸುವುದನ್ನು ನಾನೆಂತು ಮರೆಯಲಿ ? ನನ್ನ ಮಗಳು ನಿಮ್ಮಿಬ್ಬರ ಹೆಸರು ಸೂಚಿಸಿ, ಪತ್ರ ಬರೆದಿಟ್ಟು, ನೇಣು ಹಾಕಿಕೊಂಡು ಸತ್ತ ಅಂದಿನ ದೃಶ್ಯ, ನನ್ನ ಕಣ್ಣುಗಳಲ್ಲಿ ಇಂದಿಗೂ ಜ್ವಾಲಾಮುಖಿಯಾಗಿ ಹೊಗೆಯಾಡುತ್ತಿದೆ. ಆದರೂ ಹೊಟ್ಟೆಯ ಕಿಚ್ಚಿಗೆ ತಣ್ಣೀರು ಸುರುವಿಕೊಂಡು, ಸಮಯಕ್ಕಾಗಿ, ಸಂದರ್ಭಕ್ಕಾಗಿ ಕಾಯ್ತು ತ್ತಿದ್ದೇನೆ, ತತ್ತರಿಸುತ್ತಿದ್ದೇನೆ.

(ಲಿಲ್ಲಿ ಬರುವಳು)

ಲಿಲ್ಲಿ– ನಮಸ್ಕಾರ ಸಾರ್.

ಧರ್ಮಯ್ಯ– ನಮಸ್ಕಾರ. ಮತ್ತೇನಮ್ಮ ಲಿಲ್ಲಿ, ನೀನು ಕೆಲಸಕ್ಕೆ ರಾಜೀ ನಾಮೆ ಕೊಟ್ಟಿರುವೆಯಂತೆ ನಿಜವೇ ?

ಲಿಲ್ಲಿ– ನಿಜ ಸಾರ್.

ಧರ್ಮಯ್ಯ– ಕಾರಣ ?

ಲಿಲ್ಲಿ– ಹೇಳಿದ್ರೆ ನೀವು ನಂಬ್ತಿರೋ ಇಲ್ಲೊ ? ಯಾಕಂದ್ರೆ ಜಗತ್ತಿಗೇ ದೇವರಾದವನು, ನನಗೆ ದೆವ್ವಾಗಿ ಕಾಡ್ತಾನೆ ಅಂದ್ರೆ ಯಾರು ನಂಬ್ತಾರೆ ?

ಧರ್ಮಯ್ಯ– ವಿಷಯಾನ ಬಿಡಿಸಿ ಹೇಳಮ್ಮ.

ಲಿಲ್ಲಿ– ಆಫೀಸಿನ ಕೆಲ್ಸ ಮುಗ್ಸಿ, ಮನೆಗೆ ಹೋಗಾಕ ಅಣಿಯಾಗಿದ್ದೆ. ಅಷ್ಟೊತ್ತಿಗೆ ಅಲ್ಲಿಗೆ ಬಂದ ಭೋಜರಾಜರು ನೋಡಮ್ಮಾ, ಮುಖ್ಯವಾದ ವ್ಯವಹಾರಕ್ಕೆ ಸಂಬಂಧಪಟ್ಟ ಪತ್ರಗಳಿವು. ಸಧ್ಯ ಟೈಪ್ ಮಾಡಿಟ್ಟೇ ಮನೆ ಗೋಗಂತ, ನನ್ನ ಟೇಬಲ್ ಮೇಲೆ ಪತ್ರ ಇಟ್ಟು ಹೊರಗೋದ್ರು. ನನಗದು

ಅನಿವಾರ್ಯವಾಗಿ ಟೈಪ್ ಮಾಡಾಕ ಕುಂತಿದ್ದೆ. ಸೂಲ್ಪೊತ್ತಿಗೆ ಕುಡುದು, ಜೋಲಿ ಹೊಡಿತ ಬಂದ ಭೋಜರಾಜರು, ಹಣದಾಸೆ ತೋರ್ಸಿ, ನನ್ನ ಶೀಲ ಹಾಳು ಮಾಡಾಕ ಬಂದ್ರು.

ಧರ್ಮಯ್ಯ– ಏನಮ್ಮಾ...!? ಭೋಜರಾಜ ನಿನ್ನ ಶೀಲ ಹಾಳ್ಳ ಮಾಡಾಕ ಬಂದಿದ್ನಾ?

ಲಿಲ್ಲಿ– ಹೌದು ಸಾರ್. ಆ ಸಮಯಕ್ಕೆ ಸರಿಯಾಗಿ ಡ್ರೈವರ್ ರಂಗ ಬರ ದಿದ್ರೆ, ನನ್ನ ಜೀವನಾನೇ ಹಾಳು ಮಾಡಿಬಿಡ್ತಿದ್ದ ಆ ಚಂಡಾಲ. ಸಾರ್, ಖರೆ ಹೇಳ್ಬೇಕಂದ್ರೆ, ಆ ಭೋಜರಾಜ ಮನುಷ್ಯನಲ್ಲ ಪಶು ಯಜಮಾನ್ರೆ ಪಶು. ಇಂಥಾ ನೀಚ ವನಜಮ್ಮನವರ ನಂಬಿಗೆಯ ದೇವರಾಗಿದ್ದಾನೆ.

ಧರ್ಮಯ್ಯ– ವನಜಮ್ಮನವರ ಈ ನಂಬಿಗಿಯ ದೇವರು, ಕಳ್ಳ ದೇವರು. ಅಂತ ನನಗೆಂದೋ ಗೊತ್ತಾಗಿದೆಯಮ್ಮ. ಆದರೂ, ಇವನ ಕರುಳು ಬಗಿಯುವುದಕ್ಕಾಗಿ ನರಸಿಂಹನವತಾರವೆತ್ತಲು ಇದುವರೆಗೆ ನನಗೆ ಸಾಧ್ಯ ವಾಗಿಲ್ಲ. ಆಗುತ್ತೋ ಇಲ್ಲವೋ ಖಾತ್ರಿಯೂ ಇಲ್ಲ. ಯಾಕಂದ್ರೆ, ಹೊಸ್ತಿಲ ಮೇಲಿಟ್ಟು ಹೊಟ್ಟೆ ಬಗಿದರೆ ಬಗ್ಗುವ ದೇಹವಲ್ಲದು. ಕುಸ್ತಿಯ ಮೋಹ ತುಂಬಿಸಿ, ಗುದ್ದಿ ಸಿಗಿದು ಹಾಕಿದಾಗ ಮಾತ್ರ ಮಣ್ಣು ಕಾಣುವ ದೇಹವದು, ಅಂದಾಗ ಶಕ್ತಿಯ ಬದಲು ಯುಕ್ತಿಯ ಬಲೆ ಬೀಸುವುದೇ ಲೇಸು. ಆ ವಿಚಾರ ನನಗಿರಲಿ. ಈಗ ರಾಜೀನಾಮೆ ಕೊಟ್ಟಿರುವಿಯಲ್ಲಾ ಮುಂದೆ...

ಲಿಲ್ಲಿ– ನನ್ನ ಜೀವನದ ಗತಿ ಏನೂಂತ ವಿಚಾರ ಮಾಡ್ತಿರೇನು? ಅದಕ್ಯಾಕ ವಿಚಾರ ಮಾಡ್ತೀರಿ ಸಾರ್? ಕಿರಣ್ ಬಿಸ್ಕಿಟ್ ಫ್ಯಾಕ್ಟರಿಯಲ್ಲಿ ಒಂದ್ಕೆಲ್ಸ ಖಾಲಿಯಿದೆಯಂತೆ. ಅರ್ಜಿ ಹಾಕಿದ್ದೇನೆ. ದೈವ ಇದ್ರೆ ಸಿಕ್ಕೇ ಸಿಗುತ್ತೆ.

ಧರ್ಮಯ್ಯ– ಹಾಗಾದ್ರೆ ಚಿಂತೆ ತಪ್ಪು ಬಿಡಮ್ಮ. ಆ ಫ್ಯಾಕ್ಟರಿ [illegible] ನನಗ ತುಂಬಾ ಆತ್ಮೀಯರು. ನಾನವರನ್ನು ಭೇಟಿಯಾಗಿ ಆ ಕೆಲಸವ ನಿನಗೇ ಕೊಡಿಸ್ತೀನಿ. ಮುಖ್ಯವಾಗಿ [illegible] ವನಜಮ್ಮ. [illegible]ರಲ್ಲಿ ಈ ನೀಚನ ದರಬಾರು ಇನ್ನೂ ಎಲ್ಲಿಗೆ ಮುಟ್ಟುತ್ತೋ ಗೊತ್ತಿಲ್ಲ [illegible]

ಇವನ ಮಗ ವಿಕ್ರಂ ಓಬ್ಬವನು ಬಂದ್ರಂತೂ ಮುಗಿದೇ ಹೋಯ್ತು. ಜೋಬಿ ನಲ್ಲಿದ್ದ ಚಿಲ್ಲರೆ ಹೊರಗ ಬಿಟ್ಟಂತಾಗುತ್ತದೆ. ಬಾರಮ್ಮಾ ಬಾ, ಸಧ್ಯ ಅವನಿಗೆ ಹಣ ಕಳಿಸ್ಬೇಕಾಗಿದೆ.

(ಹೋಗುವರು)

## ಎರಡನೆಯ ದೃಶ್ಯ

### ಉದ್ಯಾನವನ

(ವಿಶಾಲ ವಿಕ್ರಂ ಬರುವರು)

ವಿಶಾಲ– ವಿಕ್ರಂ, ಇಷ್ಟವಸರವಾಗಿ ನನ್ನೇಕಿಲ್ಲಿಗೆ ಕರ್ಕೊಂಡ್ಬಂದ್ರಿ?

ವಿಕ್ರಂ– ನಿನಗೊಂದು ಮುಖ್ಯವಾದ ವಿಷಯ ತಿಳಿಸ್ಬೇಕಾಗಿತ್ತು, ಅದಕ್ಕಿಲ್ಲಿಗೆ ಕರ್ಕೊಂಡ್ಬಂದೆ.

ವಿಶಾಲ– ವಿಷಯ... ಸಿಹಿ ತಾನೆ?

ವಿಕ್ರಂ– ಅದು ಸಿಹಿಯೋ, ಕಹಿಯೋ? ನಾ ಬಾಯಿಬಿಟ್ಮೇಲೆ ನಿನಗೇ ಗೊತ್ತಾಗುತ್ತೆ. ಆದ್ರೇ...

ವಿಶಾಲ– ಆದ್ರೇನು ವಿಕ್ರಂ?

ವಿಕ್ರಂ– ನೀ ನಿರೀಕ್ಷೆ ಮಾಡದ ವಿಷಯಾನ ಇಂದು ನನ್ನ ಬಾಯಿಂದ ಕೇಳ್ತೀಯಾ. ಅದ್ರಿಂದ ನಿನ್ಮನಸ್ಸು ಅದುರುತ್ತೋ, ಬೆದರುತ್ತೊ ನನಗೊತ್ತಿಲ್ಲ.

ವಿಶಾಲ– ನನಗೆ ಬಾಳ್ಕೊಡೋ ದೇವರ ಬಾಯಿಂದ ನನ್ಮನ ಅದುರ್ಸೋ ಶಬ್ದಗಳು ಬರೋದಿಲ್ಲ ಅನ್ನೋ ನಂಬಿಕೆ ನನಗಿದೆ.

ವಿಕ್ರಂ– ಆ ನಂಬಿಕೆ ನಿನಗಿರಬೇಕಾದ್ದೆ. ಯಾಕಂದ್ರೆ ನೀನು..., ಹೆಣ್ಣು! ಈ ಹೆಣ್ಣು ಹಣ್ಣಾಗಿ ಈ ಪುರುಷನ ಬಾಯಿಗೆ ಈಗಾಗಲೇ ರುಚಿ ಕೊಟ್ಟು ಬಿಟ್ಟಿದೆ. ಆದರೆ, ರುಚಿ ನೋಡಿರೋ ಈ ನಾಲಿಗೆಯಿಂದ ಬರೋ ವಿಷಯ [illegible], ತಿಳಿಸುವುದೋ ನನಗೂ ತಿಳಿದಿಲ್ಲ ನಿನಗೂ ತಿಳಿದಿಲ್ಲ. ಕಾರಣ, ಆ ಮುಂದಿನ ನಾಳು ಅಳಿವಿನ ಅರಿವು ನಮಗಾಗುವುದಕ್ಕಿಂತ

ಮೊದಲು ನಮ್ಮಿಬ್ಬರ ಪ್ರಥಮ ಮಿಲನದಂದು ಮೂಡಿ ಬಂದ ಪ್ರೇಮ ಗೀತೆಯನ್ನು ನನ್ನ ಮನಸ್ಸು ಮತ್ತೊಂದು ಬಯಸುತ್ತಿದೆ. ಅದಕ್ಕೆ ನೀನು ಸಮ್ಮತಿಸುವೆಯೋ? ಇಲ್ಲಾ ನಾ ಹೇಳಬೇಕೆಂದ ವಿಷಯವನ್ನು ಮೊದಲೇ ಕೇಳ ಬಯಸುವೆಯೋ?

ವಿಶಾಲ— ನೀವ್ಹೇಳುವ ವಿಷಯ ನನಗೆಂದೂ ವಿಷವಾಗದೆನ್ನುವ ವಿಶ್ವಾಸ ನನಗಿದೆ. ಕಾರಣ, ಮೊದಲು ನಿಮ್ಮ ಮನದ ಬಯಕೆಯನ್ನು ಮನ್ನಿಸುವುದೇ ನನಗೆ ಶ್ರೇಯಸ್ಸು.

ಪದ

(ಪದ ಮುಗಿದ ನಂತರ)

ವಿಕ್ರಂ— ವಿಶಾಲ...,

ವಿಶಾಲ— ಏನ್ವಿಕ್ರಂ?

ವಿಕ್ರಂ— ಈಗ ನಾ ಹೇಳೋ ವಿಷಯಾನ...?

ವಿಶಾಲ— ಕೇಳುವುದಕ್ಕೆ ಕಾತುರಳಾಗಿದ್ದೇನೆ.

ವಿಕ್ರಂ— ನೋಡು ವಿಶಾಲ, ನಾಳೆ ನಾ..., ಊರಿಗ್ಹೋಗ್ತೀನಿ.

ವಿಶಾಲ- (ಗಾಬರಿ) ಏನು? ನಾಳೆ ಊರಿಗ್ಹೋಗ್ತೀರಾ??

ವಿಕ್ರಂ- ಹೌದು ಪರೀಕ್ಷೆ ಮುಗಿತಲ್ಲ.

ವಿಶಾಲ- ಪರೀಕ್ಷೆಯೇನೋ ಮುಗೀತು. ಆದರೆ ನನ್ನ ನಿರೀಕ್ಷೆಗೆ ಶಿಕ್ಷೆ ಮಾತ್ರ ಕೊಟ್ಹ್ಹೋಗ್ಬೇಡಿ.

ವಿಕ್ರಂ- ಅಂದ್ರೆ...?

ವಿಶಾಲ— (ಬಳಸಿ) ಅಂದ್ರೆ..., ಈ ಹೆಣ್ಣಿನ ಕೊರಳಿಗೆ ತಾಳಿಕಟ್ಟಿ, ನನ್ನೂ ನಿಮ್ಹೊತೆಯಲ್ಲೇ ಕರೆದುಕೊಂಡು ಹೋಗಿರೆಂದು ಹೇಳಿದೆ.

ವಿಕ್ರಂ ಏನಂದೆ?...ನಾನು..., ನಿನ್ನ ಕೊರಳಿಗೆ..., ತಾಳಿ ಕಟ್ಬೇಕಾ? ಯಾವ ಕಾರಣಕ್ಕಾಗಿ?

ವಿಶಾಲ– ಯಾವ ಕಾರಣಕ್ಕಾಗಿ?! ವಿಕ್ರಂ, ನೀವು..., ಎಚ್ಚರವಾಗಿದ್ದೀರಿ ತಾನೆ? ನನ್ನ ಮನಸ್ಸನ್ನು ಕದ್ದು ಪ್ರೀತಿ, ಪ್ರೇಮಗಳ ಪರಿಚಯ ಮಾಡಿಕೊಟ್ಟು, "ನಿನ್ನನ್ನು ಮದುವೆಯಾಗಿ, ವರದಕ್ಷಿಣೆ ರೋಗ ಪೀಡಿತ ಪುರುಷರ ಪಾಲಿಗೆ ಸೂಜಿಮೊನೆಯಾಗಿ ನಿಲ್ಲುತ್ತೇನೆ" ಅಂತ ಪ್ರತಿಜ್ಞೆ ಮಾಡಿದ ನೀವು..., ಇಂದು ಇಂಥಾ ಪ್ರಶ್ನೆ ಕೇಳುತ್ತಿರುವುದು ತಮಾಷೆಗಾದರೂ ನನಗೆ ನಿರಾಸೆಯಾಗುತ್ತಿದೆ.

ವಿಕ್ರಂ– ನಾ ತಮಾಷೆ ಮಾಡ್ತಾಯಿದೀನಿ ಅಂತ ನೀ ತಪ್ಪು ತಿಳ್ಕೊಂಡಿದಿ ವಿಶಾಲ. ನಿನಗೆ ಮೊದಲೇ ತಿಳಿಸಿಲ್ವೆ? ನಾ ಹೇಳೋ ವಿಷಯದಿಂದ ನಿನ್ನಾಸೆ ಚಿಗುರುತ್ತೋ, ಕಮರಿ ಹೋಗುತ್ತೋ ಗೊತ್ತಿಲ್ಲವೆಂದು? ಆದ್ರೂ ವಿಷಯ ನಿನ್ನ ಪಾಲಿಗೆ ವಿಷವಾಗುವ ಮೊದಲು ಪಾಪ್ಮನಸ್ಸು ಕೊನೆಗೊಮ್ಮೆ ಹರುಷಗೊಳ್ಳಲಿಯೆಂದು ನಿನ್ನೊಂದಿಗೆ ಹಾಡಿ, ಕುಣಿದು ನಂತರ ವಿಷಯ ತಿಳಿಸಿದ್ದು ನಿನಗೆ ನಿರಾಸೆಗೊಳಿಸಿದ್ದು.

ವಿಶಾಲ– ಅಂದ್ರೆ...ನಿಮ್ಮಾತಿನ ಅರ್ಥ?

ವಿಕ್ರಂ– ಅರ್ಥ? ನಿನ್ನ ಕೊರಳಿಗೆ ನಾ ತಾಳಿ ಕಟ್ಟಲು ಸಾಧ್ಯವಿಲ್ಲ ಅನ್ನೋದು ಅರ್ಧ ಸತ್ಯವಾದರೆ, ನೀ ನನ್ನ ಹೆಂಡತಿಯಾಗೋದು ಕನಸಿನ ಮಾತೆನ್ನುವುದು ಇನ್ನರ್ಧ ಸತ್ಯ.

ವಿಶಾಲ- ಪ್ಲೀಜ್ ವಿಕ್ರಂ ನಿಮಗೆ ಕೈ ಮುಗಿತಿನಿ ಈ ರೀತಿ ಮುಚ್ಚುಮರೆ ಮಾತಾಡಬೇಡಿ. (ದುಃಖ) ನನ್ನ ತಂದೆ ಬಡವನಾದರೂ ಹಿಂದು ಸಂಸ್ಕೃತಿಯ ಬಂಧನದಲ್ಲಿರಿಸಿ ಬೆಳೆಸಿದ್ದಾರೆ. ಮದುವೆಗೆ ಮೊದಲೇ ಮಕ್ಕಳ್ಹೇರುವ ಮತಿಹೀನೆ ನಾನಾಗುವುದಿಲ್ಲವೆಂದು ಭಾವಿಸಿದ್ದಾರೆ. ಆದರೆ ನಾನು?..., ಅವರ ಆಚಾರ, ವಿಚಾರಕ್ಕೆ ವಿಕಾರ ರೂಪ ಕೊಟ್ಟು ಬಿಟ್ಟಿದ್ದೇನೆ. ನಿಮ್ಮ ಪ್ರೀತಿ ಪ್ರೇಮಗಳ ವಶವಾಗಿ ಒಂದೇ ಒಂದು ಕ್ಷಣ ಮೈ ಮರೆತು ನಿಮ್ಮ ತೋಳ ಬಂಧನದಲ್ಲಿ ಸಿಲುಕಿದ ತಪ್ಪಿಗೆ ಇಂದು ನಿಮ್ಮ ಬೀಜದ ಫಲವನ್ನು ಹೊತ್ತು ನಿಂತಿದೆ ನನ್ನ ಹೊಟ್ಟೆ. ಮದುವೆಗಿಂತ ಮೊದಲೇ ಹೊಟ್ಟೆಯಲ್ಲಿ ನಾಗುವ

ಹೊತ್ತೆನಲ್ಲಾ ಅನ್ನುವ ನೋವಿದ್ದರೂ, ಮಗುವಿನ ತಂದೆ ಮರೆಯದೆ ಮಡದಿ ಸ್ಥಾನ ಕೊಡುತ್ತಾರೆ ಅನ್ನುವ ನೆಮ್ಮದಿಯಿಂದ ಬದುಕಿದ್ದೆ. ಈಗ ನೀವೇನಾದರೂ ನನ್ನನ್ನು ಕೈಬಿಟ್ರೆ ಖಂಡಿತ ಜೀವಿಸಿರಲಾರೆ ವಿಕ್ರಂ ಜೀವಿಸಿರಲಾರೆ. (ಅಳು)

ವಿಕ್ರಂ– ನೀನತ್ತು ಸತ್ತರೂ ನನಗಾವ ನಷ್ಟವೂ ಇಲ್ಲ ವಿಶಾಲ. ಯೌವನದಲ್ಲಿ ನಡೆಯೋ ಇಂಥಾ ಘಟನೆಗಳನ್ನು ಹುಡುಗಾಟವೆಂದು ತಿಳಿಯಬೇಕು. ತಕ್ಷಣ ಮರೆತು ಮುಂದಿನ ಜೀವನದಾಟಕ್ಕೆ ಸಿದ್ಧರಾಗಿ ನಿಲ್ಲಬೇಕು. ಅದು ಬುದ್ಧಿವಂತರ ಲಕ್ಷಣ.

ವಿಶಾಲ- (ಕೋಪದಿಂದ) ಏನಂದೇ ಪಾಪಿ? ನಿನ್ನನ್ನು ಮೋಹಿಸಿ, ಮಡದಿಯಾಗಬೇಕೆಂದು ಬಯಸಿ..., ಮೈ ಮನಗಳೆರಡನ್ನೂ ನಿನಗರ್ಪಿಸಿ. ನಿನ್ನ ವಂಶದ ಪಿಂಡ ಹೊತ್ತು ನಿಂತಿರುವ ನಾನು...? ಇದೆಲ್ಲವನ್ನೂ ಹುಡುಗಾಟವೆಂದು ತಿಳಿದುಕೊಳ್ಳಬೇಕೆ? ಥೂ ನರಪಿಶಾಚಿಯೇ..., ಮನುಷ್ಯತ್ವವಿದ್ದ ಪುರುಷನಾಗಿದ್ದರೆ ಈ ರೀತಿ ಮಾತಾಡುತ್ತಿದ್ದೆಯಾ? ನೀನಾಗಿ ನನ್ನನ್ನು ಬೆಂಬತ್ತಿ ಬಂದೆ, ನೀನಾಗಿ ನನ್ನಲ್ಲಿ ಪ್ರೇಮಭಿಕ್ಷೆ ಕೇಳಿದೆ, ನೀನಾಗಿಯೆ ನನಗೆ ಬಾಳು ಕೊಡುತ್ತೇನೆಂದು ದೇವರ ಮುಂದೆ ಪ್ರಮಾಣ ಮಾಡಿದೆ. ನನ್ನನ್ನು ನಂಬಿಸಿ, ಬೇಡವೆಂದರೂ ಒತ್ತಾಯಿಸಿ, ನನ್ನ ಶೀಲವನ್ನು ದೋಚಿದೆ. ಈಗ? ನನ್ನನ್ನು ಪ್ರೀತಿಸಿದ್ದು ಸುಳ್ಳು ಮೋಹಿಸಿದ್ದು ಸುಳ್ಳು, ನಿನ್ನ ವಂಶದ ಕುಡಿ ನನ್ನ ಹೊಟ್ಟೆಯಲ್ಲಿ ಬೆಳೆಯುತ್ತಿರುವುದು ಹುಡುಗಾಟದ ಪಿಂಡವೆಂದು ಮಾತಾಡುತ್ತಿರುವಿಯಲ್ಲಾ ನೀನು ಮನುಷ್ಯನೆ? ನಿನಗೆ ಹೃದಯವಿದೆಯೇ? ನಿನ್ನ ಹುಚ್ಚು ಹುಡುಗಾಟಕ್ಕೆ ನನ್ನ ದೇಹವೇ ನಿನಗೆ ಮೈದಾನವಾಗಬೇಕಿತ್ತೆ? ನಾನು ನಿನಗೇನು ದ್ರೋಹ ಬಗೆದಿದ್ದೆನೆಂದು ನನಗಿಂಥಾ ಶಿಕ್ಷೆ?

ವಿಕ್ರಂ- ನೋ, ನೋ ಖಂಡಿತ ನೀ ನನಗ ದ್ರೋಹ ಬಗೆದಿಲ್ಲ. ಆದರೆ, ನಿನ್ನ ಬದುಕಿಗೆ ನೀನೇ ದ್ರೋಹ ಬಗೆದುಕೊಂಡೆ. ಆ ತಪ್ಪಿಗೆ ನೀನಿಂದು ಶಿಕ್ಷೆ ಅನುಭವಿಸಲೇ ಬೇಕು.

ವಿಶಾಲ- (ಆಶ್ಚರ್ಯವಾಗಿ) ಏನಂದೆ?! ನನ್ನ ಬದುಕಿಗೆ ನಾನೇ ದ್ರೋಹ ಬಗೆದುಕೊಂಡೆನೆ?

ವಿಕ್ರಂ- ಮತ್ತಿನ್ನೇನು? ಹರೆಯದ ಹೆಣ್ಣನ್ನು ನೋಡುವ ಕಣ್ಣುಗಳು ನೂರಾರು, ಬಾಯಿಂದು ಕರೆಯುವ ಬಾಯಿಗಳು ಸಾವಿರಾರು, ಮದುವೆಯಾಗುತ್ತೇನೆಂದು ಮಾತುಕೊಟ್ಟು ಮಂಕುಬೂದಿ ಊದುವವರಂತೂ ಹಲವರು. ಆದರೆ, ಅವರು ಮಾತುಕೊಟ್ಟ ಮಾತ್ರಕ್ಕೆ ಮದುವೆಗೆ ಮುಂಚೆ ಮೈ ಅರ್ಪಿಸಿದ ತಪ್ಪು ನಿನ್ನದು. ಹೆಣ್ಣಿಗೆ ಶೀಲ ಮುಖ್ಯ. ಬದುಕಿನುದ್ದಕ್ಕೂ ಹೆಣ್ಣು ಕಾಪಾಡಿಕೊಂಡು ಹೋಗುವ ಸಂಪತ್ತೆಂದರೆ ಅದೊಂದೆ. ಆ ಪ್ರಜ್ಞೆ ನಿನಗಿದ್ದಿದ್ದರೆ ನೀನೇಕೆ ಕಾಲು ಜಾರುತ್ತಿದ್ದೆ? ಬಿಗಿದಪ್ಪಿದ ಗಂಡಿನ ಹಿಡಿತವನ್ನು ಮತ್ತಷ್ಟು ಬಿಗಿಗೊಳಿಸಲು ಪ್ರಚೋದಿಸಿ, ಅವನ ಸರಸದಾಟ ಯಶಸ್ವಿಯಾಗಿ ಸಾಗಲು ಅನುವು ಮಾಡಿಕೊಟ್ಟಿರಬೇಕಾದರೆ ನಿನಗೂ ಆ ಸುಖ ಹಿತವಾಗಿತ್ತು. ಅವಶ್ಯ ಬೇಕಾಗಿತ್ತು. ಅಂದಾಗ ನಿನ್ನಿಂದ ನನಗೆ ನನ್ನಿಂದ ನಿನಗೆ ಬಯಸಿದ ಸುಖ ಸಿಕ್ಕಿರಬೇಕಾದರೆ ಮದುವೆಗೆ ಒತ್ತಾಯಿಸುವ ಹಕ್ಕು ನಿನಗಿಲ್ಲ.

ವಿಶಾಲ– ಯಾಕಿಲ್ಲ ? ನಿಮ್ಮಿಚ್ಛೆ, ನನ್ನ ಮೆಚ್ಚಿಗೆ ಎರಡೂ ಕೂಡಿ ನಮ್ಮಿಬ್ಬರ ದೈಹಿಕ ಸಂಬಂಧಕ್ಕೆ ಕಾರಣೀಭೂತವಾಗಿದೆ. ಅಂದಾಗ, ನಿಮ್ಮದೆ ಹಿಡಿದು ಕೇಳೋ ಹಕ್ಕು ನನಗಿದೆ. ಅಲ್ಲದೆ, ನಾ ನಿಮಗೆ ಸೆರಗಾಸಿದ್ದು ನನ್ನ ಕಾಮದಾಹ ತೀರಿಸಿಕೊಳ್ಳುವದಕ್ಕಲ್ಲಾ, ಮೋಡಿ ತುಂಬಿದ ನಿಮ್ಮ ಪ್ರೀತಿಯನ್ನು ಪ್ರತಿಭಟಿಸುವ ಮೊಂಡುತನ ಮಾಡಬಾರದೆಂದು.

ವಿಕ್ರಂ– ಅಯ್ಯೋ ಮರುಳೆ, ಹಿತ ಸಿಕ್ಕಿದ್ದಕ್ಕೆ ಮೊಂಡುತನ ನಿನ್ಹತ್ತಿರ ಬಂದಿಲ್ಲ. ನೋಡು, ಕದ್ದು ಬಸಿರಾಗಿದ್ದನ್ನ ಸದ್ದು ಮಾಡಿ, ಸುಮ್ನೆ ಯಾಕ ಗಂಡಾಂತರ ತಂದ್ಕೊಳ್ತಿಯಾ ? ನಾನಂತೂ ನಿನಗೆ ದಕ್ಕೋದಿಲ್ಲ, ನನ್ನ ಸುದ್ದಿ ಬಿಟ್ಬಿಡು. ನಾ ಬಯಸಿದರೆ ಮೈತುಂಬಾ ಬಂಗಾರ ಹೇರಿಕೊಂಡು ನನ್ನ ಮನೆಯ ಹೊಸ್ತಿಲು ದಾಟಿ ಬರುವ ಹೆಣ್ಣುಗಳು ಸಾಕಷ್ಟಿದ್ದಾರೆ.

ವಿಶಾಲ– (ದುಃಖಾವೇಶದಿಂದ) ಹಾಗಿದ್ದು ನನ್ನನ್ನೇಕೆ ಬಯಸಿದಿರಿ, ನನ್ನ ಬಾಳನ್ನೇಕೆ ಹಾಳ್ಮಾಡಿದ್ರಿ ?

ವಿಕ್ರಂ– ನಾ ಮಾಡಿದ ಛಾಲೇಂಜ್‌ಗಾಗಿ.

ವಿಶಾಲ– ಏನು...? ಛಾಲೇಂಜ್ ಮಾಡಿದ್ರ್ಯಾ ?

ವಿಕ್ರಂ– ಹೌದು. ನಮ್ಮ ಕಾಲೇಜ್‌ನಲ್ಲಿ ಸೌಂದರ್ಯರಾಣಿಯೆಂದು ಕರೆಸಿಕೊಳ್ಳುತ್ತಿದ್ದ ಹೆಣ್ಣು ನೀನು. ನಿನ್ನನ್ನು ಬಯಸಿ ಅಪಮಾನ ಹೊಂದಿದ ನನ್ನ ಗೆಳೆಯರು ನನಗೆ ಛಲ ಹುಟ್ಟಿಸಿ ನಿನ್ಮೇಲೆ ಛೂ ಬಿಟ್ರು. "ಆ ಹೆಣ್ಣಿಗೆ ಕಣ್ಣೊಡೆದು ಮಣ್ಮುಕ್ಕಿಸಿ ಬಂದು ನಮ್ಮೆದುರು ನಿಲ್ಲು" ಎಂದು ನನ್ನ ಗಂಡು ತನಕ್ಕೆ ಸವಾಲ್ಹಾಕಿದರು. ಆ ಕಾರಣಕ್ಕಾಗಿ ನಿನ್ನನ್ನು ಪ್ರೀತಿಸಿ, ಮೋಹಿಸಿ ದೇಹ ಸುಖವನ್ನೂ ಸವಿದೆ. (ತಿರಸ್ಕಾರದಿಂದ) ಇದೆಲ್ಲಾ ನನ್ನ ಮೋಜಿನಾಟಕ್ಕೇ ಹೊರತು, ಮದುವೆ ಮಾಡಿಕೊಳ್ಳುವ ಮೂರ್ಖತನಕ್ಕಲ್ಲ ಮರಿ.

ವಿಶಾಲ– ನಿನ್ನ ಜೂಜು, ಮೋಜಿನಾಟದಲ್ಲಿ ನಾನು ಕಳೆದುಕೊಂಡಿರುವ ಶೀಲಕ್ಕೆ ನೀನೇ ಹೊಣೆಗಾರ.

ವಿಕ್ರಂ– ಅದನ್ನ ಕನಸಲ್ಲೂ ಭಾವಿಸಬೇಡ. ನಾನೊಬ್ಬ ಪ್ರಯಾಣಿಕ. ಕಂಡ ಬಸ್ಸಿಗೆ ಕೈ ತೋರಿಸ್ತೀನಿ, ನಿಂತ ಬಸ್ಸನ್ನು ಹತ್ತಿ ಮುಂದೆ ಸಾಗ್ತೀನಿ, ನಾನ್ಹೋಗೋ ದಾರಿ ಬಿಟ್ಟು ಬೇರೆ ದಾರಿ ಹಿಡಿದಾಗ ಇಳಿತೇನಿ, ಮತ್ತೊಂದು ಬಸ್ಸಿಗಾಗಿ ಕಾಯ್ತೇನಿ. ಇದು ನನ್ನ ಪ್ರಿನ್ಸಿಪಲ್ ಏನಂತಿಯಾ ?

ವಿಶಾಲ– ಅಯ್ಯೋ ಪಾಪಿ. ನನ್ನನ್ನು ಪ್ರಯಾಣಿಕರನ್ನು ಸಾಗಿಸುವ ಬಸ್ಸಿಗ್ಹೋಲಿಸಿ ಮಾತಾಡ್ತಿಯಾ ?

ವಿಕ್ರಂ– ಅರೆ... ಆ..., ಬಸ್ಸು ಅಂದ್ರೆ ನೀನು ಎಕ್ಸ್‌ಪ್ರೆಸ್ ಅಲ್ಲ. ಆರ್ಡಿನರಿ ಬಸ್ಸು. ಈ ಬಸ್ಸು ಯಾರೆಲ್ಲೇ ಕೈ ತೋರ್ಸಿದ್ರೂ ನಿಂತು ಮುಂದ್ಹೋಗುತ್ತದೆ. ಆದರೆ ಎಕ್ಸ್‌ಪ್ರೆಸ್ ಹಾಗಲ್ಲ. ತಾನೆಲ್ಲಿಂದ ಹೊರಟು, ಎಲ್ಲಿ ನಿಲ್ಲಬೇಕೆನ್ನುವುದನ್ನು ನಿಗದಿ ಪಡಿಸಿಕೊಂಡೇ ಹೊರಡುತ್ತದೆ. ಆ ರೀತಿ



ನೀನಾಗಲಿಲ್ಲ. ಕೈ ಮಾಡಿದಲ್ಲಿ ನಿಂತು, ಹತ್ತಿಸಿಕೊಂಡು ಹೋಗುವ ಆರ್ಡಿನರಿ ಬಸ್ಸಾದೆ.

ವಿಶಾಲ– ಬಾಯಿ ಬಿಗಿ ಹಿಡಿದು ಮಾತಾಡು ನೀಚ. ಪ್ರೀತಿಸುವವರೆಲ್ಲ ಹೆಣ್ಣಿನ ಪಾಲಿಗೆ ಪ್ರಯಾಣಿಕರಾಗಿದ್ದರೆ, ಹಿಂದೂ ಧರ್ಮದಲ್ಲಿ "ಗರತಿ" ಅನ್ನುವ ಶಬ್ದವೇ ಇರುತ್ತಿರಲಿಲ್ಲ. ಮಡದಿಯಾಗಬೇಕಾದವಳು ಮೈಮರೆತು ಅಪ್ಪಿಕೊಂಡರೆ, ನಿನ್ನ ದೃಷ್ಟಿಯಲ್ಲಿ ಆರ್ಡಿನರಿ ಬಸ್ಸಾಗುತ್ತಾಳಲ್ಲವೆ ? ಹಾಗಾದರೆ, ನಿನಗೆ ಜನ್ಮ ಕೊಟ್ಟವಳೂ ಆರ್ಡಿನರಿ ಬಸ್ಸೇ ಇರಬೇಕಲ್ಲ ?

ವಿಕ್ರಂ– ಏನಂದೇ...?

ವಿಶಾಲ– ಹಾಂ... ಶಾಂತವಾಗಿ ನೀನೇ ವಿಚಾರ ಮಾಡಿನೋಡು. ನಿಮ್ಮಾಯಿ ಒಂದ್ವೇಳೆ ಎಕ್ಸ್‌ಪ್ರೆಸ್ ಬಸ್ಸಾಗಿದ್ರೆ, ನಿನ್ನ ತಂದೆಗೆ ಹತ್ತಲು ಸಾಧ್ಯವಾಗುತ್ತಿದ್ದಿಲ್ಲ: ನೀನು ಈ ಭೂಮಿಯ ಬೆಳಕನ್ನೂ ಕಾಣುತ್ತಿದ್ದಿಲ್ಲ. ಅಂದಾಗ, ನಿಮ್ಮಾಯಿ ಕಂಡವರು ಕಂಡಲ್ಲಿ ಕೈ ಮಾಡಿ ಹತ್ತುವ ಆರ್ಡಿನರಿ ಬಸ್ಸೆನ್ನುವುದಕ್ಕೆ ಈ ಒಂದು ನಿದರ್ಶನ ಸಾಕಿಲ್ಲವೆ?

ವಿಕ್ರಂ– ಮುಚ್ಚು ಬಾಯಿ ಹೆಚ್ಚು ಮಾತಾಡಬೇಡ. ಉಚ್ಚರಿಸೋ ನಿನ್ನ ಪ್ರತಿಯೊಂದು ಶಬ್ದಕ್ಕೂ ನಂದೊಂದೇ ಉತ್ತರ ಈ ಜನ್ಮದಲ್ಲಿ ನೀ ನನ್ನ ಹೆಂಡತಿಯಾಗಲಾರೆಯೆಂದು.

ವಿಶಾಲ- ಹಾಗಾದ್ರೆ ನನ್ನೊಟ್ಟೆಯಲ್ಲಿ ಬೆಳೆಯುತ್ತಿರುವ ನಿನ್ನ ವಂಶದ ಕುಡಿಗೆ ಏನೆಂದು ಉತ್ತರಿಸುವಿ?

ವಿಕ್ರಂ- ಅದು ನನ್ನ ವಂಶದ ಕುಡಿಯೆಂದು ಸಾಧಿಸಲು ನಿನ್ನಲ್ಲಿ ಯಾವ ಸಾಕ್ಷಿಯಿದೆ, ಯಾವ ಆಧಾರವಿದೆ? ಅಯ್ಯೋ ಮಂಕುದಿಣ್ಣೆ,... ಇಂದಿನ ಸಮಾಜದಲ್ಲಿ ದುಡ್ಡಿದ್ದವನೇ ದೊಡ್ಡವನು. ಒಂದು ಹೆಣ್ಣಿನ ಅತ್ಯಾಚಾರ ಮಾಡಲಿ, ಒಬ್ಬ ವ್ಯಕ್ತಿಯ ಕೊಲೆ ಮಾಡಲಿ ದುಡ್ಡಿನ ದೊಡ್ಡತನ ಸೆಡ್ಡೊ... ನು ಜಯಿಸಿ ಬಿಡುತ್ತದೆ. ಇಂಥಾ ಆಧುನಿಕ ವೈಜ್ಞಾನಿಕ ಯುಗದಲ್ಲಿ ಹುಟ್ಟಿದ

ನಿನಗೆ ಈ ಸಣ್ಣ ಗರ್ಭ ಕರಗಿಸಿಕೊಳ್ಳಲು ಸಾಧ್ಯವಿಲ್ಲವೇ? ವಿಚಾರ ಮಾಡ ಬೇಡ (ಹಣ ತೆಗೆದು) ಈ ಹಣ ಅಷ್ಟೋ ಜಾಣ ನಿನ್ನ ಕೈಯಲ್ಲಿದ್ರೆ, ನಿನ್ನ ಸಮಸ್ಯೆ ನಿನಗರಿವಿಲ್ಲದೆ ಖುಲಾಸೆಯಾಗಿಬಿಡುತ್ತದೆ. (ಒಗೆದು) ತಗೋ ಆ ಹಣವನ್ನ. ಇದು ನಿನ್ನಿಂದ ನಾ ಪಡೆದ ಸುಖ ಹಾಗೂ ಆ ಸುಖದ ಶಾಖ ದಿಂದ ಮತ್ತೊಂದು ಮುಖ ರೂಪಗೊಳ್ಳುತ್ತಿರುವುದನ್ನು ಕತ್ತರಿಸಿ ತೆಗೆಯು ದಕ್ಕಾಗಿ ಹಳೆಯದನ್ನು ಮರೆತು ಹೊಸ ಬದುಕಿನ ಕಡೆ ವಿಚಾರ ಹರಿಸು, ಬರ‍್ತೀನಿ ಗಾಡ್ ಬ್ಲೆಸ್ ಯು (ಹೋಗುವನು)

ವಿಶಾಲ- (ಚೀರಿ) ವಿಕ್ರಂ......???!

–ಹಿನ್ನೆಲೆ–

## ಮೂರನೆಯ ದೃಶ್ಯ

## ರಸ್ತೆ

(ಡಾಕ್ಟರ್ ಅರವಿಂದ ಬಂದು)

ಅರವಿಂದ– ದೇವರ ಸೃಷ್ಟಿ ಎಂತ ವಿಚಿತ್ರ! ಮನುಷ್ಯನಿಗೆ ಮತ್ತೆ ಮತ್ತೆ ತನ್ನ ಮಾಯೆಯ ಛಾಯೆಯಿಂದ ಆಸೆಗಳ ಮಿತಿಯನ್ನು ತಪ್ಪಿಸಿ ಅತಿಯಾಗು ವಂತೆ ಮಾಡುತ್ತಲೇ ಇರುತ್ತಾನೆ. ಅದಕ್ಕೆ ಉದಾಹರಣೆ ನಾನೇ. ವೃತ್ತಿಯಲ್ಲಿ ಡಾಕ್ಟರಾದ ನನಗೆ ಕುಳಿತುಂಡರೂ ಕರಗದಷ್ಟು ಧನಕನಕವಿದ್ದರೂ. ಆ ಮಿಲ್ಲಿನ ಒಡತಿ ವನಜಾಳ ಆಸ್ತಿಗೆ ಅಧಿಕಾರಿಯಾಗಬೇಕೆಂದು ನನ್ನ ಮನ ಬಯಸಿದೆ. ಈಗಾಗಲೇ ನನ್ನ ಪ್ರೇಮ ಪಂಜರದಲ್ಲಿ ಬಂಧಿಯಾಗಿರುವ ವನಜಾ. ವಾರಸು ದಾರರಿಲ್ಲದ ಆಸ್ತಿಯ ಒಡತಿ. ತಾಳಿ ಕಟ್ಟಿದವನ ಕೊರಳಿಗೆ ಹೂಮಾಲೆಯಾಗಿ ಸೇರೊ ಅವಳಾಸ್ತಿಯನ್ನು ಆಸೆ ಪಡದವರಾರು? ದಿನಕ್ಕೊಂದು ಹೆಣ್ಣಿನ ಜೊತೆಗೆ ಸರಸವಾಡುವ ನನಗೆ ಈಗ ಹೆಣ್ಣಿನ ಜೊತೆಗೆ ಹೊನ್ನಿನ ಕವಚವೂ ದಕ್ಕುವ ಸುಯೋಗ ಒದಗಿ ಬಂದಿದೆ. ಡೆಲ್ಲಿಗ್ಹೋಗಿರೋ ವನಜಾ ಊರಿಗೆ ಮರಳಿ ಬಂದ ತಕ್ಷಣ ಆದಷ್ಟು ಬೇಗ ಮದುವೆಯಾಗಲು ಒತ್ತಾಯಿಸಿ, ನನ್ನ

ಛಲ ಸಾಧಿಸಿಕೊಳ್ಳುತ್ತೇನೆ. ಆದರೆ ಸಧ್ಯದ ನನ್ನ ಕಾಮದಾಹ ತಣಿಸಲು ಯಾವ ಹೆಣ್ಣನ್ನು ಹಾರಿಸಿಕೊಂಡು ಬಂದಿದ್ದಾನೋ ಆ ಕಂಪೌಂಡು ಜಗ್ಗು, ನೋಡ್ಬೇಕು. (ಭೋಜರಾಜ, ಮೂರ್ತಿ ಎದುರಾಗುವರು)

ಭೋಜರಾಜ– ಏನ್ ಡಾಕ್ಟ್ರೆ, ಯಾವ್ದೊ ಗಹನವಾದ ವಿಚಾರ ನಡಿಸಿರಲ್ಲ ರಸ್ತೆಮ್ಯಾಲೆ ?

ಅರವಿಂದ– ಅಂತಾ ಗಹನವಾದ ವಿಚಾರವೇನಿಲ್ಲ ಬನ್ನಿ. ಈಗ ತಾನೆ ಒಂದು ಆಪ್ರೇಷನ್ ಮುಗಿಸಿ ಬಂದೆ. ಆದ್ರೆ ಪೇಷಂಟ್ ಬಹಳ ವೀಕು. ಹೀಗಾಗಿ...

ಮೂರ್ತಿ– ಆ ಪೇಷಂಟ್ ಬದುಕುತ್ತೊ, ಇಲ್ಲೋ ಅಂತ ವಿಚಾರಕ್ಕ ಬಿದ್ದಿರೇನು ?

ಅರವಿಂದ– ಏನಂತ ಮಾತಾಡ್ತಿಯೋ ಮೂರ್ತಿ. ನನ್ನ ಕೈಯಿಂದ ಆಪ್ರೇಷನ್ ಆದವರು ಇದುವರೆಗು ಯಾರೂ ಸತ್ತಿಲ್ಲ.

ಮೂರ್ತಿ– ಸತ್ತಿಲ್ಲ. ಇದ್ದು ಸತ್ತವರ್ಗತಿ ಬದುಕ್ಯಾರ.

ಭೋಜರಾಜ– ಏನ್ಲೆ ಹಂಗ್ಯಾತಾಡಿದ್ರೆ ?

ಮೂರ್ತಿ– ಇದ್ದ್ಹಕೀಕ್ಹತ್ತ ಮಾತಾಡೇನ್ರಿ. ಖರೆ ಹೇಳ್ಬೇಕಂದ್ರ ಇತ್ತಿತ್ಲಾಗಂತು ದವಾಖಾನಿ, ಡಾಕ್ಟ್ರು ಅಂದ್ರ ಸಾಕು ನನಗ ನಡುಗ ಶುರುವಾಗುತ್ತ.

ಅರವಿಂದ– ಯಾಕಪಾ, ದವಾಖಾನಿ ಅಂದ್ರ ನಿನ್ನ ಪಾಲಿಗೆ...?

ಮೂರ್ತಿ– ನರಕ ಲೋಕ.

ಭೋಜರಾಜ– ಡಾಕ್ಟ್ರಂದ್ರ ?

ಮೂರ್ತಿ– ಯಮ... ಯಮ ಇದ್ದಂಗ.

ಅರವಿಂದ– ಅಂದ್ರೇನಪಾ, ಡಾಕ್ಟ್ರೆಲ್ಲಾ ಸೇರಿ ನಿನ್ನ ಜೀವ ತಗಿಯಾಕ ನಿಂತಾರಂತ ತಿಳದಿಯೇನು ?

ಮೂರ್ತಿ– ಎಲ್ಲಾ ಡಾಕ್ಟ್ರಗೂ ಹಂಗಂದ್ರ, ನನ್ನಿಡಿದು ನಾದ್ಯಾರು. ಕೆಲ-ಕೆಲ ಡಾಕ್ಟ್ರಿಂದ ಇತ್ತಿತ್ಲಾಗಾಗೇವಲ್ರಿ ಆಪ್ರೇಷನ್ ಮರ್ಡರ್ ಪ್ರಕರಣಗಳು. ಇವು ನಮಗ ಭಯೋತ್ಪಾದನೆ ಮಾಡಿಬಿಟ್ಟಾವ. ನಿಮಗೊತ್ತಿಲ್ರ್ಯಾ ?

ಮನ್ನೆ ಮನ್ನೆರ ಪೇಪರ್ನ್ಯಾಗ ಒಂದು ಪ್ರಕರಣ ಫೋಟೋದ ಸಮೇತ ಬಂದಿತ್ತಲ್ರಿ.

ಭೋಜರಾಜ– ಯಾವ ಪ್ರಕರ್ಣಾಲೇ ಅದು ?

ಮೂರ್ತಿ– ಒಂದೆಂಟ್ಹತ್ತು ವರ್ಷದ ಸಣ್ಣ ಹುಡುಗಿರ್ಬೇಕ್ರಿ ಪಾಪ. ಎಡಗಡೆ ಚಪ್ಪಿಮ್ಯಾಲ ಕುರು ಆಗೇತಿ. ನಾನಾ ನಮೂನಿ ಔಷಧಿ ಹಾಕಿದ್ರೂ ವಾಸ್ಯಾಗಿಲ್ಲ. ಹೆಪ್ಗಟ್ಟಿ ಗಡ್ಡಿ ಹಂಗ್ಹ ಉಳುದು ಬಿಟ್ಟೆತಿ. ಕಡಿಕ ಆ ಹುಡುಗನಪ್ಪ ದವಾಖಾನಿಗೆ ಕರ್ಕೊಂಡ್ಬಂದು ಡಾಕ್ಟ್ರಿಗೆ ತೋರ್ಸಿದ. ಆ ಡಾಕ್ಟ್ರ ನೋಡಿದವನ ಇದನ್ನ ಆಪ್ರೇಷನ್ ಮಾಡೇ ಗಡ್ಡಿ ತಗಿಬೇಕಂತ ಹೇಳಿಬಿಟ್ಟಾನ. ಪಾಪ ಅವನರ ಬಡವ. ಆದ್ರೂ ಮಗನ ಕುರು ವಾಸ್ಯಾದ್ರ ಸಾಕಂತ ಕೂಲಿನಾಲಿ ಮಾಡಿ ಕೂಡ್ಸಿಟ್ಟ ರೊಖ್ಖ ತಂದವನ ಆ ಡಾಕ್ಟ್ರಿಣಕ್ಕ ಬಡ್ದು ಮಗನ್ನವರ ಕೈಗೊಪ್ಪಿದ, ಆ ಡಾಕ್ಟ್ರಪ್ಪಾ ಆಪ್ರೇಷನ್ನೂ ಮಾಡಿದ.

ಭೋಜರಾಜ– ಕುರ ವಾಸ್ಯಾಗಿರ್ಬೇಕು ?

ಮೂರ್ತಿ– ವಾಸ್ಯಾಗ್ಲಿಲ್ಲ, ಮತ್ತಷ್ಟು ಘಾಸಾತು.

ಭೋಜರಾಜ– ಘಾಸ್ಯಾತು ?! ಯಾಕಲೇ ?

ಮೂರ್ತಿ– ಆ ಹುಡುಗ್ಗ ಕುರ ಆಗಿದ್ದು ಯಾವ ಭಾಗದಾಗ ?

ಭೋಜರಾಜ– ಎಡಗಡೆ ಚಪ್ಪಿಮ್ಯಾಗ.

ಮೂರ್ತಿ– ಆದ್ರೀ, ಡಾಕ್ಟ್ರ ಆಪ್ರೇಷನ್ ಮಾಡಿದ್ದು ಬಲ್ಗಡೆ ಚಪ್ಪಿಮ್ಯಾಗ.

ಅರವಿಂದ– ಅವಿವೇಕಿ. ಕುರ ಆದ ಜಗಾ ಬಿಟ್ಟು ಬೇರೆ ಜಗದಾಗ ಹೆಂಗ ಆಪ್ರೇಷನ್ ಮಾಡ್ತಾರೋ ?

ಮೂರ್ತಿ– ಹೆಂಗ ? ಕಂಠಪೂರ್ತಿ ಕುಡುದ್ಬಂದು ಆಪ್ರೇಷನ್ನಿಗೆ ನಿಂತ. ಎಡಕ್ಕಿದ್ದ ಕುರ ಬಲಕ್ಕ್ಯಾಂಗಾತು, ಪುಣ್ಯಾತ್ಮ ಛಲೋ ಚಮ್ಡಾನ ಎಳ್ದು ಕೊಯ್ದುಬಿಟ್ಟಾನ.

ಅರವಿಂದ– ಅವನ್ಯಾರೋ ಒಬ್ಬ ಅಯೋಗ್ಯ ಹಂಗ್ಮಾಡಿದ ಅಂದ್ರೆ, ಎಲ್ರೂ ಹಂಗ್ನ ಮಾಡ್ತಾರೇನು ?

ಮೂರ್ತಿ– ಎಲ್ಲಾರ ಸುದ್ದಿ ನಾ ಎಲ್ಲಿ ಹೇಳೇನ್ರಿ ? ಇದ್ರಾಗಿಲ್ಲ ಇಂತಾ ಕುಡುಕ ಡಾಕ್ಟ್ರು, ಈ ಮಕ್ಕ ಪಕೀಕ್ಷತ್ತೇಳಿದೆ. ಒಂದ್ಮಾತ್ಹೇಳ್ಬೇಕಂದ್ರ, ರೋಗ ಬಡುಕೊಂಡವರು ದವಾಖಾನಿಗೆ ಹೋದ್ರ, ಮೊದಲು ಡಾಕ್ಟರ್ನ ಚಕ್ ಮಾಡಿ ಮನುಷ್ಯ ಆರಾಮದಾಸಿಲ್ಲೊ ಅನ್ನೋದು ಖಾತ್ರಿ ಮಾಡ್ಕೊಂಡು. ಆಮ್ಯಾಲ ತಾವು ಚಕ್ ಮಾಡಿಸ್ಕೋಬೇಕು. ಇದು ನನ್ನ ಸಣ್ಣ ಸಲಹೆ.

ಅರವಿಂದ– ಅಂತೂ ಸಮ್ಮನ್ನ ಯಮನ ಸ್ನೇಹಿತನ್ನ ಮಾಡ್ಬಿಟ್ಟಿಲ್ಲಪ್ಪ

ಮೂರ್ತಿ– ನಾನ್ಯಾಕ್ರಿ ಒಬ್ಬ ಸಂಸ್ಕೃತ ಕವಿ. "ನಮೋ ಎಂಬೆ ಎಲೇ ವೈದ್ಯರಾಜನೆ, ಯಮರಾಜನ ಹಿರಿ ಸೋದರನೇ, ಯಮನು ಹೀರಿದರೆ ಪ್ರಾಣ ಮಾತ್ರವನು. ನೀ ಸೆಳೆಯುವೆ ಕಾಂಚಾಣವನೂ ಅಂತ್ಹೇಳ್ಯಾನ.

ಭೋಜರಾಜ– ಆ ಕವಿ ಹೇಳಿದ, ಈ ಕಪಿ ಒದರಿದ. ಸಾಕು ಸುಮ್ನಿರಲೆ.

ಅರವಿಂದ– ಪರವಾಗಿಲ್ಲ ಬಿಡಿ ಸಾರ್ ನಮ್ಮ ನಡೆ ಹೇಗಿರುತ್ತೋ, ಹೆಸರು ಹಾಗಿರುತ್ತೆ. ಅದಕ್ಕುದಾಹರಣೆ ನೀವೆ. ತಾಲ್ಲೂಕು, ಜಿಲ್ಲಾ ಅಷ್ಟೆ ಯಾಕ? ರಾಜ್ಯಮಟ್ಟದಲ್ಲಿ ಸೈತ ನಿಮ್ಮ ವರ್ಚಸ್ಸು ಪ್ರಭಾವ ಬೀರಿದೆ.

ಭೋಜರಾಜ– ಇದೆಲ್ಲಾ ಜನಾನುರಾಗ ಡಾಕ್ಟ್ರೆ. ನಾ ಹುಟ್ಟಿರೋದೆ ಸಮಾಜ ಕಲ್ಯಾಣಕ್ಕಾಗಿ, ಸ್ತ್ರೀ ಕುಲದ ಉದ್ಧಾರಕ್ಕಾಗಿ.

ಮೂರ್ತಿ– ಕಣ್ಣಿಗ್ಬಿದ್ದ ಯಾವ ಹೆಣ್ಣೂ ಸರಳ ಮನಿ ಸೇರಿಲ್ಲ.

ಅರವಿಂದ– ತಾವು ದೊಡ್ಡವರು ತಮ್ಮನುಕಂಪ ಸದಾ ಈ ಬಡವನ್ಮ್ಯಾಲಿದ್ರ ಸಾಕು, ಬರ್ತೀನ್ರಿ. (ಹೋಗುವನು)

ಮೂರ್ತಿ– ಇವನ್ತಲಿ ಸರಿಯಿದ್ದಂಗ ಕಾಣುದಿಲ್ಲ.

ಭೋಜರಾಜ– ಯಾಕಂತಿ?

ಮೂರ್ತಿ– ಹೋಗಿ ಹೋಗಿ ನಿಮ್ಮನುಕಂಪ ಬೇಡಿದ್ನಲ್ಲಾ ಅದಕ್ಕ. ಯಾಕಂದ್ರ, ನಿಮ್ಮನುಕಂಪ ಭೂಕಂಪಿದ್ದಂಗ. ಇದೀ ಮುಗ್ಧಾಗ ಗೊತ್ತೇ ಇಲ್ಲ.

ಭೋಜರಾಜ– ನನ್ನನ್ನ ಪೂಜಿಸಿದವರ ಪಾಲಿಗೆ ನನ್ನನುಕಂಪ, ತಂಪು ಕೊಡೋ ಮರ ಇದ್ದಂಗಲೆ. ಆದ್ರ, ನನಗೆದುರಾಗಿ ಘರ್ಜಿಸಿದವರ ಪಾಲಿಗೆ

ಅದ್ದಾ ಅನುಕಂಪ ಭೂಕಂಪವಾಗಿ ಬಿಡುತ್ತದೆ. ಸಧ್ಯ. ಆ ಡ್ರೈವರ್ ರಂಗನ್ನ ನನ್ನ ಭೂಕಂಪಕ್ಕೆ ಬಲಿಪಶು ಮಾಡಬೇಕು ಅಂತೀನಿ...

ಮೂರ್ತಿ– ದಮ್ಮಿಲ್ಲಂತ ಸುಮ್ನ ದೀರಿ.

ಭೋಜರಾಜ– ದಮ್ಯಾಕಿಲ್ಲ, ಅವರಪ್ಪನಷ್ಟೈತಿ.

ಮೂರ್ತಿ- ಸಾಧ್ಯನೇ ಇಲ್ರಿ ಅವರಪ್ಪ ನಿಮಗಿಂತಾನು ಬಾಳಿತ್ತಂತ್ರಿ ದಮ್ಮು. ಕೊನಿಗೆ ಅದ ದಮ್ಮಿನ್ಯಾಗ ಕೆಮ್ಮಿ ಕೆಮ್ಮಿ ಉಸುರು ಸಿಕ್ಕು ಸತ್ನಂತ್ರಿ

ಭೋಜರಾಜ- ಮೂರ್ತಿ, ಸಧ್ಯ ನೀನೀಗ ಯಾವ ದಮ್ಮಿನ ವಿಷಯ ಹೇಳಿದೆಪ?

ಮೂರ್ತಿ- ಅದ ಗೂರ್ಧತ್ತಿದ ದಮ್ರಿ (ಕೆಮ್ಮಿ ತೋರಿಸುವನು)

ಭೋಜರಾಜ– ನನ,ಗನೇ. ನಾ ಹೇಳಿದ್ದು ಆ ದಮ್ಮಲ್ಲ, ತಾಕತ್ತಿನ ದಮು

ಮೂರ್ತಿ- ಯಾಕ ಮಾತಾಡ್ತೀರ್ರಿ? ಆ ರಂಗ್ಯಾನ ಕತಿ ಮುಗುಸ್ತೀನಿ ಮುಗುಸ್ತೀನಂತ ಅಂತೀರೆ ಹೊರ್ತು, ಅರಿವದೊಂದು ಕೂದ್ಲ ಅಲ್ಲಾಡ್ಯಾಕ ಸಾಧ್ಯಾಗಿಲ್ಲ ನಿಮಗ. ನಿಮ್ಮ ಜಾಗದಾಗೇನರ ನಾನಿದ್ದಿದ್ರೆ, ಅವನ್ನ ತಿಗಣಿ ವರದಂಗ ವರದ್ಬಿಡ್ತಿದ್ದೆ.

ಭೋಜರಾಜ– ಆ ಕೆಲ್ಸ ಅಷ್ಟು ಸುಲಭಲ್ಲಲೇ ಮೂರ್ತಿ. ಯಾಕಂದ್ರ. ನಮ್ಮ ವನಜಾಳ ಬಲಗೈ ಈ ಮಗ. ಇವನ ಮಾತು ಅವಳಿಗೆ ವೇದವಾಕ್ಯ

ಮೂರ್ತಿ- ಈ ಮಗಾ ಅವರಿಗೆ ಮಾಟ ಮಾಡ್ಸಿರ್ಬೇಕ್ರಿ. ಯಾಕಂದ್ರ ನಿಂಬಿಹಣ್ಣಿನ ಮಾರ್ಕೆಟ್ಟಿನ್ಯಾಗಿ ಬಾಳಿರ್ತಾನವನು. ಅದರಾಗದ್ರಾಗ, ಅವನ ಮಾರ್ಯಾಗ ಒಂದು ನಮೂನಿ ಅಟ್ರ್ಯಾಕ್ಷನ್ ಪವರ್ ಐತ್ರಿ. ಅಲ್ರಿ, ಆ ಟೈಪಿಸ್ಟ್ ಲಿಲ್ಲಿ ನನ್ನೂಡ ಎಷ್ಟು ಚಂದ ನಕ್ಕೊಂತ ಮಾತಾಡ್ತಿರ್ತಾಳೆ. ಇವ ನೌನು ಬಂದು ಮಾರಿ ತೋರ್ಸೂದ ತಡ, ನನ್ನ ಕತ್ತಿಗಿಂತ ಕಡಿ _ ಮಾಡ್ತಾಳ, ಅವನ ಬೆನ್ಹತ್ತಾಳ. ಅಲ್ಲಾ ನೀವ ವಿಚಾರ ಮಾಡ್ರಿ· ಯಾಕಂದ್ರ ಮನ್ನೆ ನಿಮಗೂ ಅನುಭವಾಗೇತಿ,



ಭೋಜರಾಜ– ಮೂರ್ತಿ, ಬಾಯ್ಮುಚ್ಕೊಂಡು ಮನಿಗೆ ನಡಿ ಮಗನ. (ಹೋಗುವಾಗ, ಟೆಲಿಗ್ರಾಂ ಹಿಡಿದು ಧರ್ಮಯ್ಯ ಬರುವನು)

ಧರ್ಮಯ್ಯ– ಯಜಮಾನ್ರೆ ನಿಮ್ಮಗ ವಿಕ್ರಂನಿಂದ ಟೆಲಿಗ್ರಾಂ ಬಂದಿದೆ.

ಭೋಜರಾಜ– (ಗಾಬರಿಯಾಗಿ) ಯಾಕೆ...! ಏನಾಗಿದೆಯಂತೆ?

ಧರ್ಮಯ್ಯ– ಗಾಬರಿಯಾಗ್ಬೇಡ್ರಿ ಅವರಿಗೇನೂ ಆಗಿಲ್ಲ. ಪರೀಕ್ಷೆ ಮುಗಿತು, ನಾಳೆ ಬರ್ತೀನಂತ ಟೆಲಿಗ್ರಾಂ ಕೊಟ್ಟಿದ್ದಾರಷ್ಟೆ.

ಭೋಜರಾಜ– ಹೌದ...? ಸರಿ ಬಿಡು ಡೆಲ್ಲಿಯಿಂದ ವನಜಾಳ ವಿಷ ಯವೇನಾದ್ರೂ ಬಂದಿದೆಯೇನು?

ಧರ್ಮಯ್ಯ– ಇಲ್ರಿ, ಯಾವ ವಿಷಯಾನು ಬಂದಿಲ್ಲ,

ಭೋಜರಾಜ– ನೋಡು. ಅವಳು ಬರೋ ವಿಷಯ ನಿನಗ ತಿಳಿದ ತಕ್ಷಣ, ಬಂದು ನನಗ ತಿಳಿಸ್ಬೇಕು.

ಧರ್ಮಯ್ಯ– ಆಯ್ತು, ಬರ್ತೀನ್ರಿ. (ಹೋಗುವಾಗ)

ಮೂರ್ತಿ– ಅಲ್ಲಾ, ಧರ್ಮಯ್ಯನವರ ಆ ಟೈಪಿಸ್ಟ್ ಲಿಲ್ಲಿ ಬಗ್ಗೆ ಏನರ ವಿಚಾರ ಮಾಡಿರೇನು?

ಧರ್ಮಯ್ಯ– ವಿಚಾರ......!!?

ಲಿಲ್ಲಿ ಧ್ವನಿ– ಹೌದು ಸಾರ್ ಆ ಸಮಯಕ್ಕೆ ಸರಿಯಾಗಿ ಡ್ರೈವರ್ ರಂಗ ಬರದಿದ್ರೆ, ನನ್ನ ಜೀವನಾನೆ ಹಾಳು ಮಾಡ್ಬಿಡ್ತಿದ್ದ ಆ ಚಂಡಾಲ. ಸಾರ್, ಖರೆ ಹೇಳ್ಬೇಕಂದ್ರೆ ಆ ಭೋಜರಾಜ ಮನುಷ್ಯನಲ್ಲ, ಪಶು ಯಜಮಾನ್ರೆ ಪಶು.

ಧರ್ಮಯ್ಯ– (ಆವೇಶದಿಂದ) ಹೌದಮ್ಮಾ ಇವರು ಮನುಷ್ಯರಲ್ಲ, ಪಶುಗಳು.

ಭೋಜರಾಜ– ಯಾರು ಪಶುಗಳು?

ಧರ್ಮಯ್ಯ– ಅಸಹಾಯಕ ಹೆಣ್ಣಿನ ಜೀವನಾನ ಹಾಳ್ಮಾಡಿದವರು. ಸುವಾಸನೆ ಕೊಡೋ ಹೂವೊಂದು ಗಿಡದಲ್ಲಿ ಅರಳಿದ್ರೆ ನೋಡೋರ ಭಾವನೆ

ಹಲವಾರು ತರವಿರುತ್ತೆ. ವಿಚಾರವಾದಿಯೊಬ್ಬ ಆ ಹೂವನ್ನು ಗಿಡದಲ್ಲೇ ನೋಡಿ ಕಣ್ಣುಗಳಿಗೆ ತೃಪ್ತಿ ಪಡಿಸಿದ್ರೆ ಬುದ್ಧಿವಂತನೊಬ್ಬ ಅರಳಿರೋ ಹೂವು ನೆಲಕ್ಕೆ ಬೀಳ್ಬಾರ್ದು, ಅದರ ಸೌಂದರ್ಯ ಸದುಪಯೋಗವಾಗ್ಲಿ ಅಂತ. ದೇವರಡಿಗೋ ಇಲ್ಲಾ ತನ್ನ ಅತಿ ಪ್ರೀತಿಯ (ಹೆಣ್ಣಿನ) ಮುಡಿಗೋ ಸೇರಿಸಿ ಸಂತೋಷಪಡ್ತಾನೆ. ಇಂಥಾ ಗುಣವಿದ್ದವರ ಕಣ್ಣಿಗೆ ಬಿದ್ದಾಗ ಮಾತ್ರ ಆ ಹೂವು ತನ್ನ ಬೆಲೆಯನ್ನು ಉಳಿಸಿಕೊಂಡು, ಅವರ ಪ್ರೀತಿಯ ಒಲೆಯಲ್ಲಿ ನೆಲೆಯಾಗುತ್ತದೆ. ಆದರೆ, ಕುದುರೆಯಂತೆ ಕಾಣುವ ಕತ್ತೆಯನ್ನೇ ಬಳಸಿಕೊಂಡು ಸವಾರಿ ಮಾಡುವ ಕೆಲ ಅಯೋಗ್ಯರ ಹಾವಳಿ ಇವತ್ತಿನ ಸಮಾಜದಲ್ಲಿ ಅತಿಯಾಗಿಬಿಟ್ಟಿದೆ. ಇವ್ರಿಗೆ ಕುದುರೆಯಾದ್ರೇನು, ಕತ್ತೆಯಾದ್ರೇನು ಒಟ್ಟು ಸವಾರಿ ಮಾಡ್ಬೇಕನ್ನೋ ಹುಚ್ಚು ತುಂಬಿರುತ್ತದೆ. ಇಂಥಾ ಬುದ್ಧಿಗೇಡಿಗಳ ಕಣ್ಣಿಗೇನಾದ್ರೂ ಆ ಸುಂದರವಾದ ಹೂ ಕಂಡ್ರೆ, ಅದರ ಕಥೆ ಮುಗಿದಂತೆಯೇ ಸರಿ. ಸ್ವಲ್ಪವೂ ಕನಿಕರವಿಲ್ಲದೆ. ಒಂದೊಂದೇ ಪಕಳೆಗಳನ್ನು ಕಿತ್ತು ನೆಲಕ್ಕೆ ಚೆಲ್ಲಿ ಬಿಡ್ತಾರೆ. ಅದರ ಅಂದವನ್ನು ಕಣ್ಣಲ್ಲಿ ಸೆರೆ ಹಿಡಿಯೋ ಬುದ್ಧಿಯಾಗಲೀ, ಸುವಾಸನೆ ಸವಿಯೋ ವಿಚಾರವಾಗಲೀ ಈ ಮೂರ್ಖರಿಗೆ ಬರೋದಿಲ್ಲ. ಇಂಥವರನ್ನು ಬಗ್ಗು ಬಡಿಯಲು ಸಮಯ ಕೂಡಿ ಬರ್ಬೇಕು. ಅಲ್ಲೀವರಿಗೂ ಯಾರಪ್ಪನಿಗೂ ಈ ಮುಂಡೇ ಮಕ್ಳು ಬಗ್ಗೋದಿಲ್ಲ. ಬರ್ತೀನಿ.

(ಹೋಗುವನು)

ಮೂರ್ತಿ— ಹೊಗ್ಗೊ ಇವನೌನ. ದುಡ್ಕೊಟ್ಟು ಗುದ್ದಿಸಿಕೊಂಡಂಗಾತು ನಮ್ಮ ಬಾಳೇವು. ಮಾರಾಯ ಮಾತಿಗೆ ನಿಂತವನು ನಮಗಸ್ಬೈತ ಮಾತಾಡಾಕ ಗ್ಯಾಪ್ ಕೊಡ್ಲಿಲ್ಲ. ಹಂಗ ಮಾತಾಡಿದ. ಮತ್ತದ್ರಾಗ, "ಯಾರಪ್ಪಂಗೂ ಬಗ್ಗಾದಿಲ್ಲ ಮುಂಡೇ ಮಕ್ಳು" ಅನ್ನೋ ಸಸ್ಪೆನ್ಸ್ ಇಟ್ಟು, ನಿದ್ದಿಗಣ್ಣಾಗ ಸೈತ ಮುಟ್ಟಿ ನೋಡಿಕೊಂಡಿರ್ಬೇಕು ಅಂತ ಗೂಟನ ಜಡ್ದು ಹೋದ, ಇಷ್ಟೇನು ರಂಗ್ಯಾಗಂದ್ನೋ? ನಿಮಗಂದ್ನೋ?... ನಿಮ್ಮಿಬ್ರನ್ನೂ ಬಿಟ್ಟು ನನಗ ಅಂದ್ನೋದ್ನೋ? ಒಟ್ಟು ತಿಳಿದಂಗಾತಿದು. (ಭೋಜರಾಜನಿಗೆ) ಅಲ್ಲಾ ನೀವು ಗೇನರ ಈ ಸಸ್ಪೆನ್ಸ್ ನ ಅರ್ಥ ತಿಳಿತೇನು?

ಭೋಜರಾಜ— ಮೂರ್ತೆಣ್ಣಾ ನೀ ನನಗ ಕಾರಕೂನಾಗಿರೋದಷ್ಟ



ವಿಚಾರ ಮಾಡು. ಆದ್ರ ಒಮ್ಮಿಗೆ ನಮ್ಮ ರಹಸ್ಯದ ಮೂಲ ಬೇರಿಗೆ ಕೈ ಹಾಕಾಕ ಹೋಗ್ಬೇಡ. ತಿಳಿತಿಲ್ಲೋ? ನಡಿ ಮನಿಗೆ (ಹೋಗುವನು)

ಮೂರ್ತಿ– ಹುಚ್ಚರ ಸಂತ್ಯಾಗ್ನಿಂತು ಹೊಯ್ಕೊಳ್ಳುವಂಗಾತಿದು. ಆ ಧರ್ಮಯ್ಯ ಒಂದ ನಮೂನಿ ಮಾತಾಡಿ ಸಸ್ಪೆನ್ಸ್ ಗೂಟ ಜಡದಿದ್ದ. ಈಗಿವ ನೊಂದು ನಮೂನಿ ಮಾತಾಡಿ ದೊಡ್ಡ ಗೂಟನ ಜಡ್ದು ಹೋದ. ಇನ್ನು ಮನಿ ಮುಟ್ಟೋದ್ರಾಗ ಯಾರ್‍ಯಾರು ವಿಸೇಸು ಗೂಟ ಒಡಿತಾರೋ ಯಾರಿಗ್ಗೊತ್ತು. (ಹೋಗುವಾಗ ನಿಂತು) ಬಂದ್ಲಲ್ಲಾ ನನ್ನ ಕನಸಿನರಾಣಿ ಟೈಪಿಸ್ಟ್ ಲಿಲ್ಲಿ. (ಲಿಲ್ಲಿ ಬರುವಳು) ಬಾ ಹೃದಯೇಶ್ವರಿ, ಎಲ್ಲವೂ ಕುಶಲವೆ?

ಲಿಲ್ಲಿ– ಹಂದಿಗಳಿದ್ದ ಹಾಳೂರನ್ನೆ ಬಿಟು ಬಂದ್ಮೇಲೆ ಕುಶಲವಾಗಿದ್ದೇನೆ ಮುಷ್ಕೇಶ್ವರ.

ಮೂರ್ತಿ– ತಗಾ. ಇಕಿನೂ ನನಗ ಜಡದ್ಲು. ಅಂದ್ರ.... ನಾನು ಹಂದಿ ಜಾತಿಯವನ?

ಲಿಲ್ಲಿ– ಅದಕ್ಕಿಂತ ಕಡಿ, ಆ ಹಂದಿಗೆ ಜೀವಿದ್ರೂ ಬೆಲಿ ಐತಿ, ಸತ್ರೂ ಬೆಲಿ ಐತಿ. ಅದರ್ಮ್ಯಾಂದ ನಿನ್ನ ಗ್ರೇಡ್ ಪೂರಾ ಡೌನ್.

ಮೂರ್ತಿ– ನನ್ನೆದಕ್ಕರ ಹೋಲ್ಸೋ ವಿಚಾರ್‍ಯಾತಿ ನಿನಗ?

ಲಿಲ್ಲಿ– ಇನ್ನೆದಕ್ಕ ಹಂದಿ ತಿನ್ನುತ್ತಲ್ಲ...

ಮೂರ್ತಿ– ಸ್ಟಾಪ್, ಮುಂದಿಂದು ನೀಯೇನು ಬಿಡಿಸಿ ಹೇಳ್ಬ್ಯಾಡ. ನಾ ಶ್ಯಾಣ್ಯ ಅದೇನಿ. ತಿಳ್ಕೋತೀನಿ.

ಲಿಲ್ಲಿ– ತಿಳ್ಕೊಂಡಿಲ್ಲೊ, ದಾರಿ ಬಿಡಂಗಾರ

ಮೂರ್ತಿ– ಹೋಗುವಂತಿ ತಡಿ. ಯಾಕಷ್ಟರ ಮಾಡ್ತಿ. ನಿನ್ನ ಸಲುವಾಗಿ ತಲಿ ಕೆಡಿಸಿಕೊಂಡಿರೋ ಈ ಪ್ರಿಯಕರನ ಮುಂದೆ, ನಿನ್ನ ಮಾತಿನ ಮುತ್ತು ಸುರಿಸಿ ಹೋಗಬಾರದೆ ಪ್ರಿಯೆ ?

ಲಿಲ್ಲಿ– ನನ್ನ ಸಲುವಾಗಿ ತಲಿ ಕೆಡಿಸಿಕೊಳ್ಳಾಕ ನಿನಗ್ಯಾರ್ಹೇಳಿದ್ರು.

ಮೂರ್ತಿ– ವಯಸ್ಸು

ಲಿಲ್ಲಿ– ಯಾರಿಗೂ ಇಲ್ಲದ ವಯಸ್ಸು ನಿನಗ ಐತೆನು ?

ಮೂರ್ತಿ– ಮತ್ತೊಬ್ಬರ ವಯಸ್ಸು ತಗೊಂಡು ನಾಯೇನ್ಮಾಡ್ಲಿ

ಸಧ್ಯ ನಾ ವಯಸ್ಸಿಗೆ ಬಂದೇನಿ. ನನ್ನ ವಯಸ್ಸಿನ ರೂಲ್ಸ್ ಪ್ರಕಾರ ಹ್ವಂಟೇನಿ. ತೀರಾ ಒತ್ರಕ್ಕ ಬಂದ ಮನುಷಾ ನಾನು. ಆದ್ರೂ ಕಂಟ್ರೋಲ್ ಕೆಪ್ಯಾಸಿಟಿ ಐತಿ ಅಂತ ಇಲ್ಲೀತನ ತಡಕೊಂಡೀನಿ. ನಿನ್ನ ನೆನಪಾದ್ರ ಸಾಕು, ಹಾಡ್ಹಗಲ ಸೈತ ಕಣ್ಣು ಕಾಣುದಿಲ್ಲ ನನಗ. ಮುನ್ನೆರ ಮುಳ್ಳು ಕಂಟ್ಯಾಗ ಬಿದ್ದು ಮೂರ್ರ್‍ಯಾಸು ಗುದ್ಯಾಡಿ ಹೊರಗ್ಬಂದೀನಿ ಗೊತ್ತೆನು ? ಅದನ್ನ ನೆನಸ್ಕೊಂಡ್ರೆ ಇಲ್ಲೇ ನಿನ್ನ ಗಲ್ಲಕ್ಕೊಂದು ಮುತ್ತು ಕೊಡಬೇಕು ಅನಸುತ್ತ.

ಲಿಲ್ಲಿ– ಛಪ್ಪರೆ ಗಂಡ್ಸ. ನನ್ನ ಗಲ್ಲಕ್ಕ ಮುತ್ತು ಕೊಡ್ತಿಯಾ?

ಮೂರ್ತಿ– ಕೊಡಬೇಕಂತ ವಿಚಾರಿಟ್ಟೇನಿ.

ಲಿಲ್ಲಿ– ಆ ದಮ್ಮ್ಯಾತೆನು ? ಇದ್ರ ಬಾರಲೆ. ಅದ್ಹೆಂಗ ಮುತ್ತು ಕೊಡ್ತಿ ನೋಡೇ ಬಿಡ್ತೀನಿ. (ಬಳೆ ಏರಿಸುವಳು)

ಮೂರ್ತಿ– ಆ... ಬಳಿ ಯಾಕೇರಸ್ತಿ ನೀನು ?

ಲಿಲ್ಲಿ– ಮುತ್ತು ಕೊಡಾಕ ಅನುಕೂಲಾಗ್ಲಿ ಅಂತ.

ಮೂರ್ತಿ– ಅಂದ್ರೆ ನಾ ಕೈಯಿಗೆ ಮುತ್ತು ಕೊಡ್ತೀನಂತ ತಿಳದಿ ಯೇನು ?

ಲಿಲ್ಲಿ– ಹಂಗಲ್ಲ ರಾಜಾ. ನೀ ನನಗ ಮುತ್ತು ಕೊಡ್ತಿ ಅಂದಾಗ ನಾನು ನಿನಗ...

ಮೂರ್ತಿ– ಮುತ್ತು ಕೊಡ್ತಿ ಅಂದಂಗಾತು. ಮತ್ಯಾಕ ತಡ. ಬಾ ಹಂಗಾರ ಮುತ್ತಿನ ಮಳೆ ಸುರಿಸ್ತೀನ (ಲಿಲ್ಲಿಯನ್ನು ಹಿಡಿಯಲು ಹೋದಾಗ ಕಪಾಳಕ್ಕೆ ಹೊಡೆಯುವಳು) ಯೇನಾತೆ ನಿನಗ. ಮುತ್ತು ಕೊಡು ಅಂತ ಕರೆದು, ಕತ್ತಿಗ್ಹೊಡದಂಗ ಹೊಡಿಶಿಯಲ್ಲ.

ಲಿಲ್ಲಿ– ಮತ್ತೇನರ ಮೈಮುಟ್ಟಾಕ ಬಂದ್ರ, ಹೇಡಿಗೆ ಒಡ್ದಂಗ ಬಡೀತಿನಿ. ಏನಂತ ತಿಳದಿ ನನ್ನ ?

ಮೂರ್ತಿ– ಶ್ರೀದೇವಿ ಅಂತ ತಿಳದೇನಿ. ಹಂಗ ನೀನೂ ನನ್ನ ಜಿತೇಂದ್ರ ಅಂತ ತಿಳಿ. ಇಬ್ರೂ ಕೂಡಿ ಬ್ರೇಕ್ ಡ್ಯಾನ್ಸ್ ಮಾಡಾನ.

ಲಿಲ್ಲಿ– ನೀ ಜಿತೇಂದ್ರಿದ್ದಂಗದಿಯಾ? ಒಮ್ಮೆರ ನಿನ್ನ ಅಪರೂಪದ ಮುಸುಡಿ ನೋಡ್ಕೊಂಡಿಯೇನು?

ಮೂರ್ತಿ– ರಗಡ ಸಲ ನೋಡ್ಕೊಂಡೀನಿ. ಜಿತೇಂದ್ರನ ತದ್ರೂಪನೆ ಐತಿ ನನ್ನ ಫಿಗರ್. ಮತ್ತ ನಿನಗೇನರ ರಾಜ್‌ಕುಮಾರ ಇಲ್ಲಾ ಕಮಲಹಾಸನ್ ಕಂಡಂಗ ಕಾಣ್ತೇವೇನು ?

ಲಿಲ್ಲಿ– ಇಲ್ಲ ನಮ್ಮಪ್ಪನಪ್ಪ ಅಂದ್ರ ನಮ್ಮಜ್ಜನಂಗ ಕಾಣ್ತಿ.

ಮೂರ್ತಿ– ನಿಮ್ಮಜ್ಜನಂಗ?... ಕಳ್ಳಿ, ನಕಲಿ ಮಾಡ್ತಿಯೇನು? ಪ್ರೀತಿ ಉಕ್ಕಿ ಬಂದಾಗ, ಪ್ರೀತಿ ವಸ್ತುವಿನ ಗತಿ ಇದ ಅನ್ನಾದು ನನಗೊತ್ತು. ಬಾ ಬಾ ಲೈಲಾ ಮಜನೂ ಪಾರ್ಕಿನ್ಯಾಗ ಐಸ್‌ಕ್ರೀಂ ತಿನಕೊಂತ ಮಾತಾಡಾನ.

ಲಿಲ್ಲಿ– ಖಬರ್ದಾರ್. ದೂರ್ನಿಂತು ಮಾತಾಡು. ನಿನಕೂಡ ಐಸ್‌ಕ್ರೀಂ ತಿನಕೊಂತ ಮಾತಾಡಾಕ ನಾನಿನ್ನ ಪ್ರೇಯಸಿಯಲ್ಲ, ನೀ ನನ್ನ ಪ್ರಿಯತಮನೂ ಅಲ್ಲ. ನನ್ನ ನಿನ್ನ ನಡುವೆ ಯಾವ ಸಂಬಂಧನೂ ಇಲ್ಲ. ಆದ್ರೂ, ನಮ್ಮಜ್ಜ ನಂಗ ಕಾಣ್ತೀಯಲ್ಲ ಅಂತ ಮರ್ಯಾದಿ ಕೊಟ್ಟೇನಿ, ಸರಳ ದಾರಿ ಬಿಡು.

ಮೂರ್ತಿ– ಬಿಡದಿಲ್ಲ. ಏನೇ ಮಾಡ್ತಿ? ನನ್ನೀ ಫಿಗರ್ ನೋಡಿ ರಗಡು ಹುಡುಗೇರು ತಲಿ ಕೆಡಿಸಿಕೊಂಡು ಕಂಡ ಕಂಡಲ್ಲಿ ತೆಕ್ಕಿ ಬಡಿಯಾಕ ಬರ್ತಾರ. ಅಂಥಾ ಈ ಪುಸ್ತಕವ ಮಾರಿ ನಿನಗ ನಿಮ್ಮಜ್ಜನಂಗ ಕಾಣುತ್ತ? ಅಲ್ಲ ನೀನ್ಯಾ ಕ್ಹಿಂಗ ಮಾತಾಡ್ತಿಯಂತ ನನಗೊತ್ತೈತಿ, ಆ ನನ್ನ ಮಗಾ ರಂಗ್ಯಾ ನಿನ್ನ ತಲಿ ಕೆಡಿಸಿಬಿಟ್ಟಾನ. ಅದಕ ನೀನವನ ಬೆನ್ಹತ್ತಿ ತಿರುಗ್ತೀದಿ. ನೋಡು, ಅವನು ಬಾಳ ಡೇಂಜರ್ ಮನುಷ್ಯಾ ಅದಾನ. ಹೆಣ್ಣು ಸಿಕ್ರ ಹಣ್ಣು ತಿಂದಂಗ ತಿಂದು ಒಗದು ಬಿಡ್ತಾನ. ಸುಮ್ಮನ ಅವನ ಸಲುವಾಗಿ ತಲಿಕೆಡಿಸಿಕೋ ಬ್ಯಾಡ.

ಲಿಲ್ಲಿ– ನಾ ಕೆಡಿಸಿಕೊಂತೀನಿ.

ಮೂರ್ತಿ– ಬ್ಯಾಡೆ ಲಿಲ್ಲಿ.

ಲಿಲ್ಲಿ– ನನಗ್ಬೇಕೋ ಯಜ್ಜಾ

ಮೂರ್ತಿ– ನಿನ್ನೌನು, ಆಜ್ಜ ಅನಬ್ಯಾಡ, ಜೀತೇಂದ್ರ ರಾಜಾ ಅನು

ಲಿಲ್ಲಿ– (ಬಳೆ, ಸೀರಿ ಏರಿಸುತ್ತಾ) ಬಾ ಹಂಗಾರ, ರಾಜಾ ಮಹಾರಾಜಾ

ಮೂರ್ತಿ– ಬ್ಯಾಡ ನೀ ಬಳಿ ಏರ್‍ಸೋದು, ಸೀರಿ ಏರ್‍ಸೋದು ಮಾಡ್ತಿ ಯಂದಾಗ ನೀನಿಲ್ಲೆ ನಿಂತಿರು, ನಾನು ಮಸಿಗ್ಹೋದವನ ಎಣ್ಣಿ ಹಚ್ಚಿಕೊಂಡು ಹೊಳ್ಳಿ ಬರ್‍ತೀನಿ. (ಹೋಗುವನು)

ಲಿಲ್ಲಿ– ಬಾರೋ ನನ್ನ ಮನ್ಮಥರಾಜಾ, ನೆನಪಿನ ಕಾಣಿಕೆ ಕೊಟ್ಟು ಕಳಿಸ್ತೀನಿ. ಅಯ್ಯೋ ನೀಚ, ನಿನ್ನಯೋಗ್ಯತೆ ನನಗೊತ್ತಿಲ್ಲೇನೋ? ಈ ಊರಿಗೆ ಟೀಚರಾಗಿ ಬಂದಿದ್ದ ನನ್ನ ಗೆಳತಿಗೆ ಮದಿವ್ಯಾಗ್ತಿನಂತ ನಂಬ್ಸಿ, ಶೀಲ ಹಾಳ್ಮಾಡಿ, ಹೊಟ್ಟೆಲಾದಾಗ ಕೈ ಕೊಟ್ಟೆ. ಅಕಿ, ಮಾನಕ್ಕಂಜಿ ಹೊಳಿಗೆ ಬಿದ್ದು ಸತ್ಲು. ಈಗ ನನ್ನ ಬೆನ್ನು ಬಿದ್ದೀದಿ ಅಂದಾಗ. ನಿನಗೊಂದು ಗತಿ ಕಾಣಸದಿದ್ರ ಸತ್ತು ಸ್ವರ್ಗ ಸೇರಿರೊ ನನ್ನ ಗೆಳತಿ ಆತ್ಮಕ್ಕ ಶಾಂತೆರ ಸಿಕ್ಕಿತೇನು? ಹೌದು, ಇವತ್ತು ನನ್ನ ಮನದಿನಿಯನ ದರ್ಶನವೇ ಆಗ್ಲಿಲ್ವಲ್ಲಾ ಮಾತಾಡ್ಸಿದ್ರ ಸಿಡ್ಡು ಬೀಳ್ತಾನ. ಅದಕ ನೋಡೆರ ತೃಪ್ತಿ ಪಡಬೇಕಾಗೇತಿ ರಂಗು, ಆಯ್ ಲವ್ ಯು, ಆಯ್ ಲವ್ ಯು ಟು ಮಚ್!!

(ಹೋಗುವಳು, ವಿಶಾಲ ಬರುವಳು)

ವಿಶಾಲ– ಹೆತ್ತವರ ಹೆಸರಿಗೆ ಕಳಂಕದ ಕಳಸವಿಟ್ಟ ಕುಲಹೀನೆ ನಾನು. ನನಗಾದ ಅನ್ಯಾಯವನ್ನು ಕೇಳಿ, ನನ್ನ ತಂದೆ ಎದೆಒಡೆದು ಸತ್ತ. ನಾ ಮಾಡಿದ ಪಾಪ. ನಿರಪರಾಧಿ ನನ್ನ ತಂದೆಗೆ ಶಾಪವಾಯಿತು. ಮದುವೆಗೆ ಮುಂಚೇನೆ ಗರ್ಭ ಹೊತ್ತಿರುವ ನಾನು, ತಂದೆಯ ಸಾವಿನ ನೋವನ್ನು ಸಹಿಸಿಕೊಳ್ಳಲೇ? ಮುಂದಿನ ಭವಿಷ್ಯದ ಬಗ್ಗೆ ಆಲೋಚಿಸಲೇ? ಇಲ್ಲಾ, ಮಾನಕ್ಕಂಜಿ ಆತ್ಮಹತ್ಯೆ ಮಾಡಿಕೊಳ್ಳಲೆ? (ವಿಚಾರಿಸಿ) ಛೇ ಛೇ, ಕಳಂಕದ ಅಪವಾದ ಹೊತ್ತು ಸಾಯುವುದಕ್ಕಿಂತ, ಶೀಲ ಹಾಳು ಮಾಡಿದವನ ಕಾಲು ಹಿಡಿದಾದಗೂ ಬಾಳು ಕೊಡೆಂದು ಕೇಳುವುದು ಲೇಸು, ಹೌದು, ಈಗದೇ ನನಗುಳಿದಿರುವ ಮಾರ್ಗ.

(ಹೋಗುವಳು)

## ನಾಲ್ಕನೆಯ ದೃಶ್ಯ

## ವನಜಾಳ ಭವ್ಯ ಬಂಗಲೆ

(ರಂಗ ಹೊರಗಿನಿಂದ ಪ್ರವೇಶ ಮಾಡಿ, ಒಳಗಡೆ ಹೋಗಿ ಬಂದು)

ರಂಗ– ಥತ್ ಹಲ್ಕಾ ನನ್ನ ಮಕ್ಳು, ವನಜಮ್ಮ ಊರಲ್ಲಿಲ್ಲ. ಜವಾಬ್ದಾರಿ ಮನುಷ್ಯಾರು ಇನ್ನೂ ಬೇಜವಾಬ್ದಾರಿ ಸಿದ್ದಿ ಮಾಡ್ತಾರ. ಅವ್ಯಾವ್ರ ಫೋನ್ ನಂಬರ್ ತಿಳದಿದ್ರ ಇವರ ಹಕೀಕತ್ತರ ತಿಳ್ಳಾಕ ಬರ್‍ತಿತ್ತು. (ಕುಳಿತು ಫೋನ್ ಕೈಗೆತ್ತಿಕೊಳ್ಳುವನು) ಡಾರ್ಲಿಂಗ್ ಆರಾಮಾದಿಯಾ? ಅಂದಂಗ ಆ ಡಿಸ್ಕೋ ಶಾಂತಿ, ಅನುರಾಧ, ನಿನ್ನಮ್ಯಾಲೆ ಬಟ್ಟೆ ಅಂಗಡಿಯವರು ಕೇಸ್ ಹಾಕಿದ್ರಂತಲ್ಲ ಏನಾತದು? ಆ...ಆಆ... ಹೌದಾ? ಹಂಗಾರೆ, ನಾಳೆ ನೀವು ಮೂವರೂ ನನ್ನಾಫೀಸಿಗೆ ಬರ್‍ರಿ. ಒಂದು ಗುಡ್ ನ್ಯೂಸ್ ಹೇಳ್ತೀನಿ.

ಭೋಜರಾಜ– (ಒಳಗಿನಿಂದ ನೈಟ್ ಡ್ರೆಸ್ನಲ್ಲಿ ಬಂದು) ರಂಗಾ...

ರಂಗ– ಯಾರವನು? ಸಧ್ಯ ನನಗ ಪುರುಸೊತ್ತಿಲ್ಲ. ಒಂದು ವಾರ ತಡದು ಬರ್‍ರಿ ಮಗನ. ನಿನಗಲ್ಲ ಡಾರ್ಲಿಂಗ್ ನಾ ಅಂದಿದ್ದು. ಇಲ್ಯಾವನೋ ಬೇವರ್ಸಿ ನನ ಮಗ ಬಂದಿದ್ದ ಅವನಿಗಂದೆ. ಏನು...? ಗುಡ್‌ನ್ಯೂಸಿನ ವಿಷಯಾನ? ಅಂದ್ರ, ಸಧ್ಯ ನಾನೊಂದು ರೆಡಿಮೇಡ್ ಬಟ್ಟೆ ಅಂಗಡಿ ತಗಿಯೋ ವಿಚಾರ ಮಾಡೇನಿ. ಅದರಾಗ ನಿಮ್ಮಕಿತಿ ಡ್ರೆಸ್ ನೈತ ರೆಡಿ ಇಟ್ಟಿರ್ತೀನಿ.

ಭೋಜರಾಜ– ಲೇ ರಂಗಾ...

ರಂಗ– ಸುಮ್ನ ನಿಂದರ್‍ರಿ ಯಾಕ ಕಾಡ್ತೀರಿ? ಹಲೋ... ಏನಂದಿ? ಅಳತೆ ಕಳಿಸ್ತಿಯಾ? ಮತ್ಯಾಕ ಅಳತೆ ಕಳಸ್ತೀರಿ ನಿಮ್ಮೆಲ್ಲರ ಅಳತಿನೂ ನನಗ ಪಕ್ಕಾ ಗೊತ್ತೈತಿ. ಸಧ್ಯ ನ್ಯೂ ಟೈಪ್ ಮೂರು ಚಡ್ಡಿ ಕಳಿಸ್ತೀನಿ ಹಾಕ್ಕೊಂಡು ನೋಡ್ರಿ. ರಿಕ್ ಅಂತ ಕುಂತ್ರ ಹೌದು ಅನ್ರಿ ಮತ್ತೇನು?

ಭೋಜರಾಜ– ಈ ಮಗ ಬಾಳ ದೂರದ ವಿಚಾರದಾಗದಾನ. ಅಪ್ಪಾ ಮಹಾನುಭಾವ ರಂಗಸ್ವಾಮಿ..

ರಂಗ– ಇನ್ನ ಮಾರಿ ಕೆತ್ತ್ಯಾವಂಗ ಬಡಿಸಿಕೊಂತಿ ತಮ್ಮ(ಸುಮ್ನನಿಂದ್ರ) ಹಲೋ ಛಿಛೀ ನಿನಗಲ್ಲ ಪ್ರಿಯೆ. ಇಲ್ಲಿ ನನಗೊಬ್ಬಾಂವ ಶನಿಯಾಗಿ ಬೆನ್ನ ಹತ್ಯಾನ ಅವ್ನಿಗೆ. ಹಲೋ... ಚಡ್ಡಿ ಯಾವ ಸಮೂನಿ ಅದಾವಂದೇನು? ಏರ್‌ಕೂಲ್ಡ್ ಚಡ್ಡಿ ಡಾರ್ಲಿಂಗ್ ಎಷ್ಟು ಕುಣಿದ್ರೂ ಒಟ್ಟ ಕಾವಾಗದಿಲ್ಲ. ಗಾಳಿ ಧಾರಾಳವಾಗಿ ನುಗ್ಗತ್ತ.

ಭೋಜರಾಜ– ಭಪ್ಪರೆ ಮಗನೆ ಏರ್‌ಕೂಲ್ಡ್ ಚಡ್ಡಿ, ಗಾಳಿ ಧಾರಾಳ ವಾಗಿ ನುಗ್ಗತ್ತಂತ. ಅಂದ್ರ ಸೊಳ್ಳಿ ಪರ್‍ದಾಗ ಹೊಲಸ್ತಾನೇನಿ ಚಡ್ಡೀನ? (ಡುಬ್ಬ ಚಪ್ಪರಿಸಿ) ಅವಿವೇಕಿ ಏಳೊ ಮೇಲೆ.

ರಂಗ– ಥೋ ಎಲ್ಲಿಯವನು ಗಂಟು ಬಿದ್ನಪಾ ಅಂತೀನಿ. ಯಾರ್‍ಲೇ ನೀನು?

ಭೋಜರಾಜ– ನಿಮ್ಮಪ್ಪ.

ರಂಗ– ನಮ್ಮಪ್ಪ ಸತ್ತ್ಯಾನ, ನೀನ್ಯಾರೋ ಬೆಪ್ಪ ? (ತಿರುಗಿ ನೋಡಿ) ನೀ... ನೀವೇನು ?

ಭೋಜರಾಜ– ಮಗನ್ನ, ಜಯಮಾಲಿನಿ ನಿನಗ ಫೋನ್ ಮಾಡಿದ್ಲಾ ? ಡಿಸ್ಕೊಶಾಂತಿ. ಅನುರಾಧಾಗೆ ಏರ್‌ಕೂಲ್ಡ್ ಚಡ್ಡಿ ಹೊಲ್ದು ಕೊಡ್ತಿಯಾ ?

ರಂಗ– ಊನ್ರಿ. ಬೇಕಂದ್ರ ನಿಮಗೂ ಹೊಲ್ದು ಕೊಡ್ತೀನ್ರಿ ಏರ್ ಕಂಡೀಷನ್ ಕಾಚಾನ: ಹೆಂಗೂ ನಿಮ್ಮಳತಿನೂ ನನಗ ಪಕ್ಕಾ ಗೊತ್ತಾಗೇತಿ.

ಭೋಜರಾಜ– ಮುಚ್ಚಾಯಿ. ಎರಡು ದಿನದಾಗ ಬರ್‍ತೀನಂತ ಊರಿ ಗೋದವನು, ನಾಕದಿನಕ್ಕ ಬಂದಿಯಲ್ಲ, ಸಂಬ್ಳೇನು ಪುಗ್ಸೆಟ್ಟಿ ಬರ್‍ತೇನು ?

ರಂಗ– ನಾ ದೌಡ್ಲ ಹ್ವಂಟಿದ್ರಿ.

ಭೋಜರಾಜ– ಯಾರರ ಸತ್ರೇನು ?

ರಂಗ– ಊನ್ರಿ.

ಭೋಜರಾಜ– ಯಾರ ನಿಮ್ಮಜ್ಜಿನ ?

ರಂಗ– ಅಲ್ರಿ. ನಮ್ಮೂರ ಗೌಡ್ರ ಮನಿ ಕ್ವಾಣ.

ಭೋಜರಾಜ– ಗಾಡ್ರ ಮನಿ ಶ್ವಾನ ಸತ್ರ ನಿಂದೇನಲೆ ಕೆಲಸ ?

ರಂಗ– ವಿಚಾರಿಲ್ಲ್ದಂಗ ಮಾತಾಡ್ತೀರಲ್ಲ ನೀವು. ನಮ್ಗೂ್ರಾಗಿದ್ದುದು ಅದ ಒಂದ ಶ್ವಾನ. ಸುತ್ತು ಹಳ್ಳ್ಯಾಗ ಮತ್ತೊಂದಿಲ್ಲ. ಅಂದಾಗ ಆ ಶ್ವಾನ ಸತ್ತಿಂವ ಮುಂದ ನಮ್ಗೂ್ರ ಎವ್ಮ್ಯಾಗಳ ಗತಿ ಏನಾಗಿರಬ್ಯಾಡ. ನೀವ ವಿಚಾರ ಮಾಡ್ರಿ.

ಭೋಜರಾಜ– ಎಷ್ಟು ದೂರ ವಿಚಾರ ಮಾಡಿಯಲ್ಲಲೇ ಮಗನ ?

ರಂಗ– ಹೌದ್ರಿ. ಮನುಷಾರಾದ್ರ ನಮಗಿಂತಾದು ಹರಕ್ಕತ್ತಾಗೇತಂತ ಬಾಯ್ಬಿಟ್ಟು ಹೇಳ್ತಾರೆ. ಪಾಪ! ಮೂಕ ಪ್ರಾಣಿಗಳು ನಮಗಿಂತ ತ್ರಾಸಾಗೇತಂತ ಹೆಂಗ್ಹೇಳ್ತಾವ್ರಿ

ಭೋಜರಾಜ– ಒಟ್ಟೀಗ ಶ್ವಾನನ ವ್ಯವಸ್ಥೆ ಮಾಡೇ ಬಂದಿ ?

ರಂಗ– ಊನ್ರಿ. ಮತ್ತ ನಿಮಗೇನರ ಬೇಕಾಗೇತೇನ್ರಿ ಶ್ವಾನ ?

ಭೋಜರಾಜ– ನನಗೆದಕೋಲೆ ?

ರಂಗ– ಅದೂ ಖರೇನ. ನೀವ್ನ ಒಂದ ಶ್ವಾನದಂಗದೀರಿ.

ಭೋಜರಾಜ– ಏನಂದೇ... ?

ರಂಗ– ಆ ಟೈಪಿಸ್ಟ್ ಲಿಲ್ಲಿಗೇನೋ ಮಾಡಾಕ ಹೋಗಿದ್ರೆಲ್ಲಾ ಅಂದೆ.

ಭೋಜರಾಜ– ರಂಗಣ್ಣಾ, ಈ ತಿಂಗ್ಳು ನೂರು ರೂಪಾಯಿ ಜಾಸ್ತಿ ಹಾಕತ್ತೀನಿ ನಿನ್ನ ಸಂಬ್ಳಾನ. ಆದ್ರೀ ವಿಷಯ ಮಾತ್ರ ಎಲ್ಲೂ ಬಾಯ್ಬಿಡ್ಬೇಡ. ಅಂತೂವಿಕ್ಕಿ ಬಾಯ್ಬಿಟ್ಟೀ, ನಿನ್ನ ಜೀವಂತ ಸುಡುಸಿ ಬಿಡ್ತೀನಿ.

(ಒಳಗಿನಿಂದ ನೈಟ್ ಡ್ರೆಸ್‌ನಲ್ಲಿ ವಿಕ್ರಂ ಬರುವನು)

ವಿಕ್ರಂ– ಗುಡ್ ಮಾರ್ನಿಂಗ್ ಡ್ಯಾಡಿ!

ಭೋಜರಾಜ– ವೆರಿ ಗುಡ್ ಮಾರ್ನಿಂಗ್ ಮೈ ಸನ್!! ನಿದ್ದಿ ಆರಾಮ ಹತ್ತಿಲಿಲ್ಲ ?

ರಂಗ– ಆಗ್ದೆ ಏನ್ಮಾಡುತ್ತಿ? ಇವರೇನು ನಿಮ್ಮಂಗ ವಯಸ್ಸು ಹೋದ ಹಳೆ!

ವಿಕ್ರಂ– ನಮ್ಮ ಡ್ಯಾಡಿಗೇನು ಮಹಾ ವಯಸ್ಸಾಗಿದೆಯೋ? ವ್ಯವಹಾರದ ಒತ್ತಡ ಜಾಸ್ತಿಯಾಗಿ ಹಂಗ ಕಾಣ್ತಾರಷ್ಟೆ. ಇನ್ನೂ ಇಪ್ಪತ್ತು ವರ್ಷ ವಯಸ್ಸಿನ ಹುಡುಗ್ರಿಗೆ ಛಾಲೇಂಜ್ ಮಾಡ್ತಾರೆ, ನಮ್ಮ ಡ್ಯಾಡಿ.

ಭೋಜರಾಜ– ಈ ಮಗನಿಗೇನು ಗೊತ್ತು. ನನ್ನ ದೇಹದಲ್ಲಿನ್ನೂ ಯುವಕ ರಕ್ತ ಹರಿದಾಡ್ತಿದೆ ಅಂತ.

ರಂಗ– ಯಾಕ ಗೊತ್ತಿಲ್ರಿ. ಎಲ್ಲಾ ಗೊತ್ತೈತಿ. ಅದಾಳಲ್ಲ ಆ ರಂಡ ಮುಂಡಿ ಬಸಜ್ಜಿ, ನಿಮ ಹರೇವೆಷ್ಟೈತಿ ಅನ್ನಾದಲ್ಲ ನನ್ಮುಂದ ಹೇಳ್ತಾಳ.

ಭೋಜರಾಜ– ಅಪ್ಪಾ ಮಹಾನುಭಾವ. ಮೊದಲಿಲ್ಲಿಂದ ದಯ ಮಾಡ್ಸು.

ರಂಗ– ಹೋಕ್ತಾನಿ ಬಿಡ್ರಿ; ನೀವೆಷ್ಟು ಸಿಟ್ಟಿಗ್ಬರ್ತೀರಿ. (ಹೋಗುವನು)

ಭೋಜರಾಜ– ಬಾ ವಿಕ್ರಂ ಮೊದಲು ಸ್ವಲ್ಪ ಡ್ರಿಂಕ್ಸ್ ಮಾಡೋಣ, ನಂತರ ಮುಂದಿನ ವಿಚಾರ.

ವಿಕ್ರಂ– ಕಮಾನ್ ಡ್ಯಾಡಿ. ನಿಮ್ಮ ಕಂಪನಿ ಇಲ್ದೆ ಬಹಳ ದಿವಸಾಯ್ತು. ಆದ್ರೆ...

ಭೋಜರಾಜ– ಆದ್ರೇನೋ?

ವಿಕ್ರಂ– ವನಜಾ ಊರಲ್ಲಿಲ್ಲ. ಅವಳು ಬಂದ್ರೆ ನಮ್ಮೆಲ್ಲಾ ಚಟಕ್ಕೂ ಕತ್ರಿ ಹಾಕ್ತಾಳೆ ಕಾರಣ, ಇವತ್ತೊಂದಿನಾ

ಭೋಜರಾಜ– ವಿಕ್ರಂ. ನಾನು ನಿಮ್ಮಪ್ಪ. ನಿನ್ನವಶ್ಯಕತೆ ಏನನ್ನೋದು ನನಗೊತ್ತಿದೆ. ಬಾ ಕೂತ್ಕೋ...ವೀಣಾ..., ಕಮಾನ್ ಕ್ವಿಕ್! (ಇಬ್ಬರೂ ಕುಡಿಯುತ್ತಿರುವಾಗ ಡ್ಯಾನ್ಸ್ ನಡೆಯುವುದು, ನಂತರ) ಡಿಯರ್ ಸನ್, ನೀನು ನನ್ಮಗ. ಆದ್ರೂ ಸ್ನೇಹಿತನಿದ್ದಂತೆ. ನನ್ನ ಹತ್ರ ಯಾವ ಸಂಕೋಚನೂ ಇಟ್ಕೊಬೇಡ.

ವಿಕ್ರಂ– ನಾನ್ಯಾಕ ಸಂಕೋಚ ಪಡ್ತೀನಿ ಡ್ಯಾಡಿ? ನೀವೇ ನನಗೆ ಉಪದೇಶ ಮಾಡಿಲ್ವೆ? ನಾವಿಬ್ರೂ ತಂದೆ ಮಗನಾದ್ರೂ, ಮನಸ್ಸಿಗೆ ಹಿತ, ದೇಹಕ್ಕೆ ಸುಖ ಕೊಡೋ ವಸ್ತುವನ್ನು, ಸ್ನೇಹಿತರಂತೆ ಹಂಚಿಕೊಂಡು ಖುಷಿ ಪಡೋಣ

ಅಂತ. ಮಾಡಿದ ಉಪದೇಶದಂತೆ, ಅಂದು ನಾನು ಧರ್ಮಯ್ಯನ ಮಗಳನ್ನು ಬಲತ್ಕಾರ ಮಾಡಿದಾಗ, ನೀವೂ ಒತ್ತಾಯಿಸಿ ಸುಖ ಪಡಲಿಲ್ಲವೆ?

ಭೋಜರಾಜ– ನಿಜ ವಿಕ್ರಂ. ಆ ಹೆಣ್ಣಿನ ಸಹವಾಸ ಅದೆಷ್ಟು ಸುಖ, ಅದೆಷ್ಟು ಹಿತವಿತ್ತು. ಮತ್ತೊಮ್ಮೆ ಅನುಭವಿಸಬೇಕೆನ್ನುವುದ್ರಲ್ಲಿ ಮ್ಯಾನಕ್ಕಂಜಿ ಪ್ರಾಣ ಬಿಟ್ಟು ಬಿಟ್ಲು ಪಾಪ.

"ವಿಕ್ರಂ– ಆ ವಿಚಾರ ಹೋಗ್ಲಿ ಬಿಡಿ. ಬಹಳ ದಿನದಿಂದ ನಿಮಗೊಂದು ಪ್ರಶ್ನೆ ಕೇಳ್ಬೇಕೂ ಅಂತಿದ್ದೆ. ಇವತ್ತು ಕೇಳ್ತೀನಿ ಉತ್ತರ ಕೊಡ್ತೀರಾ ಡ್ಯಾಡಿ?

ಭೋಜರಾಜ– ಯಾವ ಪ್ರಶ್ನೆ ಕೇಳು ಇವತ್ತೆಲ್ಲಾ ಹೇಳ್ಬಿಡ್ತೀನಿ.

ವಿಕ್ರಂ– ನೀವು ಅತ್ತೆ, ಮಾವನನ್ನು ಕೊಲೆ ಮಾಡಿದ್ದು ಈ ಸಮಸ್ತ ಆಸ್ತಿಯನ್ನು ದಕ್ಕಿಸಿಕೊಳ್ಳುವುದಕ್ಕಲ್ಲವೇ?

ಭೋಜರಾಜ– ಯಸ್ ಮೈ ಸನ್, ಯಸ್!

ವಿಕ್ರಂ– ಆದರೆ, ಈ ಆಸ್ತಿಯೆಲ್ಲ ವನಜಾಳ ಹೆಸರಿಗಿದೆಯಲ್ಲ ಡ್ಯಾಡಿ?

ಭೋಜರಾಜ– ಸರಿಯಾದ ಪ್ರಶ್ನೇನೆ ಕೇಳಿದೆ. ನೋಡು ವಿಕ್ರಂ, ನಾನೇ ಬುದ್ಧಿವಂತ ಅಂದ್ರೆ, ವನಜಾಳ ತಂದೆ ನನಗಿಂತಲೂ ಮಹಾ ಬುದ್ಧಿವಂತ. "ನನ್ನ ಮಗಳು ಮೇಜಾರ್ಟಿಗೆ ಬಂದ ನಂತರ ಈ ಆಸ್ತಿಯನ್ನು ತನ್ನಿಚ್ಛೆ ಬಂದಂತೆ ಬಳಸಬಹುದು. ವಿಧಿವಶಾತ್ ಮೇಜಾರ್ಟಿಗೆ ಬರುವ ಮುಂಚೆ, ಅಥವಾ ಮದುವೆಗಿಂತ ಮುಂಚೇನೆ ಸತ್ತರೆ, ಈ ಆಸ್ತಿಯಲ್ಲಾ ಮಿಲ್ಲಿನ ಕಾರ್ಮಿಕರಿಗೆ ಹಂಚಿ ಹೋಗತಕ್ಕದ್ದು" ಅಂತ ವಿಲ್ ಬರೆದಿಟ್ಟಿದ್ದಾನೆ. ಈ ವಿಚಾರ ತಿಳಿಯದೆ ಅಂದು ವನಜಾಳನ್ನು ಕೊಂದುಬಿಟ್ಟಿದ್ರೆ, ಈ ಬೆಟ್ಟದಂತಾ ಆಸ್ತಿ, ಯಾರ್‍ದ್ದೊ ಸೊತ್ತಾಗಿರ್‍ತಿತ್ತು. ನಾವು ಭಿಕ್ಷೆ ಬೇಡಿ ತಿನ್ಬೇಕಾಗಿರ್‍ತಿತ್ತು. ಕಾರಣ, ಅವಳ ಕೂದಲೆಳೆಗೂ ಕೊಂಕಾಗದಂತೆ, ಇದುವರೆಗೂ ನಾವೇ ಕಾಪಾಡಿಕೊಂಡು ಬಂದಿದ್ದೇನೆ.

ವಿಕ್ರಂ– ಭಲೇ ಡ್ಯಾಡಿ, ನಿಮ್ಮ ಬುದ್ಧಿವಂತಿಕೆಯನ್ನು ಮೆಚ್ಚಬೇಕು.

ಭೋಜರಾಜ– ನನ್ನ ಬುದ್ಧಿವಂತಿಕೆಯನ್ನು ಮೆಚ್ಚುವುದಕ್ಕಿಂತ ಸಧ್ಯ ನಿನ್ನ ಬುದ್ಧಿವಂತಿಕೆಯ ಪ್ರದರ್ಶನವಾಗಬೇಕಾಗಿದೆ.

ವಿಕ್ರಂ– ಅಂದ್ರೆ?

ಭೋಜರಾಜ— ವಿಶಾಲ ಹರಿಯದ ಹಳ್ಳ, ದೇವರೊಬ್ಬ ಪುರಾಹನ ಕಡೆಗೆ ಹರಿಯದಂತೆ, ನಿನ್ನ ಮೋಡಿಯ ಪ್ರೀತಿ ನಿನ್ನ ಕಡೆ ಹರಿಯಬೇಕು. ನಿನ್ನ ಕೈಯಿಂದ ತಾಳಿ ಕಟ್ಟಿಸಿಕೊಂಡ್ರೆ ಸಾಕು. ಈ ಸರ್ವ ಸಂಪತ್ತಿಗೆ ನಾವೇ ಅಧಿಪತಿಗಳಾಗ್ತೀವಿ.

ವಿಕ್ರಂ— ಅವಳ ವಿಷಯ ನನಗ್ಬಿಡಿ, ಊರಿಗೊಂದು ಬಲ್ಲಿ. ಹೆಚ್ಚ ಕತ್ತಿಡುವುದಕ್ಕೂ ನನ್ನಾಜ್ಞೆಗೆ ಎದುರು ಹೋಡ್ಬೇಕು, ಹಾಗ್ಮಾಡ್ತೀನಿ.

ಭೋಜರಾಜ— (ನಗುತ್ತಾ ಭುಜ ತಟ್ಟಿ) ಎಷ್ಟೇ ಆಗಲಿ ನೀನು ನನ್ನ ಮಗನಲ್ಲವೆ?

ವಿಕ್ರಂ— ರಕ್ತದ ಗುಣವೂ ಒಂದೇ ಅಲ್ಲವೇ?

(ಇಬ್ಬರೂ ನಗುತ್ತಿರುವಾಗ ವಿಶಾಲ ಬರುವಳು)

ವಿಶಾಲ— ವಿಕ್ರಂ...

ವಿಕ್ರಂ— ಯಾರು?... ನೀನಾ? ಮತ್ಯಾಕಿಲ್ಲಿಗ್ಬಂದೆ? ಅವತ್ತೇ ನಿನ್ಲೆಕ್ಕ ಚುಕ್ತ ಮಾಡಿ ಬಂದಿದ್ದೇನಲ್ಲ?

ವಿಶಾಲ— ನನಗೆ ತಾಳಿ ಕಟ್ಟುವತನಕ ಲೆಕ್ಕ ಚುಕ್ತವಾಗುವುದಿಲ್ಲ ವಿಕ್ರಂ.

ವಿಕ್ರಂ— ತಾಳಿ ಕಟ್ಟಿಸಿಕೊಳ್ಳುವ ಹುಚ್ಚು ನಿನಗಿನ್ನೂ ಬಿಟ್ಟಿಲ್ಲವೇ?

ವಿಶಾಲ— ಶೀಲ ಕಳೆದುಕೊಂಡ ಹೆಣ್ಣು, ತಾಳಿ ಕಟ್ಟಿಸಿಕೊಳ್ಳಲು ಬಯಸೋದು ಹುಚ್ಚಲ್ಲ ವಿಕ್ರಂ, ಗರತಿಯಾಗಿ ಬಾಳ್ಬೇಕೆನ್ನುವ ಕೆಚ್ಚು.

ವಿಕ್ರಂ— ನಿನ್ನೀ ಹುಚ್ಚು ಕೆಚ್ಚು ನನ್ನನ್ನು ರೊಚ್ಚಿಗೆಬ್ಬಿಸುತ್ತಿದೆ ನೋಡು ಮಾಗಿದ ಹಣ್ಣು ರುಚಿಯಿದೆಯೆಂದು ಅದರ ರಸ ಕೈಗಂಟುವತನಕ ತಿನ್ನುವ ಮೂರ್ಖತನ ಮಾಡುವವನಲ್ಲ ನಾನು. ರುಚಿ ತಿಳಿಯುವುದಕ್ಕೆಷ್ಟು ಬೇಕೋ ಅಷ್ಟ್ಮಾತ್ರ ತಿಂದು ಮಿಕ್ಕಿದ್ದನ್ನ ಬಿಸಾಕಿ ಬಿಡ್ತೀನಿ. ಮತ್ತೆಂದೂ ನಾನದನ್ನು ಚಪ್ಪರಿಸುವುದಿಲ್ಲ. ಇದು ನನ್ನ ಸ್ಪೆಷಾಲಿಟಿ.

ವಿಶಾಲ— ಇದು ನಿಮ್ಮ ಸ್ಪೆಷಾಲಿಟಿ ಇರ್ಬಹುದು. ಆದ್ರೆ, ಬಿದ್ದ ಜಾಗದಲ್ಲಿ ಬಿದ್ದು ಕೊಳೆಯಲು ನಾನು ಮಾರ್ಕೆಟ್‌ನಲ್ಲಿ ಮಾರುವ ಹಣ್ಣಲ್ಲ. ಮೈ ಮನಸ ಕದ್ದವನ ಮಡದಿಯಾಗಿ ಬಾಳಬೇಕೆಂದು ಬಂದಿರುವ ಮಾನವಂತ ಹೆಣ್ಣು.

ವಿಕ್ರಂ– ಮಾನವಂತ ಹೆಣ್ಣು? (ನಗು) ಮದುವೆಗೆ ಮುಂಚೆನೇ ಮಗು ಹೆತ್ತು ಕೊಟ್ಟಿರುವ ನೀನು, ಮಾನವಂತ ಹೆಣ್ಣೆ!

ವಿಶಾಲ– ಅದು ನಿನ್ನ ಪ್ರೀತಿಯ ಫಲ.

ವಿಕ್ರಂ– ನೆವ್ವರ್! ನನ್ನ ಪ್ರೀತಿಯ ಫಲವಲ್ಲ, ನಿನ್ನ ಅನೀತಿಯ ಫಲ! ಹುಚ್ಚು ಯೌವನ ಗಂಡಸಿನ ಸಂಪರ್ಕ ಬಯಸ್ತು. ನಿನ್ನ ಹೆಣ್ತನವನ್ನೇ ಮರೆತು ನನಗೆ ಮೈ ಅರ್ಪಿಸಿದೆ, ಈ ಪಾಪದ ಫಲ ಪಡೆದೆ. ನಿನ್ನೀ ಪಾಪದ ಫಲಕ್ಕೆ ಕರುಣೆ ತೋರಿ ಕೈಲಾದಷ್ಟು ಸಹಾಯ ಮಾಡ್ತೀನೆ ಹೊರತು, ತಾಳಿ ಕಟ್ಟಿ ಬಾಳು ಕೊಡಲಾರೆ.

ವಿಶಾಲ– ದಯವಿಟ್ಟು ಹಾಗನ್ಬೇಡಿ ವಿಕ್ರಂ. ಮೈ ಕದ್ದ ನೀವು ಮಡದಿ ಸ್ಥಾನ ಕೊಡದಿದ್ದರೆ ಖಂಡಿತ ನಾನು ಆತ್ಮಹತ್ಯೆ ಮಾಡಿಕೊಳ್ತೀನಿ.

ಭೋಜರಾಜ– ಮಹಾ ಅನ್ಯಾಯವಿದು. ಮೆಚ್ಚಿದವನನ್ನು ಮದುವೆಯಾಗಲು ಬಂದು, ಆತ್ಮಹತ್ಯೆ ಮಾಡಿಕೊಳ್ಳಲು ನಾನವಕಾಶ ಕೊಡುವುದಿಲ್ಲ.

ವಿಶಾಲ– ನೀವೂ...?

ಭೋಜರಾಜ– ನಿನ್ನ ಪ್ರಿಯಕರನನ್ನು ಈ ಭೂಮಿಗೆ ಪರಿಚಯಿಸಿ ಕೊಟ್ಟವನು. ಅಂದ್ರೆ ಇವನ ತಂದೆ. ಸಧ್ಯ ನಿನ್ನ ಮಾವ.

ವಿಶಾಲ– ಸಾರ್, ನಿಮ್ಮಗನ ಹೆಂಡತಿಯಾಗಿ ಬಾಳೋ ಅವಕಾಶ ಮಾಡಿಕೊಟ್ಟು, ನನಗೆ ನ್ಯಾಯ ದೊರಕಿಸಿಕೊಡಿ, ನಿಮ್ಕಾಲಿಗೆ ಬೀಳ್ತೀನಿ. (ಕಾಲಿಗೆ ಬೀಳುವಳು. ಭೋಜರಾಜ ಎಬ್ಬಿಸುತ್ತಾ)

ಭೋಜರಾಜ– ಹುಚ್ಚಿ! ಏಳಮ್ಮಾ ಏಳು, ನಾನು ನಿಮ್ಮಾವ. ನಿನಗನ್ಯಾಯವಾದ್ರೆ ಸುಮ್ನಿರ್ತೀನೇನಮ್ಮಾ?

ವಿಕ್ರಂ– ಡ್ಯಾಡಿ ನೀವೂ...?!

ಭೋಜರಾಜ– ಮುಚ್ಚು ಬಾಯಿ (ಪಕ್ಕಕ್ಕೆ ಸರಿದು) ಅವಿವೇಕಿ. ಈ ಕೆಂಪು ಗುಲಾಬಿಯಂತ ಹೆಣ್ಣನ್ನು ನನಗೆ ಪರಿಚಯ ಮಾಡಿ ಕೊಡದೆ. ನಿನೊಬ್ಬನೇ ಬಯಕೆ ತೀರಿಸಿಕೊಂಡಿರುವಿಯಲ್ಲಾ. ಬುದ್ಧಿ ಇದೆಯೇನೋ? ಅದೃಷ್ಟವಶಾತ್ ಇವಳು. ತಾನಾಗಿ ಬಲೆಗೆ ಬಿದಿದ್ದಾಳೆಯೋದವಾಗ ಮಾವ [illegible]

ಕೊಳ್ಳೋ ನಾನು ಮಾನವೀಯತೆ ತೋರಿಸ್ದಿದ್ರೆ ತಪ್ಪಾಗೋದಿಲ್ವೇನೊ?... ನೋಡಮ್ಮಾ ನನ್ಮಗ ಮಾಡಿರೋ ತಪ್ಪಿಗೆ ನಾನು ಕ್ಷಮೆ ಕೇಳ್ತೀನಿ.

ವಿಶಾಲ– ಅಂತಾ ದೊಡ್ಮಾತೇಕೆ ಸಾರ್. ನಿಮ್ಮಗ ನನಗ ಬಾಳು ಕೊಟ್ರೆ ಸಾಕು.

ಭೋಜರಾಜ– ಲೋ... ವಿಕ್ರಂ

ವಿಕ್ರಂ– ವಾಟ್ ಡ್ಯಾಡಿ ?

ಭೋಜರಾಜ– ಈ ಹೆಣ್ಣು ನನ್ನ ಸೊಸೆಯಾಗ್ಬೇಕಾದ್ರೆ, ನೀನೇನು ಮಾಡ್ಬೇಕು ಗೊತ್ತೇನು ?

ವಿಕ್ರಂ– ಗೊತ್ತು, ತಾಳಿ ಕಟ್ಟ, ಬಾಳು ಕೊಡ್ಬೇಕು.

ಭೋಜರಾಜ– ಗುಡ್! ಹಾಗಾದ್ರೆ ತಾಳಿ ಕಟ್ತೀನಿ, ಬಾಳು ಕೊಡ್ತೀನಿ ಅಂತ ಈ ಹೆಣ್ಣಿಗೆ ಸ್ಪಷ್ಟವಾಗಿ ಹೇಳಪ್ಪ.

ವಿಕ್ರಂ– ವಿಶಾಲ, ನಾನು ನಿನಗ ದ್ರೋಹ ಮಾಡ್ಬಿಟ್ಟೆ, ದಯವಿಟ್ಟು ಕ್ಷಮಿಸು. ಖಂಡಿತ ನಿನ್ನ ಬಯಕೆಯ ಬಾಳು ಕೊಡಲು ನಾನೀಗ ಸಿದ್ಧನಾಗಿದ್ದೇನೆ.

ವಿಶಾಲ– ನೀವ್ಹೇಳ್ತಿರೋದು ಸತ್ಯ ತಾನೆ ?

ಭೋಜರಾಜ– ಈ ಸತ್ಯವಂತನ ಮಗ ಆವನು. ಅಸತ್ಯವಾಡಿದ್ರೆ ನಾನೊಪ್ತಿನಾ ?

ವಿಶಾಲ– ಸಾರ್, ನನಗೆ ನ್ಯಾಯ ದೊರಕಿಸಿ, ಗರತಿತನ ಉಳಿಯುವಂತೆ ಮಾಡಿದ ದೇವರು ನೀವು.

ಭೋಜರಾಜ– ಅಂದಾಂಗ, ನನಗ ಸಾರ್ ಅನ್ನುವದನ್ನು ಬಿಟ್ಟು, ಮಾವ ಆನಬಾರ್ದೇನಮ್ಮಾ ?

ವಿಶಾಲ– ಮಾವ...

ಭೋಜರಾಜ– ಆಹಾ! ಎಷ್ಟು ಹಿತವಾಗಿ ಕರ್ದೆಯಮ್ಮ ಮನಸ್ಸಿಗೆ ಮತ್ತು ಬಂದಂತಾಯ್ತು. ಆಂ, ಇಲ್ಲಿ ನಡಿಯಮ್ಮ. ನೀನು ಬಳಲಿ ಬಂದಿದಿಯಾ. ಒಳಗ್ಹೋಗಿ ಮುಖ ತೊಳ್ಕೊಂಡು ಬಾ. ಇವತ್ತು ಮೂವರೂ

ಕೂಡೇ ಊಟ ಮಾಡಿ. ಆಮ್ಯಾಲ ಮುಂದಿನ ವಿಚಾರ ಮಾತಾಡ್ಯೋಣ, ಸರಿಯೇನಮ್ಮಾ ?

ವಿಶಾಲ– ಆಗ್ಲಿ ಮಾವಾ (ಒಳಗಡೆ ಹೋಗುವಳು)

ಭೋಜರಾಜ– ಮೈ ಡಿಯರ್ ಸನ್

ವಿಕ್ರಂ– ಡ್ಯಾಡಿ...

ಭೋಜರಾಜ– ಇದು...., ನೀನು ಕಟ್ಟಿದ ಹಣ್ಣಲ್ಲವ ?

ವಿಕ್ರಂ– ಯಸ್ ಡ್ಯಾಡಿ.

ಭೋಜರಾಜ– ಹಣ್ಣು ಸಿಹಿಯೋ; ಕಹಿಯೋ ?

ವಿಕ್ರಂ– ಎರಡೂ ಅಲ್ಲ.

ಭೋಜರಾಜ– ಮತ್ತೆ

ವಿಕ್ರಂ– ಅಮೃತ, ಅಮೃತ ಡ್ಯಾಡಿ.

ಭೋಜರಾಜ– ಹಾಗಾದ್ರೆ...., ನಾನೂ ಸ್ವಲ್ಪ ಅಮೃತ ಕುಡ್ಯ ಬರ್ಲೇನು ?

ವಿಕ್ರಂ ವೈ ನಾಟ್ ? ಧಾರಾಳವಾಗಿ ಕುಡುದ್ಬನ್ನಿ. ಅಲ್ಲಿವರೆಗೂ ನಾನೇ ಅಮೃತ ಕುಡಿತಿರ್ತೀನಿ.

ಭೋಜರಾಜ– ಕುಡಿ, ತೃಪ್ತಿಯಾಗುವಷ್ಟು ಕುಡಿ. ಆದರೆ, ನಾನು ಬರುವತನಕ ಎಚ್ಚರಿಕೆಯಿಂದಿರು. (ಹೋಗುವನು)

ವಿಕ್ರಂ– (ನಗುತ್ತ) ಬಾಳು ಕೇಳಲು ಬಂದ ಹೆಣ್ಣು. ಮತ್ತಷ್ಟು ಧೂಳು ಮುತ್ತಿಸಿಕೊಳ್ತು ತೀರ್ತು. (ಕುಳಿತು ಕುಡಿಯುವಾಗ ಹಿನ್ನೆಲೆ)

ವಿಶಾಲ– (ಒಳಗಿನಿಂದ) ಮಾವ, ಏನೀ ವರ್ತನೆ ? ಬಿಡಿ ನನ್ನ

ಭೋಜರಾಜ– ನನ್ನಾಸೆ ತೀರಿದ್ಮೇಲೆ ಖಂಡಿತ ಬಿಡ್ತೀನಿ.

ವಿಶಾಲ– ಅಮ್ಮಾ... (ಚೀರುವಳು)

(–ಹಿನ್ನೆಲ ಪಾಪ–)

(ಭೋಜರಾಜ, ವಿಕ್ರಂ ಕುಡಿಯುತ್ತಾ ನಿಂತಾಗ, ಕದಲು ಕೆದರಿದ ವಿಶಾಲ ಒಳಗಿನಿಂದ ಬರುವಳು)

ವಿಕ್ರಂ– ವಿಶಾಲ..., ತಾಳಿಕಟ್ಟು, ತಾಳಿಕಟ್ಟು ಅಂತ ಪೀಡಿಸ್ತಿದ್ದೆಯಲ್ಲ, ಈಗ್ಯಾರಿಗೆ ಪೀಡಿಸ್ತೀಯಾ ? ನನಗೋ, ನನ್ನ ತಂದೆಗೋ ? ಈಗ ನಿನಗ ತಾಳೀನ ನಾ ಕಟ್ಬೇಕೋ ? ನನ್ನ ತಂದೆ ಕಟ್ಬೇಕೊ ?

ಭೋಜರಾಜ– ಪಾಪ! ತಾಳಿ ಕಟ್ಟಿಸಿಕೊಳ್ಳೋ ಕನವರಿಗೆ ಬಹಳ ಇದೆ ಇವಳಿಗೆ. ಇಬ್ರೂ ಕೂಡಿ ಎರಡು ತಾಳಿ ಕಟ್ಟೋಣ. ಏನಂತೀಯಾ ?

(ನಗುವರು. ಧರ್ಮಯ್ಯ ಬಂದು ನೋಡಿ ಮರೆಯಾಗುವನು)

ವಿಶಾಲ– ಪಾಪಿಗಳೆ, ನನ್ನಾಳು ಹಾಳ್ಮಾಡಿ, ನಗತೀರಾ ? ನಗಿರಿ, ಚನ್ನಾಗಿ ನಗಿರಿ. ಹಿಂದೂ ಸಂಸ್ಕೃತಿಯಲ್ಲಿ ಹೆಣ್ಣಿಗಿರೋ ಸ್ಥಾನ, ಮಾನ, ಮರ್ಯಾದೆಗಳನ್ನು ಮಣ್ಣಲ್ಲಿ ಮುಚ್ಚಿ, ಆ ಹೆಣ್ಣನ್ನು ಮನ ಬಂದಂತೆ ಬಳಸಿದ ಭಂಡರೇ, ಘನಕಾರ್ಯ ಸಾಧಿಸಿದವರಂತೆ ಕೇಕೆ ಹಾಕಿ ನಗಿರಿ. ಅನಾದಿ ಕಾಲದಿಂದ ದೇವಾನು ದೇವತೆಗಳು, ಋಷಿ ಮಹಾಋಷಿಗಳು "ದೇವತೆ" ಎಂದು ಹಾಡಿ-ಹರಸಿದ ಹೆಣ್ಣನ್ನು ಪಶುವಿನಂತೆ ಹಂಚಿ ತಿಂದ, ಮೂರೂ ಬಿಟ್ಟವರೆ. ಅಬಲೆ ಹೆಣ್ಣಿನ ಮಿಂಡರು ನಾವೆಂದು ಗುಂಡಿಗೆ ಬಡಿ-ಬಡಿದುಕೊಂಡು ನಗಿರಿ. ನೀವು ನಕ್ಕಷ್ಟೂ ನನ್ನ ರಕ್ತ ನೀರಿಗೆ ಬಿದ್ದ ಸುಣ್ಣದಂತೆ ಕುದಿಯುತ್ತಿದೆ. ಮನುಷ್ಯ ರೂಪವಿದ್ದರೂ ಪಶು ಬುದ್ಧಿ ಬೆಳೆದಿರುವ ನಿಮ್ಮ ತಲೆಗಳನ್ನು ಕತ್ತರಿಸದೆ ಬಿಡಲಾರೆ. ಚನ್ನಾಗಿ ನೆನಪಿಟ್ಟುಕೊಳ್ಳಿ. ನಾ ವೇಶ್ಯೆಯಾಗಿ ಬದುಕಿದರೂ ಚಿಂತೆಯಿಲ್ಲ. ನಿಮ್ಮನ್ನು ನಾಶಮಾಡದೆ ಮಾತ್ರ ಸಾಯಲಾರೆ.

ಭೋಜರಾಜ– ಏನಂದೆ, ನೀನು ನಮ್ಮನ್ನು ನಾಶ ಮಾಡ್ತೀಯಾ ? ಅಯ್ಯೋ ಹುಚ್ಚಿ, ದುಡ್ಡಿನ ಕವಚ ನಮಗಿರುವ ತನಕ, ನಮ್ಮನ್ನು ನಾಶ ಮಾಡುವದಕ್ಕೆ ಆ ಈಶನೇ ಬಂದರೂ ವಾಪಾಸಾಗಿಬಿಡುತ್ತಾನೆ. ಅಂದಾಗ, ಸಾಮಾನ್ಯ ಹೆಣ್ಣಾದ ನೀನೇನು ಮಾಡಲು ಸಾಧ್ಯ ? ನಮ್ಮ ದುಡ್ಡಿನ ದರ್ಪಕ್ಕೆ ನಿನ್ನಂತ ಹೆಣ್ಣು ಸರ್ಪಗಳು ಹಲ್ಲು ಕಳೆದುಕೊಂಡು ನಮ್ಮ ಕಾಲಡಿಯ ಕಸವಾಗಲೇ ಬೇಕು.

ವಿಶಾಲ– ಆ ನಿಮ್ಮ ದುಡ್ಡಿನ ಕವಚ ಮಾಡಿದ ಪಾಪಗಳನ್ನು ಮರೆಮಾಚಿದರೂ, ಪ್ರಾಣ ಉಳಿಸಲು ಸಾಧ್ಯವಿಲ್ಲ. ದುಡ್ಡಿನ ದರ್ಪದಲ್ಲಿ ಅತ್ಯಾಚಾರ ಮಾಡಿದರೂ, ಘೋರ ಶಾಪಕ್ಕೆ ತುತ್ತಾಗಿ ಭೂಗತವಾಗುವ ಗ್ರಹಚಾರ

ತಪ್ಪಿದ್ದಲ್ಲ. ದುಡ್ಡು, ದುಡ್ಡಿಂದು ದುಡ್ಡಿನ ಜಿಡ್ಡಂಟಿಸಿಕೊಂಡು ಸೆಡ್ಡೊಡ್ಡುವ ನಿಮ್ಮಂಥಾ ರಾಕ್ಷಸರನ್ನು ಬೆತ್ತಲೆ ಮಾಡಿ ಛೀ, ಥೂ ಎಂದು ಉಗಿಯುವ ಕಾಲವೂ ದೂರಿಲ್ಲ. ತನ್ನ ಹೆಂಡತಿಯನ್ನು ತಂದೆ ಭೋಗಿಸುವುದನ್ನು ಕಂಡರೂ, ತೆಪ್ಪಗಿರುವ ಈ ನಿಮ್ಮ ಮಗ, ತನಗೆ ಜನ್ಮ ಕೊಟ್ಟವಳಿನ್ನುವ ಪರಿಜ್ಞಾನವಿಲ್ಲದೆ ನಿನ್ನ ಹೆಂಡತಿಯನ್ನು ಭೋಗಿಸಿರಬೇಕು.

ಭೋಜರಾಜ– ಬಾಯಿ ಬಿಗಿ ಹಿಡಿದು ಮಾತಾಡು ನೀಚ ಹೆಣ್ಣೆ.

ವಿಶಾಲ– ಮೊದಲು ನಿಮ್ಮ ಬುದ್ಧಿಯನ್ನು ಶುದ್ಧ ಮಾಡಿಕೊಳ್ಳಿ ಭಂಡ ಗಂಡಸರೆ. ತನ್ನ ಹೊಟ್ಟೆಯಿಂದ ಹುಟ್ಟಿದ (ಕರುಳ ಕುಡಿ) ಕರುವಿನಿಂದಲೇ ಗರ್ಭ ಹೊರುವ ಹಸುವಿನ ಸ್ಥಿತಿ ನಿಮ್ಮ ಹೆಂಡತಿಗೂ ಬಂದಿದ್ದರೆ ಆಶ್ಚರ್ಯವೇನಿಲ್ಲ. ಯಾಕಂದ್ರೆ ಪಶುವಿಗಿಂತಲೂ ಮಿಗಿಲಾದ ಹಸಿದ ನಾಯಿಗಳು ನೀವು. ಹೇಸಿಗೆ ತಿಂದು, ಹೊಲಸಿನಲ್ಲಿ ಬಿದ್ದು ಒದ್ದಾಡುವ ಹಂದಿಗೂ ನಿಮಗೂ ವ್ಯತ್ಯಾಸವೇನಿದೆ ?

ವಿಕ್ರಂ– ಈ ಹುಚ್ಚು ಮಾತು ಬಿಟ್ಟು, ನಿನ್ನ ದೇಹ ಸ್ವಚ್ಛ ಮಾಡಿಕೊಳ್ಳೋ ಮಾರ್ಗ ಹುಡುಕೋಗೆ.

ವಿಶಾಲ– ಈಗ್ಹೋಗ್ತೀನಿ, ನಿಮ್ಮನ್ನು ಭಕ್ಷಿಸಲು ರಾಕ್ಷಸಿಯಾಗಿ ಮತ್ತೆ ಬರ್‍ತೀನಿ. (ಹೋಗುವಾಗ ಧರ್ಮಯ್ಯ ಎದುರಾಗುವನು)

ಧರ್ಮಯ್ಯ– ಯಾರಮ್ಮಾ ನೀನು ?

ವಿಶಾಲ– ಮನುಷ್ಯರಂತೆ ಕಾಣುವ ನರ ರಾಕ್ಷಸಿ. (ಹೋಗುವಳು)

ಭೋಜರಾಜ– ಅವಳ್ಯಾರಾದ್ರೂ ಆಗ್ಲಿ, ನೀನ್ಯಾಕ ತಲೆ ಕೆಡಿಸ್ಕೊಳ್ತಿಯಾ ?

ವಿಕ್ರಂ– ಹುಚ್ಚಿ ಇರ್‍ಬೇಕವಳು. ಒಳಗ್ಬಂದು ರಾದ್ಧಾಂತ ಮಾಡಿದ್ಲು. ಅದಕ್ಕ ಹೊರಗ್ ದಬ್ಬಿದ್ವಿ.

ಧರ್ಮಯ್ಯ– ನನಗೆದುರಾಗಿ ಬಂದ ಅವಳ ಮುಖ ನೋಡಿದಾಗಲೇ ಗೊತ್ತಾಯ್ತು ವಿಕ್ರಂ ಸಾಹೇಬ್ರೆ. ಅವಳಿಗೆ ಹುಚ್ಚು ಹಿಡಿದಿದೆಯಂತ. ಇಂದಿನ ಸಮಾಜದಲ್ಲಿ ಇಂಥಾ ಮುಗ್ಧ ಹೆಣ್ಣುಗಳ ಸಂಖ್ಯೆ ಲೆಕ್ಕವಿಲ್ಲದಂತೆ ಬೆಳೆದಿದೆ,

ಬೆಳೆಯುತ್ತಲೇ ಇದೆ. ಇಂಥವರ ಮನದಲ್ಲಿ ಮೋಹ ಅಂಕುರಿಸುವ ಬೀಜ ಬಿತ್ತಿ ಮೊಳಕೆಯಾಗಿ, ಗಿಡವಾಗಿ, ಫಲವಾಗುವ ತನಕ ಕಪಟ ಪ್ರೀತಿಯ ನೀರುಣಿಸುವ ಕೆಲ ಹೈಬ್ರಿಡ್ ಕಾಮುಕರೂ ಇದ್ದಾರೆ ಈ ಸಮಾಜದಲ್ಲಿ. ತಿಂದು ತೃಪ್ತಿ ಪಡುವವರಿಗೆ ತ್ಯಾಗ ಮಾಡುವ ದೊಡ್ಡ ಗುಣ ಈ ನೀಚರಿಗಿರುವದಿಲ್ಲ. ಬಾಯಿ ಚಪಲಕ್ಕಾಗಿ ಆ ಫಲವನ್ನು ಕಚ್ಚಿ, ತಿಪ್ಪೆಗೆ ಚಲ್ಲಿಬಿಡುತ್ತಾರೆ. ಪಾಪ! ತೃಪ್ತಿ ಪಡುವವರ ಪಾಲಾಗದೆ, ತೃಪ್ತಿಪಡಿಸುವ ಶಕ್ತಿಯೂ ಇಲ್ಲದೆ ಎಂಜಲಾದ ಆ ಫಲ ಕೊಳೆತು ಮಣ್ಣುಪಾಲಾಗಿಬಿಡುತ್ತದೆ.

ಭೋಜರಾಜ– ಎಂಜಲಾದ ಫಲವನ್ನೂ ತಿಂದು ತೃಪ್ತಿ ಪಡುವವರಿದ್ದಾರಪ್ಪ ಈ ಸಮಾಜದಲ್ಲಿ.

ಧರ್ಮಯ್ಯ– ಇರಬಹುದು. ಆದರೆ ಅವರು ತೃಪ್ತಿಪಡುವವರಲ್ಲ. ಬರಗೆಟ್ಟವರು, ಹಸಿದ ನಾಯಿಗಳು. ಮಾಂಸವನ್ನು ಹರಿದು ತಿನ್ನುವ ಮೃಗಗಳಂತೆ. ಹೆಣ್ಣನ್ನು ಹಂಚಿಕೊಂಡು ಭೋಗಿಸಿರುವ ತಂದೆ–ಮಕ್ಕಳ ಉದಾಹರಣೆ ಸಾಕಷ್ಟಿವೆ ಈ ಸಮಾಜದಲ್ಲಿ.

ಭೋಜರಾಜ– ಅಪ್ಪಾ ಧರ್ಮಯ್ಯ. ಆ ವಿಷಯಾ ಬಿಟ್ಟು ನೀ ಬಂದ ಕಾರಣ ಹೊಗಳು.

ಧರ್ಮಯ್ಯ– ಡೆಲ್ಲಿಯಿಂದ ನಾಳೆ ಹೊರಡ್ತೇನಿ ಅಂತ ವನಜಮ್ಮ ಟ್ರಂಕಾಲ್ ಮಾಡಿದ್ದಾರೆ. ಕಾರಣ ಅವರ ಸ್ವಾಗತ (ಆಮಂತ್ರಣ) ಸಮಾರಂಭದ ಸಿದ್ಧತೆಯನ್ನು ಮಿಲ್‌ನಲ್ಲಿ ಮಾಡ್ಬೇಕೋ, ಮನೆಯಲ್ಲಿ ಮಾಡ್ಬೇಕೋ ಅಂತ ನಿಮ್ಮನ್ನು ವಿಚಾರಿಸಲು ಬಂದೆ.

ವಿಕ್ರಂ– ರೀ ಧರ್ಮಯ್ಯ, ನಿಮಗ ಬುದ್ಧಿಯಿದೆಯೇನ್ರಿ ? ಕೋಟ್ಯಾಧೀಶ್ವರಳ ಸ್ವಾಗತ ಸಮಾರಂಭಕ್ಕೆ ಈ ಸಣ್ಣ ಮನೆ ಸಾಲುತ್ತೇನ್ರಿ ?

ಧರ್ಮಯ್ಯ– ಹಾಗಾದ್ರೆ ಮಿಲ್‌ನಲ್ಲೇ ವ್ಯವಸ್ಥೆ ಮಾಡ್ತೀನ್ರಿ

ಭೋಜರಾಜ– ಇನ್ನೂ ಕೇಳ್ತಾ ನಿಂತಿದ್ದಿಯಲ್ಲ, ಮೊದ್ಲು ಆ ಕೆಲ್ಸ ಮಾಡ್ಹೋಗು.

ಧರ್ಮಯ್ಯ– ಸರಿ ಬರ್ತೀನಿ. (ಹೋಗುವನು)

ವಿಕ್ರಂ– ಡ್ಯಾಡಿ, ಇವನ್ಮಾತುಗಳು ನಮ್ಮನ್ನೇ ಇರಿಯುತ್ತಿವೆಯಲ್ಲ.

ಭೋಜರಾಜ– ಅದರ ಬಗ್ಗೆ ನೀನೇನೂ ತಲೆ ಕೆಡಿಸಿಕೊಳ್ಳಬೇಡ. ಇವನ ತಲೆಯಲ್ಲಿ ಈಗತಾನೆ ಸಂಶಯದ ಸುಳಿ ಮೊಳಕೆ ಹಾಯ್ದಂತಿದೆ. ಸ್ವಲ್ಪ ದಿನ ಕಾದು ನೋಡೊಂಣ. ಆ ಮೊಳಕೆ ನೆರಳು ಕೊಡೊ ಮರವಾಗುತ್ತೊ, ಕಾಲಿಗೆ ಚುಚ್ಚುವ ಮುಳ್ಳಿನ ಕಂಟಿಯಾಗುತ್ತೊ ಅಂತ. ನೆರಳು ಕೊಡೊ ಮರ ವಾದರೆ ಅದರಡಿಯಲ್ಲಿ ಮಲಗಿ ಹಾಯಾಗಿ ನಿದ್ದೆ ಮಾಡೋಣ. ರಕ್ತ ಹೀರುವ ಮುಳ್ಳಿನ ಕಂಠಿಯಾದರೆ ಬೇರು ಸಮೇತ ಕಿತ್ತು, ಸುಟ್ಟು ಬೂದಿ ಮಾಡೋಣ. ಆ ವಿಚಾರ ಬಿಡು, ಸಧ್ಯ ನಾಯಕಿ ಬರ್ತಾಯಿದ್ದಾಳೆನ್ನುವ ಪ್ರಜ್ಞೆಯಲ್ಲಿರು.

ವಿಕ್ರಂ– ಆ ಪ್ರಜ್ಞೆ ನನಗಿದೆ ಡ್ಯಾಡಿ. ಈ ನಾಯಕನೂ ಅವಳು ಬರುವು ದನ್ನೇ ಎದುರು ನೋಡ್ತಾಯಿದ್ದಾನೆ.

ಭೋಜರಾಜ– ಹಾಗಾದರೆ ಈ ನಿರ್ದೇಶಕ ಕಥೆ ಹೆಣೆಯಲು ಸಿದ್ಧ ನಾಗಿದ್ದಾನೆ. ಬಾ ವಿಕ್ರಂ. ಮನೆಯಲ್ಲಿ ಸಿಗುವ ಈ ಮೋಜು, ವನಜಾ ಬಂದ್ಮೆಲೆ ಸಿಗಲಾರದು. ಇನ್ನೊಂದೆರಡು ಪೆಗ್ ಹಾಕೋಣ.

ವಿಕ್ರಂ– ನಾನು ರೆಡಿ ಡ್ಯಾಡಿ. (ನಗುತ್ತಾ ಹೋಗುವರು)

## ಐದನೆಯ ದೃಶ್ಯ

### ರಸ್ತೆ

(ರಂಗ ಬರುವನು)

ರಂಗ– ಅಂತೂ ವನಜಮ್ಮಾರು ಡೆಲ್ಲಿಯಿಂದ ಊರಿಗ್ಬಂದ್ರು. ಅಬಾಬಬ ಏನ ಕೂಡಿತ್ರಿ ಜನ ? ಅವತ್ತ ಹಡೆದ ಬಾಣಂತಿಯಿಂದ ಹಿಡ್ಕೋಡು, ಇವತ್ತೋ ನಾಯಂವಂತ ರೋಗ ಬಡುಕೊಂಡವರು ಸೈತ ಜಮಾಯ್ಸಿದ್ರು. ಅದೂ ಸಿಜಾನೆ. ವಯಸ್ನಲ್ಲಿ ಚಿಕ್ಕವರಾದ್ರೂ, ದಯಾಗುಣದಲ್ಲಿ ದೊಡ್ಡವ ರದಾರಂತನ ಜನಾನುರಾಗ ಜಾಸ್ತಿ ಐತಿ.

(ಲಿಲ್ಲಿ ಬರುವಳು)

ಲಿಲ್ಲಿ– ಹಾಯ್ ರಂಗು!

ರಂಗ– ಬಂದೆಯಾ ವಿಧಿ ರಾಣಿ. ನಾನಿದೇ ದಾರ್ರ್ಯಾಗ್ಬರ್‍ತೀನಂತ ನಿನಗೇನರ ಕನಸು ಬಿದ್ದಿರುತ್ತೇನು ?

ಲಿಲ್ಲಿ– ಹೌದು ರಾಜಾ.

ರಂಗ– ಮತ್ತೇನು ಹೌದು ಅಂತಿ ಚಂದ್ಗೇಡಿ. ನಿಸ್ಸಲುವಾಗಿ ಸಾಕಾತು ನನಗ. ಯಾವ ನಮೂನಿ ಕಾಡುದದು ? ನಾ ಎಲ್ಲೆರ ಕಾಣ್ಲೆ ಜನ ಅದಾ ರನ್ನೋ ಖಬರಿಲ್ದಂಗ "ಐ ಲವ್ ಯು ರಂಗು" ಅಂತ ಒಮ್ಮೆಗೆ ತೆಕ್ಕಿ ಬಡಿ ಯಾಕ ಬರ್‍ತಿಯಲ್ಲ. ಮೊದಲ್ಲ ಪುಕ್ಕ ಮನುಷ್ಯಾ ನಾನು. ಏನ್ಕೇನರ ಆದ್ರ ಗತಿ ಏನು ?

ಲಿಲ್ಲಿ– ಮನಮೋಹನ, ಯಾಕ್ಹಿಂಗ ಮಾತಾಡ್ತಿ ? ನನ್ನ ತ್ರಾಸು ನಿನಗೇನು ಗೊತ್ತು ? ರಾತ್ರಿ ನಾ ಮಲಗಿರ್‍ತೀನಿ. ಕನಸಿನ್ಯಾಗ ನೀ ಬರ್‍ತಿ. ಬಂದವನ ನನ್ನ ಗುಲಾಬಿ ಗಲ್ಲಕ್ಕ ಮುತ್ತು ಕೊಡ್ತಿ.

ರಂಗ– ಓಂನಮಃಶಿವಾಯ. ಹೆಣ್ಣೆ.ನಾನು ಆಜನ್ಮ ಬ್ರಹ್ಮಚಾರಿ. ಯಾವ ಹೆಣ್ಣಿನ ಕನಸಿಗೂ ನಾ ಹೋಗೋಲ್ಲ. ಹೋಗಾಕ ನನಗ ಪುರ್ರೊಸತ್ತೂ ಇರಲ್ಲ.

ಲಿಲ್ಲಿ– ಸುಳ್ಳ್ಯಾಕ್ಹೇಳ್ತಿ ? ನಿದ್ದಿ ಮಾಡಾಕ ಬಿಡ್ದಂಗ, ಕನಸ್ನ್ಯಾಗ ಬಂದು, ಗುದ್ದಿ ಗುದ್ದಿ ಎಬ್ಬಿಸ್ತಿ. ರಾತ್ರೆಲ್ಲಾ ನಿದ್ದಿಗೆಟ್ಟು ನನ್ನ ಮಾರಿ ಹೆಂಗಾ ಗೇತಿ ನೋಡಿಲ್ಲಿ ?

ರಂಗ– ನಿನ್ನ ಮಾರಿ ನೋಡಿದ್ರ ನನ್ನೇನು ಸರಳ ಕೈ ಬಿಡಂಗ ಕಾಣು ದಿಲ್ಲ. ಸಧ್ಯ ನೀನು ಪೂರಾ ಹಸ್ದಂಗ ಕಾಣ್ತಿ. ನಾನರ ಒಬ್ಬವನ ಅದೀನಿ. ಒಮ್ಮೆಗೆ ನೀ ಜಿಗದು ಬಂದು ಬಲಾತ್ಕಾರ ಮಾಡಿದ್ರ, ನನ್ನ ಶೀಲದ ಗತಿ ಏನು ?

ಲಿಲ್ಲಿ– ಏನಂದಿ! ನಿನ್ನ ಶೀಲ್ಹೋಗುತ್ತ ? ಬುದ್ದು. ನೀ ಗಂಡ್ಸದಿ.

ರಂಗ– ಗಂಡ್ಸಾದ್ರ, ಶೀಲ ಇರುದಿಲ್ಲೇನು ?

ಲಿಲ್ಲಿ– ಇದ್ರ ತೋರ್‍ಸು ನೋಡ್ತೇನಿ, ಶೀಲಾನ.

ರಂಗ– ಅಂದ್ರ, ಶೀಲಾನ ಚೀಲ್ದಾಗ ತಂದೀನಂತ ತಿಳದಿಯೇನು, ತಗದ ತೋರ್ಸಾಕ. ಗಂಡಸಿನ ಶೀಲ ಯಾವ್ದಂತ ತಿಳದಿ ?

ಲಿಲ್ಲಿ– ಗೊತ್ತಿಲ್ಲ. ಹೇಳು ಇಲ್ಲಾ ತೋರ್ಸು.

ರಂಗ– ತಾಯಿ ವಕ್ರೇಶ್ವರಿ ತೋರ್ಸ್ಸದಲ್ಲದು, ಹೇಳುದು. ಸುಮ್ನ ನಿಂತ್ಕೇಳು. ಗಂಡ್ಸಿನ ಶೀಲ ಪರಹೆಣ್ಣಿನ್ನ ಅಕ್ಕ–ತಂಗಿ ಅಂತ ಕರೆಯೋ ಅವನ ನಾಲಿಗ್ಯಾಗಿರ್ತೇತಿ. ಅವನ ಸುತ್ತಲಿರೊ ಪರಿಸರಕ್ಕ ಕೆಟ್ಟಾಗದಂಗ, ಚಟಕ್ಕ ಬಲಿಯಾಗದಂಗ ಬದುಕೋದ್ರಾಗಿರ್ತೇತಿ. ಕಟ್ಕೊಂಡ ಹೇಣ್ತಿನ ಕೊರಗಿಸ್ದಂಗ ಸಂಸಾರ ಮಾಡೋದ್ರಾಗಿರ್ತೇತಿ. ಮತ್ತ...

ಲಿಲ್ಲಿ– ಸಾಕು. ಮೊದ್ಲು ನಿನ್ನ ಮಾರಿಮ್ಯಾಲ ಮೂಡಿರೋ ಮೀಸಿ, ಒರ್ಜಿನಲ್ಲೋ, ಡೂಪ್ಲಿಕೇಟೋ ಹೇಳು.

ರಂಗ– ಯಾಕ, ಒಮ್ಮಿಗೆ ನನ್ನ ಮೀಸಿ ಸುದ್ದಿ ತೆಗೆದಲ್ಲ ?

ಲಿಲ್ಲಿ– ಡೂಪ್ಲಿಕೇಟ ಆಗಿದ್ರೆ ಆ ಜಾಗ ಬಿಡ್ಸೋದು ವಾಸಿ ಅಂತ. ನಿನ-ನಿನ ಬುದ್ಧಿ ಎಲ್ಲಿಟ್ಟಿದಿ ? ವಯಸ್ಸಿಗ್ಬಂದ ಹೆಣ್ಣು, ಬಯಸಿ ನಿನ್ಮುಂದ ನಿಂತಾಗ, ಪ್ರೇಮಗೀತೆ ಹಾಡಿ ಕುಣ್ಸೋದ್ಬಿಟ್ಟು, ಜೋಗುಳ ಪದ ಹಾಡಿ ಮಲಗ್ಸಾಕ ನೋಡ್ತಿಯಲ್ಲ.

ರಂಗ– ನಾನೇನೋ ಕುಣಿಸ್ತಿದ್ದೆ ಆದ್ರ ನಾನಿನ್ನೂ ಆ ವಯಸ್ಸಿಗೇ ಬಂದಿಲ್ಲಲ್ಲ.

ಲಿಲ್ಲಿ– ವಯಸ್ಸಿಗ್ಬಂದಿಲ್ಲ ?... ನಿನ್ನ ವಯಸ್ಸರ ಎಷ್ಟೀಗ ?

ರಂಗ– ಇಪ್ಪತ್ತೆಂಟು.

ಲಿಲ್ಲಿ– ವಯಸ್ಸಿಗೆ ಬರಾಕ ಇನ್ನೆಷ್ಟು ವರ್ಷ ಬೇಕು ?

ರಂಗ– ಇದರ ಮ್ಯಾಲ ಇಪ್ಪತ್ತೆಂಟು.

ಲಿಲ್ಲಿ– ಅಂದ್ರ, ಐವತ್ತಾರಕ್ಕೇರುತ್ತೇನು ನಿನ್ನ ಹರೇವು ?

ರಂಗ– ಹೌದು. ಅಲ್ಲೀತನ ನಿಮಗೇನು ಪವರ್ ಸ್ಯಾಂಕ್ಷನ್ ಆಗುದಿಲ್ಲ.

ಲಿಲ್ಲಿ– ಒಂದ್ಸಲ ನನ್ನ ತಬ್ಬಿಕೊ. ಹುಚ್ಚೆದ್ದು ಕುಣಿವಂತ ಪವರ್ ಬರ್ತದ.

ರಂಗ– ಅಂದ್ರ, ನಿನ್ನ ಬಾಡ್ಯಾಗ ಕರೆಂಟ್ ಸ್ಪಾರ್ಕ್ ಐತೇನು ?

ಲಿಲ್ಲಿ– ಮುಟ್ಟಿ ನೋಡು ನಿನಗ ಗೊತ್ತಾಗುತ್ತ ?

ರಂಗ– ಹಂಗಾರ ಗಟ್ಟಿ ನಿಂದ್ರು ಟ್ರೈ ಮಾಡ್ತೀನಿ. (ಮುಟ್ಟಲು ಹೋಗಿ ಹಿಂದೆ ಸರಿದು) ಬ್ಯಾಡಬಿಡು ಮಾರಾಯಳ ಶಾಕ್ ಹೊಡದೀತು.

ಲಿಲ್ಲಿ– ಅಪರೂಪದ ಗಂಡು ಸಿಕ್ಕೀ ನೋಡು ನನಗ. ಗಂಡಸ್ತನ ಇದ್ದಂಗ ಕಾಣುದಿಲ್ಲ ನಿನಗ.

ರಂಗ– ಯಾಕಿಲ್ಲ ಐತಿ. ಆದ್ರ ನಿನ್ಮುಂದ ಬರುವಲ್ದದು.

ಲಿಲ್ಲಿ– ಇದ್ರ ನನ್ನ ಮುಟ್ಟು ಬಾರೋ ಮುದಸ (ಕೈ ಹಿಡಿದು ಎಳೆಯುವಳು)

–ಪದ–

(ಪದ ಮುಗಿಯುವಾಗ ರಂಗ ಕುಸಿದು ಬೀಳುವನು)

ರಂಗ– (ತಡವರಿಸುತ್ತ) ಲಿಲ್ಲಿ, ನಾನೀಗೆಲ್ಲದೇನಿ ?

ಲಿಲ್ಲಿ– ಕಣ್ಬಿಟ್ಟು ನೋಡಲ್ಲ.

ರಂಗ– ಕಣ್ಣು ಬಿಡಾಕ ಬರ್ದಂಗಾಗೇತೀಗ. ಲಿಲ್ಲಿ, ಮೈಯಾಗ್ಯಾಕೋ ಜುಂ ಅನ್ನಾಕ ಶುರುವಾತಲ್ಲ ?

ಲಿಲ್ಲಿ– ಗಂಡಸ್ತನದ ಸಂಕೇತದು, ಮೈಯಾಗೀಗ ಕಾವಾಗೇತಿಲ್ಲೊ ?

ರಂಗ– ಕಾವೆಲ್ಲಿದು, ಎಲ್ಲಾ ತಣ್ಣಗಾಗಿ, ಥಂಡಿ ಶುರುವಾಗೇತಿ. ಕೈಕಾಲು ಸೈತ ಸರ್ದಾಡುವಲ್ಲವು.

ಲಿಲ್ಲಿ– ನಿಂದೆಂಥಾ ಪ್ರಕೃತಿನೋ ಮಾರಾಯ. ಈಗರ ಕುಣಿಯಾಕ ಶುರು ಮಾಡಿ, ಒಮ್ಮೆಗೆ ನೆಲ ಹಿಡಿದೆಲ್ಲ. ಈಗ್ಲ ಇಷ್ಟು ಡೌನಾದ್ರೆ ಮುಂದೆಂಗಂತ ?

ರಂಗ– ಆಗದಿ ಬ್ಯಾಲೆನ್ಸಿನ ಮನುಷಾ ನಾನು. ನಡದಾಡಿದ್ರ್ಹ ಜೋಲಿ ಹೊಡಿತೀನಿ. ಇನ್ನು ಕುಣದಾಡಿದ್ರ ಗತಿ ಏನಾಗ್‌ಬೇಡ ? ಆದರಾಗದ್ರಾಗ ಎಂದೂ ಬರದ ಹುರುಪು ಇವತ್ತ ಬರ್ಬೇಕ್ಹ ನನಗ! ಕತ್ತಿ

ಕುಣಿದಂಗ್ ಕುಣಿದು, ದಮ್ಮತ್ತಿ ನೆಲಕ್ ಬಿದ್ದೆ. (ಏಳಲು ಹೋಗಿ ಬಿದ್ದು) ಹೊಗನಿಸ, ಏಳಾಕ್ಕ ಬರ್ದಂಗಾಗೇತಿ.

ಲಿಲ್ಲಿ— ನಾನೆಬ್ಬಿಸ್ಲೇನು ?

ರಂಗ— ಬ್ಯಾಡ. ನಿನಗ ಕೈ ಮುಗೀತೀನಿ ದೂರ ನಿಂದ್ರು. ಒಮ್ಮೆ ಮುಟ್ಟಿ ನೆಲಕ್ಕೆಡವಿದಿ. ಮತ್ತೇನರ ಮುಟ್ಟಿದಿ, ಖಾಯಂ ಮಲಗ್ತೀನಿ.

(ಮೂರ್ತಿ ಬರುವನು)

ಮೂರ್ತಿ— ದಾರಿಮ್ಯಾಲೇನ ನಡಸ್ಯಾರಲ್ಲ ಕಳ್ರು ? ಈ ಮಗ ನೋಡಿದ್ರ ನೆಲ ಹಿಡ್ದು ಕುಂತಾನ. ಇಕಿ ನೋಡಿದ್ರ ಶಿಲಾಬಾಲಿಕೆ ಪೋಜು ಕೊಟ್ಟು ನಿಂತಾಳ. ಏನ್ಹು ಗದ್ಲಾಗೇತಿಲ್ಲಿ. ಯಾಕಲೆ ರಂಗ ಏನಾತು ?

ರಂಗ— ನನೇನೂ ಕೇಳಬ್ಯಾಡ. ನಿಂತಾಳ ನೋಡಲ್ಲಿ ಮಳ್ಳಿ. ಆಕಿನ್ನ ಕೇಳು.

ಮೂರ್ತಿ— ಏನಾತೆ ಲಿಲ್ಲಿ ?

ಲಿಲ್ಲಿ— ಯಾಕಲೇ ಹೈವಾನ್ ? ಏನೇ ಲಿಲ್ಲಿ ಅಂತ ಏಕವಚನದಾಗ ಕರಿತಿಯಲ್ಲ ? ಬಾಯಾಗ ಗೂಟ ಬಡದೇನು, ನೆಟ್ಟಗ್ಮಾತಾಡು.

ಮೂರ್ತಿ— ನೆಟ್ಟಗೇನು ಮಾತಾಡ್ತಾರೇ ಸೋಗಲಾಡಿ. ಪಾಪ! ನೆಲ ಹಿಡ್ದು ಕುಂತಾನಲ್ಲ. ಏನ್ಮಾಡಿದಿ ಖರೆ ಹೇಳು. ಮೊದಲ್ಹು ಬಾಯಿಸತ್ತ ಹುಡುಗದು. ನಿನ್ನ ವಯಸ್ಸೇನು, ಇವನ ವಯಸ್ಸೇನು ? ಸ್ವಲ್ಪರ ತಿಳಿತೇತಿಲ್ಲ ನಿನಗೆ ?

ರಂಗ— ಈ ಮಗಾ ಹೊಸ ಗತ್ತು ಎಬ್ಬಿಸಿದ. ಇನ್ನೂ ಹಾಲು ಕುಡಿಯೋ ಕೂಸಂತ ತಿಳಿದಾನ ನನ್ನ.

ಮೂರ್ತಿ— ನೀನೇನರ ಮಾಡುವಂಗಿದ್ರ ನನಗ್ಮಾಡು ತಡ್ಕೊಂತೀನಿ.

ಲಿಲ್ಲಿ— ಮೂರ್ತಿ, ಇದು ನಿನಗ ಸಂಬಂಧಿಲ್ಲದ ವಿಷಯ. ತಲಿ ಕೆಡಸ ಬ್ಯಾಡ ಸುಮ್ಮನೋಗು.

ಮೂರ್ತಿ– ನೀನೂ ಅಷ್ಟ. ನನ್ನ ತಲಿ ಕೆಡಸಬ್ಯಾಡ. ಏನು ನಡೀತಂತ ಸರಳ್ಹೇಳು, ಇಲ್ಲಾಂದ್ರೆ ನಿನ್ನ ಮೂಗು ಕೊಯ್ದು ಹಣಗ್ಗಚ್ಚೀನಿ.

ಲಿಲ್ಲಿ– ಏನಂದಿ ? ಮೂಗು ಕೊಯ್ತಿಯಾ ? (ಸೆಡ್ಡು ಹೊಡೆದು) ನಿಮ್ಮಪ್ಪಗ ಹುಟ್ಟಿದ್ರೆ ಮುಟ್ಟುಬಾರಲೇ ನೋಡ್ತಿನಿ. ನಿನ್ನ ನಾಲಿಗೆ ಕಿತ್ತು ನಾಯಿಗಾಕ್ಷದಿದ್ರ ನಾನು ಹೆಣ್ಣ ಅಲ್ಲ. (ಮತ್ತೆ ಸೆಡ್ಡು ಹೊಡೆದು) ಬಾರಲೇ ಬಾ.

ರಂಗ– ಇವರ ಪ್ರಕರಣ ಭಾರತ–ಪಾಕಿಸ್ತಾನದ ಗಡಿ ಸಮಸ್ಯೆಗೆ ಬಿದ್ದಂಗಾತು. ಈ ಮಗ ಮೂಗು ಕೊಯ್ತಿನಿ ಅಂತಾನ, ಇಕಿ ನಾಲಿಗಿ ಕೀಳ್ತಿನಿ ಅಂತಾಳ. ಇಬ್ರೂ ತಲಿ ಕೆಟ್ಟವರ ಅದಾರ. ಇಲ್ಲೇ ಇದ್ದು ಇವರ ಕೈಗೆ ಸಿಕ್ರ, ನಂದೇನೇನು ಕೀಳ್ತಾರೋ ಯಾರಿಗ್ಗೊತ್ತು! ಯೋ ನಿವಹಾರ ಕುಸ್ತಿನರ ಹಿಡಿರಿ ನೋಡ್ತಿನಿ.

ಮೂರ್ತಿ– ಅಂದ್ರ, ಇಕಿ ಕೈಯಾಗ ಕಟಿಸೇ ಕಳ್ಳೋ ವಿಚಾರ್ಯತೇನು ?

ರಂಗ– ಇಕೇನು ಕಟಿತಾಳಲೆ. ಹೇಳಿ ಕೇಳಿ ಹೆಣ್ಣು ?

ಮೂರ್ತಿ– ನೀನಿನ್ನೂ ಹೆಣ್ಣಿನ ಕೈಯಾಗ ಸಿಕ್ಕಿಲ್ಲ ಮಗನೆ. ಸಿಟ್ಟು ಬಂದು ಜಗಾ ನೋಡಿ ಕಟದ್ರ, ಆರು ತಿಂಗ್ಳು ಹಾಸಿಗಿನ ಹಿಡಿಬೇಕು.

ರಂಗ– ಆ ನಮೂನಿ ಕಟಿತಾರ ?

ಮೂರ್ತಿ– ಅವರಿಡ್ತನ ಅಂಗಿರ್ತಾವು. ಸಧ್ಯ ನೀನೀಗ ನೆಲ ಹಿಡ್ದು ಕುಂತಿದ್ದೆಲ್ಲ, ನಿನಗ್ಯಾವ ಹಿಡ್ತದಾಗ ಕಟದಿದ್ಲು ?

ಆ ಹಿಡ್ತನ ಬ್ಯಾರಿತ್ತು ಬಿಡಲೆ. ಎಷ್ಟು ಕಟದ್ರೂ ನನಗೇನು ನೋವಾಗ್ಲಿಲ್ಲ. ಪುಷ್ಪಕ ವಿಮಾನದಾಗ ತೇಲಿದಂಗಾತು ನನಗ.

ಮೂರ್ತಿ– ಈ ಮಗನಿಗೆ ಮತ್ತು ಬರುವಂತ ಹಿಡ್ತದಾಗ್ಲ ಕಟದಾಳ ಬೇವರ್ಸಿ.

ಲಿಲ್ಲಿ– ಬೇವರ್ಸಿ ಅನಬ್ಯಾಡೋ ಮಗನ.

ಮೂರ್ತಿ– ನೀನೂ ಮಗಾಪಗ ಅನಬ್ಯಾಡ. ನನಗೇನರ ಸಿಟ್ಟು ಬಂತಂದ್ರ...

ರಂಗ– ಮೂಗು ಕೊಯ್ತ್ಯಾನೆ.

ಮೂರ್ತಿ– ಸುಮ್ನಿರಲೆ...

ರಂಗ– ಏನು ಸುಮ್ನಿರ್ತ್ಯಯಾ ? ಒಂದಳತಿ ಕುರು ಹಚ್ಚಿದಿ. ಸಿಟ್ಟು ಬಂತಂದ್ರ ಹಂಗ್ಮಾಡ್ತೀನಿ, ಹಿಂಗ್ಮಾಡ್ತೀನಿ ಅಂತ. ನಾನೂ ಈಗ್ಬಂದಿತು, ಆಗ್ಬಂದೀತಂತ ನೋಡೇ ನೋಡ್ತೀನಿ. ಒಟ್ಟು ಬರುವಲ್ದದು ಸಿಟ್ಟು.

ಮೂರ್ತಿ– ಅಂದ್ರ, ಇಷ್ಟು ದಿವ್ಸ ನನ್ನ ಸಿಟ್ಟು ನೋಡಿಲ್ಲೇನು ? ಇವತ್ತು ನೋಡಂಗಾರ. ಬಾರೆ ಬಿಂಕದ ಹೆಣ್ಣೆ. ಇವತ್ತು ನಿನಗೊಂದು ಗತಿ ಕಾಣ್ಸ ಕೈ ಬಿಡ್ತೀನಿ.

ಲಿಲ್ಲಿ– (ಬಳೆ ಏರಿಸುತ್ತಾ) ನಾ ತಯಾರಾಗೇ ನಿಂತೀನಿ. ಮುಂದ್ಕರ ಬಾರೋ ಗಂಡ್ಸ.

ರಂಗ– ಇದು ಡೇಂಜರ್ ಪೊಜಿಷನ್ನಿಗೇ ಬಂತು. ಇವರೌರ ಹೊಡದಾಡಿ ಸಾಯ್ಲಿ. (ಓಡುವನು)

ಮೂರ್ತಿ– ಲೇ ಮಗನ ರಂಗ್ಯಾ, ಒಬ್ಬನ್ನ ಬಿಟ್ಹೋಕ್ಕಿಯಲ್ಲಲೇ... (ಓಡಿ ಹೋಗುವನು)

ಲಿಲ್ಲಿ– ಬಾರಲೇ ಮೂರ್ತಿ. ನನ್ನ ಕೈರುಚಿ ಇನ್ನೊಮ್ಮೆ ತೋರಿಸ್ತೀನಿ. ಅಲ್ಲಾ, ಈ ರಂಗೂಗೇನ್ಮಾಡ್ಬೇಕಾತಂತೀನಿ. ಒಟ್ಟ ಕೈಗೆ ಸಿಗವಲ್ಲ. ಆದ್ರೂ ಅವನ್ನ ಬಿಡಲ್ಲ ಬೆನ್ಹತ್ತೀನಿ. (ಹೋಗುವಳು)

(ಭೋಜರಾಜನಿಗೆದುರಾಗಿ ವಿಕ್ರಂ ಅವಸರದಲ್ಲಿ ಬರುವನು)

## ಆರನೆಯ ದೃಶ್ಯ

## ಉದ್ಯಾನವನ

(ರಂಗ ಒಂದು ಕಡೆ ನಿಂತಿದ್ದಾನೆ. ವನಜ ಟೈಂ ನೋಡಿಕೊಳ್ಳುತ್ತಾ ತಿರುಗಾಡುತ್ತಿದ್ದಾಳೆ)

ವನಜ– ರಂಗಣ್ಣ. ಅರವಿಂದ್ರೇಕೊ ಇಷ್ಟೊತ್ತಾದ್ರೂ ಬರ್ಲಿಲ್ಲವಲ್ಲ ?

ಮೊದಲ್ಲ ಡಾಕ್ಟರವರು. ಯಾವ್ದರ ಆಪ್ರೇಷನ್ ಕೇಸ್ ಬಂದಿರ್ಬೇಕು. ಅದಕ್ಕ ತಡ ಆಗೇತಿ.

ವನಜ– ರಂಗಣ್ಣ, ಅರವಿಂದರ ಬಗ್ಗೆ ನಿನ್ನ ಅಭಿಪ್ರಾಯವೇನು ?

ರಂಗ– ದೊಡ್ಡ ಪಂಡಿತಗ ಕೇಳಿದ್ರಿ ನೀವು. ಅಲ್ರಿ, ಸಂದ್ಧಾ ನನಗ ತಿಳಿವಲ್ದು. ಇನ್ನು ಆ ಡಾಕ್ಟರದೇನು ತಿಳಿಬೇಕು.

ವನಜ– ನನಗವರ ಪರಿಚಯವಾದಂದಿನಿಂದ ನೀನೂ ಅವರ ಜೊತೆಗಿದ್ದಿಯಾ ಅಂದಾಗ, ಅವರ ಸ್ವಭಾವ ಸ್ಟಡಿ ಮಾಡಿಲ್ವೆ ನೀನು ?

ರಂಗ– ಮಾಡೇನ್ರಿ, ಸಧ್ಯ ತೋರಸ್ತೀನಿ. (ಆ ಕಡೆ ಈ ಕಡೆ ನೋಡಿ) ನನ್ನ ತಲಿಯಾಗೀಗ ಯಾವ ವಿಚಾರ ಬಂದಿದೆ ಗೊತ್ತೇನ್ರಿ ?

ವನಜ– ನನಗೇನು ಗೊತು ?

ರಂಗ– ಗೊತ್ತು ಮಾಡ್ತೀನೀಗ.

ವನಜ– ಅಂದ್ರೆ ?

ರಂಗ– ನಿಮ್ಮನ್ನ ರೇಪ್ ಮಾಡ್ತೀನಿ.

ವನಜ– ರಂಗಣ್ಣ, ನಿನಗೇನು ತಲೆ ಕೆಟ್ಟಿದೆಯೇನು ?

ರಂಗ– ಹೌದು. ನಿನ್ನಲುವಾಗಿ ಪೂರಾ ತಲೆಕೆಟ್ಟಿದೆ. ಬಾಳ ದಿನದಿಂದ ನಿನ್ನ ಮ್ಯಾಲ ಕಣ್ಣಿತ್ತು ನನಗ. ಆದ್ರ, ಕಾಲ ಕೂಡಿ ಬಂದಿದ್ದಿಲ್ಲ. ಇವತ್ತದಕ ಕಾಲ ಕೂಡೇತಿ. ತಕರಾರು ಮಾಡದಂಗ, ಸುಮ್ಕನ ನನ್ನಾಸೆ ತೀರಿಸು ಬಾ ನನ್ನ ರಾಣಿ. (ಹಿಡಿಯಲು ಹೋದಾಗ ಕಪಾಳಕ್ಕೊಡೆಯುವಳು)

ವನಜ– ಚಂಡಾಲ, ನನ್ನ ಕೆಡಸಾಕ ಬರ್ತಿಯೇನೋ!

ರಂಗ– ಕಟದ್ರಿಲ್ಲೊ. ಹಿಂಗಿರುತ್ತ ನೋಡ್ರಿ ಮನುಷ್ಯಾನ ಸ್ವಭಾವ. ಪೊತ್ತ ನೋಡಿ ಹೊಡ್ತ ಹಾಕುತ್ತ. ಈಗ ನಾವೂ ನಿಮ್ಮೊಡ ಖಾಯಂ ಇರ್ತೀನಿಲ್ಲೊ.

ವನಜ– ಇರ್ತಿಯಾ.

ರಂಗ– ಹಂಗಾರ ನನ್ನ ಸ್ವಭಾವ ಇಂಗ್ಹ ಐತೆಂತ ನಿಮಗ್ಯಾಕ ತಿಳಿಲಿಲ್ಲ.

ವನಜ– ಈ ಪ್ರಶ್ನೆಗೆ ಏನಂತ ಉತ್ತರಿಸಬೇಕೋ ನನಗಂತೂ ತಿಳಿತಿಲ್ಲ.

ರಂಗ– ನಿಮಗ್ಯಾಕ, ಯಾರಿಗೂ ತಿಳಿದಿಲ್ರಿ. ಸ್ವಭಾವ ಬೂದಿ ಮುಚ್ಚಿದ ಕೆಂಡದಂಗ್ರಿ. ಸಮಯ, ಸಂದರ್ಭಕ್ಕ ಬಣ್ಣ ಬದಲಾಯಿಸ್ತಿರತೇತಿ ಕೆಲವರ ಸ್ವಭಾವ ಕಣ್ಣಿಗೆ ಸೊಗಸಾಗಿ ಕಂಡ್ರೂ, ಮನಸ್ಸು ಮಾತ್ರ ಬುಸುಗುಡೋ

ಸರ್ಪವಾಗಿ ಹರದಾಡುತ್ತಿರುತ್ತ. ಹಂಗ, ಅರವಿಂದರ ಸ್ವಭಾವ ಅರಳಿದ ಹೂವಿ ನಂಗ ಕಂಡ್ರೂ. ಮನಸ್ಸ, ಹಾವಾಗಿ ಹರದಾಡ್ತಿದ್ರೆ ಏನ್ಮಾಡ್ತಿರಿ ? ಯಾಕಂದ್ರ ಮನಸ್ಸು ಮಂತ್ರ ದಂಡಿದ್ದಂಗ. ಹೂವಾಗಿ ಸುವಾಸ್ನೆನೂ ಕೊಡ್ತದ, ಹಾವಾಗಿ ಪ್ರಾಣಾನೂ ಹೀರುತ್ತ. ಇದು ಆ ವ್ಯಕ್ತಿನ ನಂಬಿರೋ ನಿಮ್ಮ ಹಣೆಬರಹ ಬಿಟ್ಟಿದ್ದು.

ವನಜ– ನಾ ಕೇಳಿದ ಸಣ್ಣ ಪ್ರಶ್ನೆಗೆ. ದೊಡ್ಡ ತತ್ವಾನೇ ಹೇಳಿದೆಲ್ಲ.

ರಂಗ– ಇದು ಸಣ್ಣ ಪ್ರಶ್ನೆ ಅಲ್ರಿ, ಇದು ದೊಡ್ಡ ಪಂಡಿತರಿಗೂ ಗದ್ಲಕ್ಕ ಕೆಡುವುತ್ತ.

(ಅರವಿಂದ ಬರುವನು)

ಅರವಿಂದ– ಏನಪಾ ರಂಗಣ್ಣ, ಪಂಡಿತನ ಸುದ್ದಿ ತಗು...

ರಂಗ– ಏನಿಲ್ರಿ, ವನಜಮ್ಮಾರಿಗೆ ಸಣ್ಣ ಸಮಸೆ. ತಲಿ ಕೆಡಿಸೇತ್ರಿ.

ಅರವಿಂದ– ಯಾವ ಸಮಸ್ಯೆ ?

ರಂಗ– ನಾಯಿ ಬಾಲಕ್ಕ ಡಬ್ಬಿ ಕಟ್ಟಿದ್ರೂ ನೆಟ್ಟಗಾಗಲ್ಲಲ್ಲ, ಅದಕ್ಕೇನು ಮಾಡ್ಬೇಕು ? ಅಂದ್ರು.

ಅರವಿಂದ– ನೀನೇನು ಹೇಳಿದೆ ?

ರಂಗ– ನೆಟ್ಟಗಾಗಲ್ಲ ಅಂದ್ಮೇಲೆ. ಅದನ ಕಟ್ ಮಾಡೋದೇ ಛಲೋ ಅಂತ ಹೇಳ್ದೆ.

ಅರವಿಂದ– (ತಡವರಿಸಿ) ಆಂ... ವನಜ ಏನೇಳ್ತಾನಿವನು ?

ವನಜ– ಅವನಿಗೇ ಗೊತ್ತದು, ನಾ ಕೇಳಿದ್ದೊಂದು, ಇವನು ಹೇಳ್ತಿರೋದೊಂದು.

ಅರವಿಂದ– ನನಗಂತೂ ಈ ಮಹಾನುಭಾವನ ಮಾತೇ ಅರ್ಥವಾಗೋದಿಲ್ಲ.

ರಂಗ– ಖರೆ ಐತ್ರಿ ನಿಮ್ಮಾತು. ನನ್ನಂತ ಬುದ್ಧಿವಂತ ಬಡವ, ಶ್ರೀಮಂತರ, ಮುಂದ ನಿಂತು, ಹಸಿವಾಗಿದೆ ಅಂತ ಅತ್ತರ, ಹೇಸ್ಗಿ ತಿಂದು ಬದುಕ್ಕೋಗು ಅಂತಾರ. ಬಡವನ ಸತ್ಯ ಶ್ರೀಮಂತರ ಕಾಲಾಗಿನ ಕೆರ ಆಗ್ಬಿ

ಟ್ಟೆತ್ರಿ. ಬರ್ತ್ನಿ. ಇಲ್ಲೆ ನಿಂತ್ರ ಬ್ರೆಕ್ಕಿಲ್ಲದ ಬಾಯಿ ಒದರಿಕೊಂತನ ಇರ್ತೇತಿ, (ಹೋಗುವನು)

ಅರವಿಂದ– ವಿಚಿತ್ರ ಮನುಷ್ಯ

ವನಜ– ಆದರೂ ವಿಚಾರವಂತ.

ಅರವಿಂದ– ಅವನ ಸುದ್ದಿ ಬಿಡು ಚಿನ್ನ. ಸಧ್ಯ ಡೆಲ್ಲಿಯಿಂದ ಬಂದವಳು. ಈ ಬಡಪ್ರೇಮಿಯನ್ನು ಮರೆಯದೆ, ಬೆರೆಯಲು ಬಂದಿರುವೆಯಲ್ಲ ?

ವನಜ– ಮರೆಯುವಷ್ಟು ತುಚ್ಛಳಾಗಿ ಕಾಣ್ತೆನೇನು ?

ಅರವಿಂದ– ಛೆಛೇ, ತುಚ್ಛಳಾಗಿ ಕಾಣ್ತಿ ಅಂತ ಹೇಳಲಿಲ್ಲ. ನಿನ್ನ ಗುಂಗಿನಲ್ಲಿ ನಾನಷ್ಟು ಹುಚ್ಚನಾಗಿದ್ದನ್ನು ಹೇಳಿದೆ. ನಿನ್ನ ಪ್ರೀತಿಯ ಬಲೆಯಲ್ಲಿ ಬಿದ್ದು ನಿಯಂತ್ರಣ ತಪ್ಪಿದ ಗೊಂಬೆಯಾಗಿದ್ದೇವೆ. ಕುಳಿತರೆ ಮನ ಕಲಕುವ ನಿನ್ನ ರೂಪ, ನಿಂತರೆ ನಿಲುವಿನ ಆಯವನ್ನೇ ತಪ್ಪಿಸುವ ನಿನ್ನ ಕಣ್ನೋಟ. ಮಲಗಿದರೆ ಮತ್ತೆ ಮತ್ತೆ ಮರುಕಳಿಸುವ ಈ ನಿನ್ನ ಹೂನಗೆ ಒಟ್ಟು ನನ್ನ ಮನಸ್ಸನ್ನು ಕಟ್ಟಿಹಾಕಿಬಿಟ್ಟಿದೆ ಈ ನಿನ್ನ ಮುದ್ದು ಮುಖ.

ವನಜ– ಗಂಡಸಾದ ನಿಮ್ಮ ಸ್ಥಿತಿನೇ ಹೀಗಿರುವಾಗ, ಹದಿನೈದು ದಿನ ನಿಮ್ಮನ್ನಗಲಿ ಡೆಲ್ಲಿಯಲ್ಲಿದ್ದ ಈ ಹೆಣ್ಣಿನ ಪರಿಸ್ಥಿತಿ ಏನಾಗಿರಬಹುದೆಂದು ನೀವೇ ವಿಚಾರ ಮಾಡಿ.

ಅರವಿಂದ– ನನ್ನನ್ನೆಷ್ಟು ಪ್ರಿತಿಸುತ್ತಿರುವಿಯೆಂದು ನನಗ್ಗೊತ್ತು ವನಜ. ಆದರೆ ಮುಂದಾಗುವ ಆಘಾತದ ಅರಿವಿಲ್ಲದೆ ತಪ್ಪು ಮಾಡ್ತಿರುವಂತ ಭಾಸವಾಗ್ತಿವೆ.

ವನಜ– ಯಾಕರವಿಂದ್ ವಿಚಿತ್ರವಾಗಿ ಮಾತಾಡ್ತೀರಿ.

ಅರವಿಂದ– ಹೌದು ವನಜ. ಗಿಡದಲ್ಲರಳಿದ ಗುಲಾಬಿ ಹೂವಿಗೂ, ಅಕ್ಕಸಾಲಿಯಿಂದ ಅರಳಿದ ಬಂಗಾರದ ಹೂವಿಗೂ ಬಹಳ ಅಂತರವಿದೆ.

ವನಜ– ಅಂದ್ರೆ ?

ಅರವಿಂದ– ನಿಸರ್ಗ ನೇಮದಿಂದ ಅರಳಿದ ಗುಲಾಬಿ ಹೂವನ್ನು ಆಸೆಪಟ್ಟವರು ಭಯವಿಲ್ಲದೆ ಕಿತ್ಕೊಳ್ಳಬಹುದು ಆದ್ರೆ ಅಕ್ಕಸಾಲಿಯಿಂದ ಅರಳಿದ ಬಂಗಾರದ ಹೂವನ್ನು ಆಸೆ ಪಟ್ಟವರು ಅಷ್ಟು ಸುಲಭವಾಗಿ ದಕ್ಕಿಸಿಕೊಳ್ಳಲು

ಸಾಧ್ಯವಿಲ್ಲ. ಯಾಕಂದ್ರೆ, ಆ ಹೂವು ಅಕ್ಕಸಾಲಿಗೆ ದುಡ್ಡು ಕೊಟ್ಟು ಮಾಡಿಸಿದವರ ಆಧೀನದಲ್ಲಿರುತ್ತದೆ. ಮತ್ತೊಬ್ಬರು ಹಕ್ಕು ಚಲಾಯಿಸದಷ್ಟು ಭದ್ರವಾಗಿರುತ್ತದೆ.

ವನಜ– ನಾನೀಗ ನಿಮ್ಮ ದೃಷ್ಟಿಯಲ್ಲಿ ಬಂಗಾರದ ಹೂವೇ ?

ಅರವಿಂದ– ಹೌದಲ್ವೊ... ನೀನೇ ವಿಚಾರ ಮಾಡು. ನಿನ್ನನ್ನು ಬಂಗಾರದ ಹೂವಾಗಿ ಅರಳಿಸಿ, ಬೆಳೆಸಿದವರು ನಿನ್ನ ಸೋದರ ಮಾವ ಭೋಜರಾಜರು. ಅಂದಾಗ, ತಮ್ಮ ಮಗನಿಗೆ ಕೊಡುವ ವಿಚಾರ ಇಟ್ಕೊಂಡೇ ಅರಳಿಸಿರಬೇಕಲ್ಲವೇ ?

ವನಜ– ನಿಮ್ಮ ಕಲ್ಪನೆ ತಪ್ಪಾಗಿದೆ. ನಾನು, ಅವರ ಮಗ ವಿಕ್ರಂ ಬಾಲ್ಯದಿಂದ ಕೂಡಿ ಆಡಿ ಬೆಳೆದವರು. ಹೀಗಾಗಿ ನನಗವನ ಮೇಲೆ ಸೋದರ ಮಮತೆ ಇದೆಯೇ ಹೊರತು, ಮದುವೆಯಾಗುವ ಮನಸ್ಸಿಲ್ಲ. ಇದಲ್ಲದೆ ನಮ್ಮಿಬ್ಬರ ಮದುವೆ ವಿಷಯವಾಗಿ ನಮ್ಮಾವನವರು ಇದುವರೆಗೂ ಚಕಾರವೆತ್ತಿಲ್ಲ. ಒಂದ್ವೇಳೆ ಆ ವಿಚಾರ ಇದ್ರೂ ನಮ್ಮಿಬ್ಬರ ಪ್ರೇಮದ ವಿಷಯ ತಿಳಿದ್ರೆ ಖಂಡಿತ ನನ್ನಾಸೆಗೆ ಅಡ್ಡ ಬರೋಲ್ಲವರು.

ಅರವಿಂದ– ನನ್ಮೇಲೆ ಅಷ್ಟೊಂದು ಪ್ರೀತಿಯಿದೆಯೇ ?

ವನಜ– ನಿಮಗನುಮಾನವಿದೆಯೇನು ?

ಅರವಿಂದ– ಅನುಮಾನ... ಅನಿವಾರ್ಯ

ವನಜ– ನಾನಿಷ್ಟು ಬಿಚ್ಚಿ ಹೇಳಿದ್ರೂ ಅನುಮಾನವೇ ?

ಅರವಿಂದ– ಹೌದು ವನಜ. ನಿನ್ನಾಸ್ತಿಯನ್ನು ದಕ್ಕಿಸಿಕೊಳ್ಳುವ ಆಸೆ ಇದ್ದವರು, ನಿನ್ನನ್ನು ನನ್ನಿಂದ ದೂರ ಮಾಡಬಹುದೆಂಬ ಸಂಶಯ ಕಾಡ್ತಾಯಿದೆ.

ವನಜ– ಅರ್ಥವಾಯ್ತು. ನಮ್ಮಾವನ ಬಗ್ಗೆ ಸಂಶಯವಿದೆ ನಿಮಗೆ. ಇದರ ನಿವಾರಣೆಗಾಗಿ ಅವರೆದುರಲ್ಲೇ ನನ್ನಾಸ್ತಿಯನ್ನು ನಿಮ್ಮೆಸರಿಗೆ ಮಾಡಸ್ತೀನಿ. ಸರಿ ತಾನೆ ?

ಅರವಿಂದ– ಆಸ್ತಿಯ ಆಸೆ ನನಗಿಲ್ಲ. ಅದು ನಿನ್ನೆಸರಿಗಿದ್ರೇನು, ನನ್ನೆಸರಿಗಿದ್ರೇನು ಒಟ್ಟು ನಿನ್ನ ನಂಬಿಕೆ ಸುಳ್ಳಾಗದಿದ್ರೆ ಸಾಕು.

ವನಜ– ಆ ನಂಬಿಕೆಯ ಸತ್ವ ಪರೀಕ್ಷೆಗಾಗಿಯಾದರೂ ನೀವು ನನಗೆ ತಾಳಿ ಕಟ್ಟುವ ಮುನ್ನ ನನ್ನಾಸ್ತಿಗೆ ಒಡೆಯರಾಗ್ಬೇಕು. ಇದರಿಂದ ನಿಮ್ಮ ಸಂಶಯವೂ ನಿವಾರಣೆಯಾಗುತ್ತದೆ, ನನ್ನ ಮನಸ್ಸಿಗೂ ನೆಮ್ಮದಿಯಾಗುತ್ತದೆ. ಒಪ್ಪಿಗೆ ತಾನೆ ?

ಅರವಿಂದ– ವನಜ, ನನಗೆ ಆಸ್ತಿ ಮೇಲೆ ಆಸೆ ಇಲ್ಲ...

ವನಜ– ನನಗ್ಗೊತ್ತಿದೆ. ಆದ್ರೆ ನನ್ನ ನಂಬಿಕೆಯ ನಿರ್ಧಾರಕ್ಕಾದ್ರೂ ನೀವಿದಕ್ಕೆ ಒಪ್ಲೇಬೇಕು.

ಅರವಿಂದ– ಆದ್ರೂ ವನಜ...

ವನಜ– ಒಪ್ಪದಿದ್ರೆ ನನ್ನಾಣೆಯಾಗಿದೆ.

ಅರವಿಂದ– ಛೆ ಛೇ, ಏನ್ಮಾಡ್ಬಿಟ್ಟೆ ವನಜ. ಆಣೆಯಿಟ್ಟು ಇಕ್ಕಟ್ಟಿನ ಪರಿಸ್ಥಿತಿಗೆ ಸಿಕ್ಕಿಸಿಬಿಟ್ಟೆಯಲ್ಲ. ಆಯ್ತು ನಿನ್ನ ಮನಸ್ಸಿನ ಆನಂದಕ್ಕಾಗಿಯಾದ್ರೂ ಒಪ್ಕೊಳ್ತೀನಿ.

ವನಜ– ಈಗ ಮನಸ್ಸು ಹಗುರಾಯ್ತು.

-ಪದ-

(ಪದ ನಡೆಯುವಾಗಲೇ ರಂಗ ಬರುವನು)

ರಂಗ– ಕಟ್! ಫಸ್ಟ್ ಶಾಟ್ ಮುಗಿಯಿತು, ನೆಕ್ಸ್ಟ್ ಶಾಟ್‌ಗೆ ರೆಡಿಯಾಗ್ರಿ.

ಅರವಿಂದ– ಇಷ್ಟು ಬೇಗ ಯಾಕ ಬಂದೆಪಾ ?

ರಂಗ– ವನಜಮ್ಮಾರ, ದೊಡ್ಮಾವ, ಸಣ್ಮಾವರು ಬರ್‍ತಾ ಆದಾರ್ರಿ.

ವನಜ– ಮಾವನವರು ಬಂದ್ರಾ... ?

ಅರವಿಂದ– ವನಜ ನಾನು...

ವನಜ– ಗಾಬರಿಯಾಗ್ಬೇಡಿ. ಈ ವಿಷಯ ಇಂದಲ್ಲ ನಾಳೆ ಅವರಿಗೆ ಗೊತ್ತಾಗ್ಲೇ ಬೇಕು. ಅದಿವತ್ತೇ ಗೊತ್ತಾಗ್ಲಿ.

ರಂಗ– ಇವರ ಮಾತು ಖರೇರಿ. ಲವ್ವಿನ ಕೇಸು ದೌಡ್ ಪಬ್ಲಿಕ್ ಆಗಿ

ಬಿಡ್ಬೇಕು. ಇಲ್ಲಾಂದ್ರ ಮುಂದ ಬಾಳ ಡೇಂಜರು..

(ಭೋಜರಾಜ ವಿಕ್ರಂ ಬರುವರು)

ಭೋಜರಾಜ– ವನಜ...

ವನಜ– ಬನ್ನಿ ಮಾವ, ಇವರು...

ಭೋಜರಾಜ– ಡಾ॥ ಅರವಿಂದಂತ ನನಗೊತ್ತಮ್ಮ.

ಅರವಿಂದ– ಸಾರ್ ನಾನು...

ಭೋಜರಾಜ– ನೀವೇನೂ ಹೇಳ್ಬೇಕಾಗಿಲ್ಲ ಡಾಕ್ಟ್ರೆ. ನನ್ನ ಸೂಕ್ಷ್ಮ ಮೆದುಳು ಎಲ್ಲವನ್ನೂ ಗ್ರಹಿಸುತ್ತದೆ. ನನ್ನನ್ನು ಕಂಡಾಗ ಗೌರವದಿಂದ ಕೈ ಮುಗಿಯುವ ನೀವು, ನನ್ನ ಸೊಸೆಯನ್ನು ಮದುವೆ ಆಗ್ತೀನಿ ಅಂತ ಒಂದ್ಮಾತು ತಿಳಿಸಿದ್ರೆ, ಇಷ್ಟೊತ್ತಿಗೆ ವರ್ಷದ ಮಗು, ನಮಗೆ ಹರ್ಷ ತರಲು ಈ ಭೂಮಿಗೆ ಬಂದಿರ್‍ತಿತ್ತು.

ಅರವಿಂದ– ನೀವು ತುಂಬಾ ತಮಾಷೆಯಾಗಿ ಮಾತಾಡ್ತಿರಿ ಸಾರ್.

ರಂಗ– ಆ ತಮಾಷ್ಯಾಗೆಂಥಾ ಗೂಟೈತಂತ ಈ ಮಗನಿಗೆ ಗೊತ್ತೇ ಇಲ್ಲ.

ವನಜ– ಮಾವ, ನಾನಿವರನ್ನು ಮದುವೆಯಾಗುವ ವಿಷಯ...

ಭೋಜರಾಜ– ನನಗ ವಿಷವಾಗ್ಬಹುದಂತ ತಿಳಿದಿದ್ದಿಯೇನಮ್ಮ ? ಖಂಡಿತ ಇಲ್ಲಮ್ಮ. ಬುದ್ಧಿವಂತೆಯಾದ ನನ್ನ ಸೊಸೆ, ಹದ್ದು ಮೀರುವುದಿಲ್ಲ ವೆಂದು ನನಗೊತ್ತಿದೆಯಮ್ಮ. ನನ್ನ ಕಣ್ಣು ತಪ್ಪಿಸಿ ಬಂದಿದ್ದ ಈ ಮುದ್ದಿನ ಪಾರಿವಾಳ, ಗಿಡುಗನ ಬಾಯಿಗೆ ಸಿಕ್ಕಿರಬೇಕೆಂದು ಗಾಬರಿಯಾಗಿದ್ದೆ. ಆದ್ರದು ನನ್ನಿಚ್ಛೆಯ ಹುಡುಗನ ಬಲೆಯಲ್ಲಿ ಬಿದ್ದಿರುವುದನ್ನು ಕಂಡು, ಹಾಲು ಕುಡಿದಷ್ಟು ಸಂತೋಷವಾಗಿದೆಯಮ್ಮ.

ವಿಕ್ರಂ– ಹೌದು ವನಜ. ನಿನ್ನ ಶ್ರೇಯಸ್ಸೇ ನಮ್ಮ ಶ್ರೇಯಸ್ಸು. ನಗು ವಿನ ತಾರೆಯಿಂದ ಸದಾ ಮಿನುಗುತ್ತಿರಬೇಕು ಈ ನಿನ್ನ ಮುಖ. ಅದೇ ನಮಗೆ ಪರಮ ಸುಖ.

ರಂಗ– ಇನ್ನ ಈ ಮಗ ಶುರುಮಾಡಿದ ಡ್ರೈಲಾಗ. ನನಮಕ್ಳು ಚಂದ ಪ್ರಾಕ್ಟೀಸ್ ಮಾಡಿಕೊಂಡೇ ಬಂದಾರ.

ವಿಕ್ರಂ– ಡ್ಯಾಡಿ, ಸುಮ್ನ್ಯಾಕ ಮಾತು ಬೆಳೆಸಿ, ಕಾಲ ಯಾಕ ದಂಡ ಮಾಡ್ತೀರಿ. ಆದಷ್ಟು ಬೇಗ ಮುಹೂರ್ತ ನೋಡಿ ಮುಗಿಸಿಬಿಡಿ... ಇವರ ಮದುವೆನ. ಮಾತಾಡುವ ವಿಷಯ ಸಾಕಷ್ಟಿದೆ, ಬನ್ನಿ ಹೋಗೋಣ.

ಭೋಜರಾಜ– ಸರಿ, ನಡೀರಿ. (ರಂಗನ ಹೊರತು ಎಲ್ಲರೂ ಹೋಗುವರು) ರಂಗಾ.

ರಂಗ– ಇಲ್ಲೆ ಅದಿನಿ.

ಭೋಜರಾಜ– ಕಾಣುತ್ತದು. ಕಾರು ಸ್ಟಾರ್ಟ್ ಮಾಡು ನಡಿ.

ರಂಗ– ಸಾಧ್ಯಿಲ್ರಿ. ಸಣ್ಣ ಕಾರದು. ಐದು ಜನಕ್ಕ ಇಕ್ಕಟ್ಟಾಗುತ್ತ.

ಭೋಜರಾಜ– ಅದಕ್ಕ ನಾನೇನ್ಮಾಡ್ಲಿ ?

ರಂಗ– ಹವಾ ತಿನಕೊಂತ ನಡಕೊಂಡು ಬರ್ರಿ.

ಭೋಜರಾಜ– ನನಮಗನೆ, ನಾನು ನಡಕೊಂಡು ಬರಬೇಕಾ ?

ರಂಗ– ಜಗಾದ ಅಭಾವ. ಯಾರರ ಒಬ್ರು ನಡೀಬೇಕು.

ಭೋಜರಾಜ– ನೀನೇ ನಡಕೊಂತ ಬಾ ಹಂಗಾರ. (ಹೋಗುವನು)

ರಂಗ– ಹೊಗ ಕತ್ತಿಕಿರುಬ ನನ್ನ ಮಗನೆ ಇವಕಾರಿವರು ಟೈಂ ಬಾಂಬಿದ್ಧಂಗ. ಯಾವಾಗ ಸಿಡಿತಾರಂತ ಹೇಳಾಕ್ಬ ಬರಂಗಿಲ್ಲ. ಈ ಮಕ್ಳ ಹಿಸ್ಟ್ರಿ ಪಾಪ ವನಜಮ್ಮಗೇನೂ ಗೊತ್ತಿಲ್ಲ. ನಾನರ ಹೆಂಗ ತಿಳಸ್ಬೇಕನ್ನುದ್ಧ ತಿಳದಂಗಾಗೇತಿ. (ವಿಚಾರಿಸಿ) ನೋಡೋಣ ದೇವ್ರದಾಸ. (ಹೋಗುವನು)

## ಏಳನೆಯ ದೃಶ್ಯ

### ರಸ್ತಾ

(ಕೊರಳಲ್ಲಿ ಕ್ಯಾಮರ ನೇತು ಹಾಕಿಕೊಂಡ ಜಗ್ಗು ಬರುವನು)

ಜಗ್ಗು– ಅದೃಷ್ಟ ಕೂಡಿ ಬಂದವನು, ಅರೆಕ್ಷಣದಲ್ಲಿ ಅರಸನಾಗಿ ಬಿಡಬಹುದು. ಹೆಸರಿಗೆ ಕಂಪೌಂಡ್ರಾಗಿ, ಅರವಿಂದ ಡಾಕ್ಟಿಗೆ ದಿನಕ್ಕೊಂದು ಹೆಣ್ಣನ್ನು

ಸಪ್ಲೆ ಮಾಡ್ತಿರುವ ನನಗೆ ದುಡ್ಡಿನ ಹೊಳೆಯಲ್ಲಿ ಈಜಾಡುವ ಕಾಲ ಬಂದಿದೆ. ಈ ಕ್ಯಾಮ್ರಾದಲ್ಲಿ ಅರವಿಂದರ ರತಿ ಮನ್ಮಥ ಕ್ರಿಡೆಯನ್ನು ಮಾಡಿಸಿ ಕೊಟ್ರೆ ಇಪ್ಪತ್ತೈದು ಸಾವಿರ ರೂಪಾಯಿ ಕೊಡ್ತಿವಂತ ಭೋಜರಾಜ ಹಾಗವರ ಮಗ ವಿಕ್ರಂ ಹೇಳಿದ್ದಾರೆ. ತಲೆ ಹಿಡುಕತನ ಬೇಸತ್ತಿರುವ ನನಗೆ ಅದರಿಂದ ಬಿಡುಗಡೆ ಹೊಂದಿ ಹೊಸ ಜೀವನ ಪ್ರಾರಂಭಿಸಲು ಇದೇ ಸುಸಂದರ್ಭ ಆದ್ರೆ ಒಂದು ಫೋಟೋಕ್ಕೆ ಅಷ್ಟು ದುಡ್ಡು ಕೊಡಬೇಕಾದ್ರೆ ಒಳಗಿನ ಹಕೀಕತ್ತೇನಿರ್ಬೆಕು? ಏನಿದ್ರೇನು ನನಗ ದುಡ್ಡು ಬಂದ್ರ ಸಾಕು ದೂರದ್ದೂರಿಗೆ ಹಾರಿಬಿಡ್ತೆನಿ ಇವತ್ತೊಂದು ದಿನ ಅರವಿಂದರ ಸಲುವಾಗಿ ಹೆಣ್ಣು ಹುಡುಕ್ಬೇಕಾಗಿದೆ, (ಹೋಗುವನು)

ಮೂರ್ತಿ ಬರುವನು

ಮೂರ್ತಿ–ಆ ಬ್ರಹ್ಮ ನನ್ಸಲುವಾಗಿ ಹೆಣ್ಣರ ಸೃಷ್ಟಿ ಮಾಡ್ಯಾನಿಲ್ಲೋ ಅಂತೀನಿ. ಈ ಮಾರಿ ನೋಡಿದ್ರ ನಾರಿಮಣಿಯರು ದೂರ ಸರಿತಾರಲ್ಲ ಯಾಕ? (ವಿಚಾರಿಸಿ) ಅಂ. ತಿಳಿತು. ಅಪರೂಪದ ಸುಂದರ, ನನ್ನ ಲವ್ ಮಾಡೋ ಯೋಗ್ಯತೆ ತಮಗಿಲ್ಲಂತ ಹಂಗ್ಮಾಡ್ತಾರವರು

(ಲಿಲ್ಲಿ ಒಳಗಿನಿಂದ ಮಾತಾಡುತ್ತಲೇ ಬರುವಳು)

ಲಿಲ್ಲಿ–ಯಾಕಲೇ ನನ ಮಗನೇ ಹೆಣ್ಣಂದ್ರ ಸಂತ್ಯಾಗ ಮಾರೋ ಹಣ್ಣಂತ ತಿಳಿದಿಯೇನು? ಗುರ್ತ ಖೂನಿಲ್ಲದವಳಿಗೆ ಕಣ್ಣು ಹೊಡ್ದು ಮತ್ತ ವ್ಯಾಲ ಬಣ್ಣದ ಮಾತಾಡ್ತಿ ಮಗನ? ಇನ್ನೊಮ್ಮೆ ನನ್ನ ಸುದ್ದಿಗ್ಬಂದ್ರೆ ಎದೆಗೊದ್ದೇನ.

ಮೂರ್ತಿ–ಯಾರೆದಿಗೆ ಒದಿತಿ?

ಲಿಲ್ಲಿ–ಯಾರಿಗೊದಿತೇನಂತ ನನಗ ಗೊತ್ತಿಲ್ಲ.

ಮೂರ್ತಿ–ನೀ ಯಾರಿಗರ ಒದಿ ಮಾರಾಯ್ತಿ. ಆದ್ರ ನಾ ಕಟ್ಟಿದ ಆಶಾ ಗೊಪುರಕ್ಕೆ ಮಾತ್ರ ಒದಿಬೇಡ.ಯಾಕಂದ್ರ ನಾ ಹುಟ್ಟಿದ್ದೆ ನಿನಗಾಗಿ ಬದುಕಿರೊದೆ ನಿನ್ನೊಡ ಲವ್ ಮಾಡುವುದಕ್ಕಾಗಿ.

ಲಿಲ್ಲಿ–ಆದ್ರ ನಾ ಹುಟ್ಟಿದ್ದು ಆ ರಂಗನಿಗಾಗಿ ಬದುಕಿರೋದು ನಿನ್ನಂತವ ಹಲ್ಲು ಮುರಿಯುವುದಕ್ಕಾಗಿ.

ಮೂರ್ತಿ–ಆಯ್ತು ಕಟುಕ ಹೆಣ್ಣೆ ನಿನ್ನೊಡ ಪ್ರೇಮಗೀತೆ ಹಾಡ್ಬೇಕಂತ ಹಾರುಪೇರ್ಸಿಕೊಂಡು ಬಂದಿರ್ತಿನಿ, ನೀನಿಲ್ಲಿ ಹಲ್ಮುರಿತಿನಿ ಮುಸುಡಿ ಜಜ್ಜುತಿನಿ ಅಂತಿ. ಅಷ್ಟಕ್ಕ'ರ ಬಿಡ್ತಿಯೇನು? ಹೊಳ್ಳಿ ಮಳ್ಳಿ ಆ ರಂಗ್ಯಾನ ಹೆಸರು ತೆಗೆದು ಇಲ್ಲದ ಸಂಕಟ ಹಚ್ಚುತಿ. ಅವನೌನ ನಿನಗೇನರ ಮಾಟ ಮಾಡ್ಯಾನೇನು?

ಲಿಲ್ಲಿ– ಹೌದು ನನ್ನ ಮನಸ್ಸು ಅವನ್ನ ಬಿಟ್ಟು ನಿನ್ನಂತ ಲುಚ್ಚ್ಯಾನ ಕಡೆ ಹರಿದಂಗ ಮಾಡ್ಯಾನ.

ಮೂರ್ತಿ– ನಾ ಲುಚ್ಚಾ ಆ ಮಗ ಸಾಚೆ ಅಲ್ಲ? ಲಿಲ್ಲಿ ಆ ಮಗನ್ನ ಗಂಡ್ಸಂತ ತಿಳಿದಿಯೇನು? ಹುಚ್ಚಿ ಅವನ್ನ ಬೆನ್ನುತ್ತಾದು, ಮುದಿ ಎತ್ತು ಹೂಡಿ ದಿಬ್ಬ ಹತ್ತನ್ನಾದು ಎರಡೂ ಒಂದ.

ಲಿಲ್ಲಿ–ಮುದಿ ಎತ್ತು ಅವನಲ್ಲ ನೀನು ಅವನ ತಾಕತ್ತು ನಿನಿಗ್ಯಾವ ಕಾಲಕ್ಕೆ ಬರ್ಬೇಕೋ? ನಿನ್ನಂಗ ಕಂಡ ಕಂಡಲ್ಲಿ ಬೇಲಿ ಹಾರಿ, ಮಾರಿ ಸೊರಗಿಸಿ ಕೊಂಡಿಲ್ಲವನು. ಹೆಣ್ಣಿನ ಬಗ್ಗೆ ಭಯ ಭಕ್ತಿ ತೋರಿ ತಾಜಾತನ ಉಳಿಸಿಕೊಂಡು ಬಂದಿರೋ ಭೂಪತಿ ಗಂಡವನು

ಮೂರ್ತಿ–ಪೂರಾ ತಿದ್ದೇ ಹೊಗ್ಬಿಟ್ಟಾನ ಈಗ ಇಕ್ಕಿನ್ನ ಯಾವ ನಮೂನಿ ತಲಿ ಕೆಡಸ್ಯಾನಲ್ಲ ಅಂತೀನಿ. ಮಾತೆತ್ತಿದ್ರ ಆ ಮಗನ ಹೆಸರು ತಗಿತಾಳಲ್ಲ. ಇಕಿ ಮೈಯಾಗೆಲ್ಲರ ಮಿಷಿನ ಕುಂದರ್ಸಿ ಕಳಿಸಿರಬೇಕು.

ಲಿಲ್ಲಿ–ಹೌದು ನನ್ನ ಹೃದಯದಾಗ ಪ್ರೇಮ ಅನ್ನೋ ಮಿಷಿನ್ ಕುಂದುರ್ಸಿದ್ದಾನೆ ನಿನ್ನಂತ ಕಾಮದ ಮಿಷಿನ್ನಿಗಿಲ್ಲಿ ಜಗಾನೇ ಇಲ್ಲ.

ಮೂರ್ತಿ– ನನ್ನೇನೂ ಕಸಕ್ಕಿಂತ ಕಡಿ ಮಾಡಿ ಮಾತಾಡ್ತಿಯಲ್ಲ.? ಈ ವ್ಯಕ್ತಿಯಾರು? ಕಿಮ್ಮತ್ತೆಷ್ಟೈತಿ? ಮನಸ್ಸು ಹೂವ್ರೋ, ಹಾವ್ರೋ ನಿಷ್ಠೂರವಾಗಿ ಮಾತಾಡಿದ್ರೆ ಈ ಪ್ರೇಮಿಗೆ ಎಂತ ಆಘಾತಾಗುತ್ತ? ಆಘಾತಾತಂತ್ರ ಈ ಪ್ರಾಣಿ ಬದುಕುತ್ತೋ ಇಲ್ಲೋ? ಸ್ವಲ್ಪರ ವಿಚಾರ ಮಾಡುಂಗಿಲ್ಲೇನು? ನಿನಗೇನರ ನನ್ನ ಗಂಡಸ್ತನದ ಬಗ್ಗೆ ಸಂಶ್ಯಾ ಐತೆನು? ಹಂಗಿದ್ರೆ ಸ್ಯಾಂಪಲ್ಲಿಗರ ಮದಿವ್ಯಾಗಿ ನೋಡು

ಲಿಲ್ಲಿ–ಸ್ಯಾಂಪಲ್ಲಿಗೆ ಮದಿವ್ಯಾಗ್ಬೇಕೇನು? (ಒಳ ಹರಿಸುತ್ತಾ) ಬಾ ಹಂಗಾರ.

ಮೂರ್ತಿ– ಎದಕ ಕಟ್ಟಿಸಿಕೊಳ್ಳಾಕ? ಬ್ಯಾಡ ಅವತ್ತು ಕಟಿದುದೆ ರಗಡಾಗೇತಿ. ಮತ್ತೀಗ ಮಳ್ಳ ಮಾಡಿ ಹತ್ರಕ್ಕ ಕರೆದ ಬಂಗಾರದಂತ ನನ್ನ ಮೂಗಿಗೆ ಬಾಯ್ಯಾಕಿ ಕಡದ್ರ ನನ್ನ ಗತಿ ಏನಾಗುತ್ತ?

(ರಂಗ ಬರುವನು)

ರಂಗ–ಕ್ಯಾರೆ ದೋಸ್ತ್? ಏನ ನಡೆಸಿಯಲ್ಲ. ಲಿಲ್ಲಿ ಕೂಡ ಲಲ್ಲೆನ?

ಮೂರ್ತಿ–ಬಂದ್ಯಾ ಬಾ ನೀನೊಬ್ಬಾಂವಕ ಏಕ್ಕಡ್ಡಿ ಇವಳೌಳು ಇಕ್ಯೋದು ನಮೂನಿ ಕಾಡ್ತಾಳ ನಿನೊಂದು ನಮೂನಿ ಕಾಡ್ತಿ. ದೊಡ್ಡ ಕರ್ಮಾತಲೆ ನನ್ನ ಬಾಳೆವು ನಿನ್ನ ಕಾಲಾನವು ಚಪ್ಲಿನರ ಕೊಡಲೆ ನನ್ನ ಹಣೆಬರಕ್ಕೆ ನಾನು ಹೊಡ್ಕೊಂತಿನಿ

ರಂಗ– ದಯವಿಟ್ಟು ಕ್ಷಮಿಸು ಮಿತ್ರ. ನನ್ನ ಚಪ್ಲಿ ಹೊಸವದಾವು ಹೊಡ್ಕೊತೀನಿ ಅಂತ ಮೆಟಿಗೊಂದು ಹೋದ್ರ ನಾಯೇನು ಮಾಡ್ಲಿ?

ಮೂರ್ತಿ–ಅಂದ್ರ ಹಳೆವಿದ್ದಿದ್ರೆ...?

ರಂಗ–ನಿನ್ನ ಕೈಗ ಸೈತ ಕೊಡ್ತಿದ್ದಿಲ್ಲ. ಸಾಕನ್ನೋತನ ನಾನ್ನ ಕಟಿತ್ತಿದ್ದೆ

ಮೂರ್ತಿ–ಇವರೌರ ನನ್ನ ಕಟಿಯಾಕ ತುದಿಗಾಲಾಗ ನಿಂತಾರಿಬ್ರೂ

ರಂಗ–ಲಿಲ್ಲಿ ಇವನ್ಯಾಕ ಗಾಂಜಾ ಸೇರಿದವರಂಗ ಮಾಡ್ತದಾನ? ನೀಯೇನರ ಮಾಡ್ದೇನು?

ಲಿಲ್ಲಿ–ನಾಯೇನು ಮಾಡಾಕ್ಹೋಗ್ಲಿ? ಇದಕ್ಕ ಹೆಣ್ಣಿನ ಹುಚ್ಚು ತಲಿಗೇರಿ ಬಿಟ್ಟಾತಿ ಒಂದಕತಿ ಗಂಟು ಬಿದ್ದಾನ ಲವ್ ಮಾಡಂತ.

ರಂಗ– ತಪ್ಪೇನೈತಿ ನೀ ನನಗ ಗಂಟು ಬಿದ್ದಂಗ ಇವನು ನಿನಗ ಗಂಟು ಬಿದ್ದಾನ. ಅಲ್ಲೆ ಅನಾದಿ ನಿನಗ ಸ್ವಲ್ಪರ ಬುದ್ಧೈತೆನು?

ಲಿಲ್ಲಿ–ಯಾಕ?

ರಂಗ–ನನಗೆ ಗಂಡು ಬೇಕಾಗಿತಿ ಈ ಮಗನಿಗಂತೂ ಅರ್ಜಂಟ್ ಹೆಣ್ಣು ಬೇಕಾಗಿತಿ ಇಬ್ಬರದ ಗುಂಗು ಒಂದ ಐತೆಂದಾಗ ಜೋಡಿ ಬರೋಬ್ಬ ಆಗದಿಲ್ಲೆನು

ಮೂರ್ತಿ–ಹೆಳಲೇ ರಂಗ. ಇಕಿ ಸಲುವಾಗಿ ನಿದ್ದಿಲ್ಲದಂಗಾಗೇತಿ ಅಂತ ತಿಳಿಸಿ ಹೇಳಲೇ

ರಂಗ– ನೋಡು, ನಿನ್ನ ಸಲುವಾಗಿ ಎಷ್ಟು ತಲಿ ಕೆಡಿಸಿಕೊಂಡಾನ. ನೀ ಹೂಂ ಅಂದ್ರೆ, ತಾಳಿ ಸೈತ ಕಟ್ಟೂ ವಿಚಾರ ಮಾಡುದಿಲ್ಲ.

ಮೂರ್ತಿ– ಮೊದಲು ಮಕ್ಕಳಡಿಯಾಕ್ಹಚ್ಚತೇನಿ. ಯಾಕ ? ನನ್ನ ಗಂಡಸ್ತನ ನಿನಗ ಖಾತ್ರಿ ಆಗ್ಬೇಕಲ್ಲ.

ರಂಗ– ಎಷ್ಟು ಘಾಸ್ಟ ಆದಾನ ನೋಡು ಮಗ. ಇವನ ಅವಸ್ರ ನೋಡಿದ್ರೆ, ಮೂರು ತಿಂಗ್ಳಿಗೆ ಒಂದ್ರಂಗ, ವರ್ಷಕ್ಕ ನಾಕ ಮಕ್ಕನ್ನ ಹುಟ್ಟಸ್ತಾನ ಕಾಣತ್ತ.

ಮೂರ್ತಿ– ಒಂದ್ಹ ಛಾನ್ಸ್ ಸಿಗಲಲೇ ರಂಗ್ಯಾ...

ರಂಗ– ಮೂರ್ಹ ತಿಂಗ್ಳಿಗೆ ನಾಕೂ ಬೇಕಾರ ಹುಟ್ಟಸ್ತಾನ. ಒಂದು ನಮೂನಿ ಫಾರಂ ಕೋಳಿ ತತ್ತಿ ಕಾವು ಕೊಡೋ ಕರೆಂಟಿದ್ದಂಗ ಈ ಮಗ. ಇಂಥಾ ಹುರುಪಿನ ಮನುಷ್ಯಾನ್ನ ಬಿಟ್ಟಿದಿ. ಚಳಿಗಾಲಕ್ಕೊಂದ್ಸಲ ಗಂಡ್ಸಾಗೊ ನನ್ನ ಬೆನ್ನತ್ತಿದಿ. ಇನ್ನರ ನನ್ನ ಸುದ್ದಿ ಬಿಡು.

ಮೂರ್ತಿ– ಸ್ಯಾಪಲ್ಲಿಗುಳಿದಿರೋ ಈ ಮನ್ಮಥ ರಾಜನ್ನಿ ಲವ್ ಮಾಡು.

ಲಿಲ್ಲಿ– ನಿನ್ನ ಲವ್ ಮಾಡುದಿಲ್ಲ, ಹತ್ರ ಬಂದ್ರ ಮೈ ನೋವು ಮಾಡ್ತೀನಿ.

ಮೂರ್ತಿ– ನೋಡಲೇ ರಂಗ್ಯಾ ಹೆಂಗ್ ಮಾತಾಡ್ತಾಳೀಕಿ.

ರಂಗ– ಅಕಿಗೆ ನಿನ್ನ ಮ್ಯಾಲ ಪ್ರೀತಿ ಜಾಸ್ತಿ ಆಗಿ, ತಡಕೊಳ್ಳಾಕ ಆಗದಿದ್ದಕ್ಕ, ಈ ನಮೂನಿ ಸಿಟ್ಟಿಲೆ ಮಾತಾಡ್ತಾಳ.

ಮೂರ್ತಿ– ನೀನೂ ಮಗ ನನ್ನ ಹೆಣ ಹೊರಾಕ ಬಂದೀದಿ. ಅಲ್ಲಲೇ ಪ್ರೀತ್ಯಾವುದು, ಸಿಟ್ಯಾವುದು ತಿಳಿಯದಿಲ್ಲ ನನಗ? ನನ್ನ ಮ್ಯಾಲ ಪ್ರೀತಿ ಹೆಚ್ಚಾಗಿಲ್ಲಿಕಿಗೆ, ಯಾವಾಗ ನನ್ನೊದಿಗೆ ಒದ್ದೇನನ್ನೋ ಕಿಚ್ಚು ಹೆಚ್ಚಾಗೇತಿ.

ರಂಗ– ಇಕಿ..., ನಿನ್ನೊ ದಿತಾಳ? ಅಷ್ಟು ದಮ್ಮ ತೆಸಿಕಿಗೆ? ಹಂಗಾರ್ಲೇಗ

ಒದಿತಾಳ ಒದಿಲಿ ನಾನೂ ನೋಡೆ ಬಿಡ್ತೀನಿ.ಯೇ ಲಿಲ್ಲಿ ಒದಿತಿಯಾ? ಒದಿಯಾ ಹೆಂಗ ಒದಿತಿ ನೋಡ್ತಾನ?

ಮೂರ್ತಿ– ರಂಗ್ಯಾ, ನಿನ್ನ ಪಾದ ಜೋಡ್ಸಲೆ ನಮಸ್ಕಾರ ಮಾಡ್ತೀನಿ. ಅಲಾ ಮಗನ, ನೀನೂ ಒಳ ಮುಚುಗದಿಯಾಲೆ ಇಕಿ ಕೈಯಾಗ ನನ್ನೊದಸಾಕ ಎಷ್ಟರ ಪ್ರಯತ್ನ ನಡಸಿಯಲ್ಲಲೇ.

ಲಿಲ್ಲಿ– ಸುಮ್ಮನ ಯಾಕ ಒದ್ದಾಡ್ತಿಯೋ ಮೂರ್ತಿ? ಮುತ್ತಿನಂತ ಮಾತ್ಹೇಳ್ತೀನಿ ಕೇಳು. ಹೆಣ್ಣಿಗೆ ಬ್ಯಾಡ ಅನಿಸಿದ್ದು ಅಮೃತ ಇದ್ರೂ ಅದವ ಳಿಗೆ ವಿಷ ಇದ್ದಂಗ. ಬೇಕನಿಸಿದ್ದು ಕಸ ಇದ್ರೂ, ಅದಕಿಗೆ ಸಿಹಿ ರಸ ಇದ್ದಂಗ.

ಮೂರ್ತಿ– ನಾನೀಗ ವಿಷ ಇದ್ದಂಗ?

ಲಿಲ್ಲಿ– ತಿಪ್ಪಿಗೆ ಚಲ್ಲಿದ ಕಸ ಇದ್ದಂಗ.

ಮೂರ್ತಿ– ಶಿವ, ಶಿವಾ, ನಾಚಿಕಿ, ಮಾನ, ಮರ್ಯಾದಿದ್ದ ಗಂಡ್ಸಾ ಗಿದ್ರೆ, ಇಲ್ಲೆ ಉರ್ಲು ಹಾಕ್ಕೊಂತಿದ್ದ.

ಲಿಲ್ಲಿ– ಮತ್ತ ನೀನು?

ಮೂರ್ತಿ– ಈ ಮೂರೂ ಬಿಟ್ಟೇ ನಿನ್ನ ಬೆನ್ನಹತ್ತೀನಿ. ಅಂದಾಗ ಸಾಯೂ ವಿಚಾರ ದೂರುಳಿತು.ಮಗನ ರಂಗ್ಯಾ.ನಮ್ಮ ಪ್ರೇಮಕ್ಕ ನೀನೇ ಅಡ್ಡ ಗ್ಲೋಡೆ. ನೀನಾಗಿ ನೀನ ಇಕಿ ನನ್ನ ಪ್ರೀತಿ ಮಾಡುವಂಗ ಮಾಡಿದಿ ಛಲೋ ಆತು. ಇಲ್ಲಾಂದ್ರೆ ನಿನ್ನೆಸ್ಟರ್ಲೆ ಚೀಟಿ ಬರ್ದಿಟ್ಟು ಹೊಳಿ ಹಾರ್ತೀನಿ ಮಗನ, ಹುಷಾರಿ. (ಹೋಗುವನು)

ರಂಗ– ನೋಡು, ನಿನ್ನ ಸಲುವಾಗಿ ಹೊಳಿ ಹಾರಿ, ನನ್ನ ಜೈಲಿಗ ಕಳ್ಸಾಕ ತಯಾರಾದ ಮಗ. ಅದಕ ಸುಮ್ಮನ ಅವನ್ನ ಮದಿವ್ಯಾಗು ನಾನ ಉಳಿತಿನಿ, ನಿನಗೂ ಪುಣ್ಯ ಬರುತ್ತ.

ಲಿಲ್ಲಿ– ನನಗ ಪಾಪ ಬಂದ್ರೂ ಚಿಂತಿಲ್ಲ. ನಾನ್ನ ಹೊಳಿ ಹಾರಿ ನಿನ ಕಷ್ಟ ತಪ್ಪಸ್ತೇನಿ. ಆಸೆ ಪಟ್ಟದ್ದು ದಕ್ಕದಿದ್ದ ಮ್ಯಾಲ ಯಾಕ ಬದುಕಿರ್ಬೇಕು

ರಂಗ– ಅದಕ ಸತ್ತು ದವ್ವ್ಯಾಗರ ನನ್ನ ಕಾಡಬೇಕಂತ ಮಾಡಿಯೇನು ಲಿಲ್ಲಿ ಈ ಜೀವನದಾಗ, ಮನುಷ್ಯಾರಾಗಿ ಹುಟ್ಟಿದಮ್ಯಾಲ "ಮದುವೆ" ನೆಪ

ದಾಗ ಗಂಡು–ಹೆಣ್ಣಿನ ಬೆಸುಗ್ಯಾಗುತ್ತ, ಆದ್ರ ಈ ಮದುವೆ ಅನ್ನೊ ಪವಿತ್ರ ಶಬ್ದ. ಇವತ್ತಿನ ದಿನ. "ಮೊದಲ ರಾತ್ರಿ"ಗಷ್ಟ ಬಳಕ್ಯಾಗಾದು ಜಾಸ್ತಿಯಾ ಗೇತಿ ಸಾಯಂತನ ಜಂಟಿಯಾಗಿರ್ಬೇಕಾದ ಸಂಸಾರ, ನಮ್ಮ ಸರ್ಕಾರದ ಹೆಂಡ. ಸರಾಯಿ ಪ್ರಭಾವದಿಂದ್ಲೋ, ಗಂಡ, ಪರಸ್ತ್ರೀ ವ್ಯಾಮೋಹಕ್ಕ ತುತ್ತಾಗ ದ್ರಿಂದ್ಲೊ, ಹೆಂಡ್ತಿ, ಗಂಡನ್ನ ಅರ್ಥ ಮಾಡ್ಕೋಂಡು ಬದುಕಾಕ ಆಗದ್ರಿಂದ್ಲೊ ಮೂರ ತಿಂಗ್ಳಿಗೆ ಮೂರಾಬಟ್ಟಿ ಆಗಿಬಿಡುತ್ತ. ಕಾರಣ, ಗಂಡು, ಹೆಣ್ಣು ಒಬ್ರ ಮನಸ್ನ ಒಬ್ರು ಅರ್ಥ ಮಾಡಿಕೊಂಡು, ಆವ್ಯಾಲ ಮದಿವ್ಯಾದ್ರ, ಮುಂದ ಸಂಸಾರ ಸರಳ ನಡಿಯುತ್ತ.

ಲಿಲ್ಲಿ– ನಿನ್ನ ಮನಸ್ಸ ನಾ ಪೂರಾ ಅರ್ಥ ಮಾಡಿಕೊಂಡೇನಿ. ಸುಮ್ನ ತಡಮಾಡಿ, ಸೀಜನ್ ಹಾಳು ಮಾಡಿಕೊ ಬ್ಯಾಡ. ದೌಡು ನನ್ನ ಮದಿವ್ಯಾಗಿ ಬಿಡು.

ರಂಗ– ಈ ಆವಸ್ರಕ್ಕ ಬೀಳ್ಬ್ಯಾರ್ದು ಅಂತಾನ. ಇಷ್ಟತ್ತನ ಶಂಖ ಹೊಡ ದದ್ದು. ಇನ್ನಷ್ಟು ವಿಚಾರ ಮಾಡಿ ನೋಡು. ಯಾಕಂದ್ರ ಅವಸರವೇ "ಅಪ ಘಾತಕ್ಕೆ ಕಾರಣ." (ಹೋಗುವನು)

ಲಿಲ್ಲಿ–ಇವನ್ಯಾವ ಸೀಮಿ ಗಂಡ್ಸು ಗಂಟು ಬಿದ್ದ ಅಂತೀನಿ ನಾನು ನೋಡ ತೆನಿ ನೋಡಿ ಒಬ್ಬಾವನ ಸಿಕ್ಕಾಗ ಬಲತ್ಕಾರ ಮ್ಹಾಡಿಬಿಡ್ತೀನಿ. (ಹೋಗುವಳು)

## ಎಂಟನೆಯ ದೃಶ್ಯ

### ಅರವಿಂದನ ಆಸ್ಪತ್ರೆ

(ಅರವಿಂದ ಸೀಗರೇಟ ಸೇದುತ್ತಾ ಶತಪಥ ತಿರುಗುತ್ತಿರುವನು)

ಅರವಿಂದ– ರಸಿಕತೆ ಗಂಧ ಗೊತ್ತಿಲ್ಲದವನಿಗೆ ಸರಸದ ವಿಷಯ ಹೇಳ್ಬ್ಯಾರ್ದು ಹಸಿವಾದವನ ಸಂಕಟ ಹೊಟ್ಟೆ ತುಂಬಿದವನಿಗೇನು ಗೊತ್ತಾಗುತ್ತೆ ನನ್ನ ವಿರಹ ವೇದನೆಗೆ ಹೆಣ್ಣುಗಳನ್ನು ಒದಗಿಸಲೆಂದೇ ಆ ಜಗ್ಗುನನ್ನು ಗೊತ್ತು ಮಾಡಿದ್ದೇನೆ ಆದರೆ ಆ ಅವಿವೇಕಿಗೆ ನನ್ನಾತುರದ ಅರಿವೇ ಇದ್ದಂತೆ

ಕಾಣುವುದಿಲ್ಲ.ಎಲ್ಲಿ ಸಾರಾಯಿ ಕುಡಿದು ಸಾಲಿಕಟ್ಟೆಗೆ ಶರಣು ಹೋಗಿದ್ದಾನೋ ಏನೋ?

(ಜಗ್ಗು ಬರುವನು)

ಜಗ್ಗು–ನಮಸ್ಕಾರ ಸಾರ್

ಅರವಿಂದ–ಅರೆ ಜಗ್ಗು ಯಾವಾಗ್ಬಂದೆ?

ಜಗ್ಗು–ಚುರುಕು ಬುದ್ಧಿಯು ನನ್ನನ್ನು ಹರಕು ಮುದ್ದಿ ತಿಂದು ಸಿದ್ಧಿ ಮಾಡೋನು ಅಂತಿದ್ರೆಲ್ಲಾ ಆವಾಗ್ಲೆ ಬಂದೆ

ಅರವಿಂದ–ಸಿದ್ಧಿ ಮಾಡದವನಾದ್ರೆ ಇಷ್ಟೊತ್ತಿಗೆ ನಿನ್ನ ಚುರುಕು ಬುದ್ಧಿಯು ಪ್ರದರ್ಶನವಾಗಬೇಕಿತ್ತು.

ಜಗ್ಗು–ಸಾಹೇಬ್ರು ಕುಡುಕುಗು ತಲೆ ಹಿಡುಕುಗು ಬಾಳ ವ್ಯತ್ಯಾಸೈತಿ. ಕುಡುಕುಗ ಸರಾಯಿ ಕುಡಿಯಾಕ ದುಡ್ಡು ಹುಟ್ಸೊ ಯೋಚಿನ್ಯಾದ್ರ ತಲೆ ಹಿಡುಕುಗ ತಾ ಸನ್ಯಾಸಾದ್ರೂ ಚಿಂತಿಲ್ಲ, ತನ್ನ ಗಿರಾಕಿಗೆ ಹೆಣ್ಣೂದಗಿಸ್ಬೇಕನ್ನೂ ವಿಚಾರಿರ್‍ತ್ತಾತಿ

ಅರವಿಂದ– ಆದ್ರ ಸಧ್ಯ ಹೆಣ್ಣು ರೆಡ್ಡಿ ಅಪ್ಪು?

ಜಗ್ಗು–ಎಸ್ ಸರ್ ಇವತ್ತೊಂದು ಹೊಸ ಮಾಲು ನನ್ನ ಮೋಸದ ಜಾಲಕ್ಕೆ ಸಿಕ್ಕು ಬಿದ್ದಿದೆ.

ಅರವಿಂದ–ಹೌದು ಎಲ್ಲಿದ್ದಾಳೆ ಬೇಗ ಕರಿಯೊ,

ಜಗ್ಗು–ತಡಿರಿ ಅವಸ್ರ ಮಾಡಬ್ಯಾಡ್ರಿ ಯಾಕಂದ್ರ ಆ ಹೆಣ್ಣು ಮುಗಳು ಮೂರು ತಿಂಗಳ ಗರ್ಭಿಣಿ ಅದಾಳೆ.

ಅರವಿಂದ–ಆರು ತಿಂಗಳ ಗರ್ಭಿಣಿಯಿರಲಿ ನನಗರ್ಜೆಂಟಿದೆ ಮೊದ್ಲು ಕರಿ ಅಕಿನ.

ಜಗ್ಗು–ಹಡಿಯೋದು ಒಂದ ತಾಸೈತಂದ್ರು ಬಿಡೋಪೈಕಿಲ್ಲಂತ ನನ ಗೊತ್ರಿ ಆದ್ರ ನಾ ಹೇಳೋ ವಿಷಯ ಪೂರಾ ಕೇಳ್ರಿ. ಆ ಹೆಣ್ಮಗಳ ಹೊಟ್ಟಿ ತೊಳ್ಸಾಕ ದವಾಖಾನಿ ಹುಡುಕ್ತಾ ಇದ್ಲು ನಾನ್ಕೈಡಿಯಾ ಮಾಡಿ ಲೇಡಿ

ಡಾಕ್ಟ್ರಿರೊ ನರ್ಸಿಂಗ ಹೊಂಗೆ ಕರ್‍ಕೊಂಡ್ಹೋಕ್ತಿನಂತ ಇಲ್ಲಿಗೆ ಕರ್‍ಕೊಂಡು ಬಂದಿನಿ.

ಅರವಿಂದ–ಮುಂದೀಗ ನಿನ್ನ ವಿಚಾರೇನು?

ಜಗ್ಗು–ನನ್ನ ವಿಚಾರ ತಗಂದೇನ್ಮಾಡ್ತೀರಿ? ನಿಮ್ಮವಿಚಾರೇನೈತೊ ಅದನ್ಮಾಡ್ರಿ ಅದಕ್ಕಿಂತ ಮುದ್ಲು ನೀವು ಸ್ವಲ್ಪ ಮರೆಯಾಗ್ರಿ ನಾ ಆಕಿನ ಡಾಕ್ಟ್ರ ಪರ್ಮಿಷನ್ ತರ್‍ತೀನಂತ ಹೊರಗ ಕೂಂದರ್‍ಸಿ ಬಂದೀನಿ ಸದ್ಯ ಕರ್‍ಕೊಂಡ್ಬಂದು ಒಳಗ ಕಳಸ್ತೇನಿ ಆವ್ಯಾಲ ನೀವು ಹೊಗುವಂತ್ರಿ.

ಅರವಿಂದ–ಸರಿ ಹಾಗಾದ್ರೆ ನಾನಿಲ್ಲೆ ಮರೆಯಾಗಿರ್‍ತಿನಿ ಬೇಗ ಒಳಗಡೆ ಕಳ್ಸಕಿನ (ಒಳಗಡೆ ಹೋಗುವನು)

ಜಗ್ಗು–ಬೇದಿಗ್ಬಂದ ನಾಯ್ಯಾಗಿದಾನ ಮಗ ಅದು ಖರೇನ ಇಂತವರ ಅವಸ್ರ ನನ್ನಂತವ್ರಿಗೆ ಆಸ್ರಾಗುತ್ತ. ಇವತ್ತು ಈ ಮಗನ ಸರಸಾನ ಕ್ಯಾಮ್ರಾ ದಾಗ ಮೂಡುಸ್ತೀನಿ ಇಪ್ಪತ್ತೈದು ಸಾವಿರ ಹೊಡಿತಿನಿ (ಹೊರಗೆ ವಿಶಾಲಳನ್ನು ಕರೆತಂದು) ಬರ್‍ರಿ ಡಾಕ್ಟ್ರಮ್ಮಾರು ಸಧ್ಯ ಬರ್‍ತಾರೆ ಅಲ್ಲೀವರ್‍ಗೂ ನೀವು ಒಳಗ್ಹೋಗಿ ರೆಸ್ಟ್ ತಗೋಳ್ರಿ.

ವಿಶಾಲ–ಬೇಗ ಕಳಿಸಿಕೊಡಣ್ಣಾ ಪುಣ್ಯ ಬರುತ್ತ (ಒಳಗ್ಹೋಗುವಳು)

ಜಗ್ಗು–ಸಣ್ಣತನ ಇರೋ ನನಗ್ಯಾಕ ಅಣ್ಣ ಅಂತ ಕರಿತಿಯಾ? ನಿನ್ನ ಬಣ್ಣ ಕೆಡ್ಸಾಕ ಒಳಗೊಬ್ಬಣ್ಣ ಹಾತೊರಿತಿದಾನೆ.

ಅರವಿಂದ–(ಬರುತ್ತಾ) ಜಗ್ಗು...

ಜಗ್ಗು–ಒಳಗ ಕಳಿಸೇನಿ ನಿಮ್ಮ ಕೆಲ್ಸಕ್ಕ ರೇಡಿಯಾಗ್ರಿ ಆದ್ರ ಒಮ್ಮಿಗೆ ಅವಸ್ರಕ್ಬೀಳ್ಬ್ಯಾಡ್ರಿ ರಮಿಸಿ ಸಾಧಿಸ್ರಿ,

ಅರವಿಂದ–ಇಂಥಾ ವಿಷಯದಲ್ಲಿ ನನಗಿರೊ ಅನುಭವ ನಿನಗೇನು ಗೊತ್ತೊ ಮಂಕೆ? ನೋಡ್ತಾಯಿರು ಈ ಹೆಣ್ಣನ್ನು ಯಾವ ರೀತಿ ಮಣಿಸ್ತಿನಿ ಅಂತ (ಒಳಗ್ಹೋಗುವನು)

ಜಗ್ಗು–ನೀವು ಆ ಹೆಣ್ಣನ್ನು ಮಣಸ್ರಿ, ನಾನು ನನ್ನ ಕೆಲ್ಸಕ್ಕ ಅಣಿಯಾಗ್ತೀನಿ. (ಹಿಂಬಾಲಿಸುವನು)

ವಿಶಾಲ–(ಒಳಗಿನಿಂದ) ಯಾರು? ನೀವು

ಅರವಿಂದ–(ಒಳಗಿನಿಂದ) ಅವ್ಮಾಳ್ಹೇಳ್ತಿನಿ..

ವಿಶಾಲ–(ಒಳಗಿನಿಂದ) ಬಿಡಿ ನನ್ನ.

ಅರವಿಂದ–(ಒಳಗಿನಿಂದ) ಬಿಡುವುದಕ್ಕಲ್ಲ ಹಿಡಿದಿರೋದು.

ವಿಶಾಲ–(ಒಳಗಿನಿಂದ) ಯಾರಾದ್ರೂ ಕಾಪಾಡಿ ಬಿಡೋ ನನ್ನ...

ಅವ್ಮಾ (ಚೀರುವಳು) (ಜಗ್ಗು ಓಡಿ ಹೋಗುವನು)

–ಹಿನ್ನೆಲೆ–

## ಒಂಭತ್ತನೆಯ ದೃಶ್ಯ

### ಜಂಗಲ್ ರಸ್ತಾ

(ಹಿನ್ನೆಲೆ ಮುಗಿದು ವಿಶಾಲ ಹೋಗುವಾಗ ಅರವಿಂದ ಬಂದು)

ಅರವಿಂದ– ನಿಲ್ಲು.

ವಿಶಾಲ– ಯಾರು?... ಓಹೋ ದೈವ ಸ್ವರೂಪ ವೈದ್ಯರಿಗೆ ಸುಸ್ವಾಗತ. ಯಾಕ ಡಾಕ್ಟ್ರೆ ಮತ್ತೆ ನನ್ನನ್ನು ಬೆಂಬತ್ತಿ ಬಂದಿದ್ದೀರಲ್ಲ? ಇನ್ನೂ..., ನಿಮ್ಮಾಸೆ, ತೀರಿಲ್ಲವೆ?

ಅರವಿಂದ– ಆ ಭರವಸೆ ಖಂಡಿತ ನನಗಿಷ್ಟೂ ಮೂಡಿಲ್ಲ. ಇದುವರೆಗೆ ನಾನೆಷ್ಟೋ ಹೆಣ್ಣುಗಳೊಂದಿಗೆ ಸರಸವಾಡಿದ್ದೇನೆ.. ಆದ್ರೆ, ಅವರೆಲ್ಲ ಆ ಗಳಿಗೆಗೇ ಪಳಸಿದ ಅನ್ನವಾಗಿ ಬಿಟ್ಟರು. ನೀನು ಮಾತ್ರ......

ವಿಶಾಲ– ಬಿಸಿ ಅಡಿಗೆಯೆಂದು ಭಾವಿಸಿರುವಿಯಲ್ಲವೆ? ಅದೂ ನಿಜಾನೆ. ಕದ್ದು ತಿನ್ನುವ ಕಳ್ಳನಿಗೆ ಬಾಯಿ ರುಚಿಯಾದರೆ ಸಾಕು, ತನ್ನ ಸಾಹಸಕ್ಕೆ ತಾನೇ ಬೆನ್ನು ಚಪ್ಪರಿಸಿಕೊಳ್ಳುತ್ತಾನೆ. ಆದರೆ ಕತ್ತಲಲ್ಲಿ ತಾನು ಕದ್ದು ತಿಂದದ್ದು, ನಾಯಿ ತಿಂದು ಹೆಚ್ಚಾಗಿ ವಾಂತಿ ಮಾಡಿಕೊಂಡ ಹೊಲಸು ಅನ್ನುವುದು, ಆತುರದಲ್ಲಿ ಆ ಕಳ್ಳನಿಗೆ ಗೊತ್ತಾಗುವುದಿಲ್ಲ.

ಅರವಿಂದ– ಹುಚ್ಚಿ, ಹಸಿವಾಗಿ ಉಸಿರಾಡುವುದಕ್ಕೂ ಕಷ್ಟವಾದಾಗ ಬಿಸಿ ಅಡಿಗೆಯನ್ನೇ ಅರಸುವ ಅವಿವೇಕಿ ನಾನಲ್ಲ. ಆ ಸಮಯದಲ್ಲಿ ಹಸಿವೆ ಇಂಗಿಸಲು ಸಿಗುವ ಅಡಿಗೆ ತಂಗಳಲ್ಲ, ಹಳಸಿದನ್ನವಿದ್ದರೂ, ತಿಂದು, ಉಸಿರು ಉಳಿಸಿಕೊಳ್ಳುವುದೇ ನನ್ನ ರೀತಿ, ನೀತಿ.

ವಿಶಾಲ– ಭಲೇ ಡಾಕ್ಟ್ರೆ. ಮನುಷ್ಯರ ಪಾಲಿಗೆ ಮತ್ತೊಬ್ಬ ಬ್ರಹ್ಮನಾಗ ಬೇಕಾದ ನೀವೇ ಎಂಜಲು ತಿನ್ನುವ ನಾಯಿಗಳಾದ್ರೆ, ತಂದೆವೇ ಮಗಳ ದೇಹ ವನ್ನು ಬಳಸಿಕೊಂಡು, ತನ್ನ ಕಾಮದಾಹ ತೀರಿಸಿಕೋಡಂತಾಗುವುದಿಲ್ಲವೇ? ಸುಶಿಕ್ಷಿತರಾಗಿ ಸುವಿಚಾರ ಮಾಡಬೇಕಾದ ಗಂಡು ಕುಲವೆಲ, ಹೆಣ್ಣಿನ ಶೀಲ ವನ್ನು ಕೊಳ್ಳೆ ಹೊಡೆಯುವ ದರೋಡೆಖೋರರಾದರೆ, ಹೆಣ್ಣು ಹುಟ್ಟಿದ ಕೂಡಲೇ ಕತ್ತು ಹಿಚುಕುವ ಕಟುಕರಾಗಬೇಕಾಗುತ್ತದೆ ಹೆತ್ತವರು. ಇವತ್ತು ನನ್ನ ದೇಹವನ್ನು ನಿಮ್ಮ ಕಾಮದಾಹಕ್ಕೆ ಬಳಸಿಕೋಡಿರೆಂದು ಖಂಡಿತ ನನಗೆ ನೋವಿಲ್ಲ. ಯಾಕಂದ್ರೆ, ದಡ್ಡ ಧನವಂತರಿಬ್ಬರ ಹೊಟ್ಟೆ ತುಂಬಿಸಿ. ಹೆಚ್ಚಾಗಿ ತಿಪ್ಪೆಗೆಸೆದ ಎಂಜಲು ನಾನು. ಈ ಎಂಜಲನ್ನು ಬುದ್ಧಿಯಿಲ್ಲದ ಬೀದಿ ನಾಯಿ ತಿನ್ನುವ ಮನಸ್ಸು ಮಾಡಬೇಕಿತ್ತೇ ಹೊರತು ದೊಡ್ಡ ಸ್ಥಾನದಲ್ಲಿರುವ ನೀವು ದಡ್ಡರಂತೆ ಈ ಎಂಜಲು ತಿನ್ನುವ ಮೂರ್ಖತನ ಮಾಡಬಾರದಿತ್ತು.

ಅರವಿಂದ–ಅಯ್ಯೋ ಮಂಕೆ ದೊಡ್ಡ ಸ್ಥಾನದಲ್ಲಿದ್ದುಕೊಂಡು ಮಾಡುವ ದಡ್ಡತನಕ್ಕೆ ಈ ಸಮಾಜದಲ್ಲಿ ಸಾಕಷ್ಟು ಬೆಲೆ ಇದೆ. ದೊಡ್ಡವರ ದಡ್ಡತನ. ದೇಶದ ಮೂಲೆ ಮೂಲೆಯಲ್ಲಿ ಗೆಜ್ಜೆ ಕಟ್ಟಿಕೊಂಡು ಅಟ್ಟಹಾಸದಿಂದ ಕುಣಿ ಯುತ್ತಲೇ ಇದೆ. ಆದರೂ ಅದನ್ನು ಅಡ್ಡಿಪಡಿಸುವ ಬುದ್ಧಿವಂತ ಶಕ್ತಿ ಇನ್ನೂ ಹುಟ್ಟಿಲ್ಲ. ಹುಟ್ಟಿದ್ದರೂ ಇದುವರೆಗೆ ತಡೆಯಲು ಸಾಧ್ಯವಾಗಿಲ್ಲ. ನಮ್ಮಂಥವರ ದಡ್ಡತನ ಇಂದಿನ ಸಮಾಜದಲ್ಲಿ ಮುಳುಗಿ ಮತ್ತೆ ಹುಟ್ಟಿ ಬರುವ ಆ ಸೂರ್ಯ ನಿದ್ದಂತೆ.

ವಿಶಾಲ–ಅದೂ ನಿಜಾನೆ. ನಿಮ್ಮಂಥ ದೊಡ್ಡವರು. ಅನ್ನ ತಿನ್ನುವ ಬಾಯಿಂದ ಹೇಸಿಗೆ ತಿಂದಿದ್ರೂ ಕೇಸರಿ ಬಾತ್ ತಿಂದಿದ್ದೇವೆ ಅಂತ ಮತ್ತೊಬ್ಬರ ಮುಂದೆ ಸಮರ್ಥಿಸಿಕೊಳ್ಳುತ್ತಾರೆ. ಇವರ ಬಾಯಿಂದ ಬರುವ ವಾಸನೆ ಕೇಸರಿ ಬಾತ್ ತಿಂದಿದ್ದಲ್ಲಾ ಹೇಸಿಗೆ ತಿಂದದ್ದನ್ನು ಸತ್ಯವನ್ನು ಮೂಗು ಕಂಡು ಹಿಡಿದಿ ದ್ದರೂ ಇವರ ದೊಡ್ಡಸ್ತಿಕೆ, ದರ್ಪಕ್ಕೆ ಬಲಿಯಾಗಿ ಇವರ ಮಾತಿಗೊಪ್ಪಿ ಗೊಳ್ಳುವ ಷಂಡರಾಗಬೇಕಾಗುತ್ತದೆ. ಆದರೆ ಮರ ಉರುಳಿಸುವ ಆನೆ ಕೂಡ ಸಣ್ಣ ಇರುವೆಯಿಂದ ಪ್ರಾಣ ಬಿಡುವ ಪ್ರಸಂಗಕ್ಕೆ ತುತ್ತಾಗಬೇಕಾಗುತ್ತದೆ.

ಡಾಕ್ಟ್ರೇ ಹಲ್ಲು ಗಟ್ಟಿ ಅಂತ ಕಲ್ಲು ಕಡಿದ್ರೆ ಜೊಲ್ಲು ಸುರಿಸ್ಬೇಕಾಗುತ್ತದೆ. ಶಕ್ತಿಯಿದ್ದಾಗ ವಿದ್ಯುಚ್ಛಕ್ತಿಯಂತೆ ಹರಿದಾಡಿದರೂ. ರಕ್ತ ಸುಟ್ಟಾಗ ಪಕ್ಕ ಕಿತ್ತ ಹಕ್ಕಿಯಂತಾಗುವುದು ಮಾತ್ರ ಸತ್ಯ. ಈ ಮಾತು ನೆನಪಿಲ್ಲಿ, ಬರ್‍ತೀನಿ.

ಅರವಿಂದ— ನಿಲ್ಲು ಹೋಗುವ ಮುನ್ನ ನನ್ನದೂ ಒಂದು ಮಾತು ಕೇಳಿ ಹೋಗು. ಕಾಮದ ಹಸಿವಾಗುವ ಈ ವಯಸ್ಸಿನಲ್ಲಿ, ಸುಖದ ಅಡಿಗೆಯನ್ನು ಅರಸನಾಗಿ ಉಣ್ಣುವ ವಿಚಾರವನ್ನಷ್ಟೇ ನಾನು ಮಾಡ್ತೀನಿ. ಮುಂದೆ ಮುದುಕನಾಗ್ತೀನಿ. ಮಣ್ಣು ಸೇರ್‍ತೀನೆನ್ನುವ ಹುಚ್ಚು ಕಲ್ಪನೆಯನ್ನು ಈ ಯೌವನದ ವಯಸ್ಸಿನಲ್ಲಿ ನಾನು ಖಂಡಿತ ಮಾಡುವುದಿಲ್ಲ. ಮತ್ತೇನಾದ್ರೂ ನನ್ನನ್ನು ಪ್ರಶ್ನಿಸುವ ವಿಚಾರವಿದ್ರೆ ನಿನ್ನೀ ನಿರ್ಧಾರವೇ ಉತ್ತರವಾಗಬಹುದೆಂದು ನನಗನಿಸುತ್ತದೆ. ಹ್ಯಾಮ್ ಐ ಕರೆಕ್ಟ?

ವಿಶಾಲ— ಹುಚ್ಚು ಡಾಕ್ಟ್ರೆ ಮನುಷ್ಯ ರೂಪವಿರುವ ನಿನ್ನಂತ ಕಾಡುಕಲ್ಲಿಗೆ ಪ್ರಶ್ನೆ ಮಾಡುವುದು ಮಾಂಸ ತಿನ್ನುವ ಮೃಗದ ಮುಂದೆ ಹುಲ್ಲು ಹಾಕುವುದು, ಎರಡೂ ಒಂದೆ. ನಾರಾಯಣನ ಹತ್ತು ಅವತಾರಗಳಲ್ಲಿ ಹಂದಿಯೂ ಒಂದು ಮುತ್ತು ಅಂತ ಮನೆಗೆ ತಂದು ಮಂಚದ ಮೇಲೆ ಮಲಗಿಸಿದರೆ, ಆ ಹಂದಿ ಹೊಲಸು ತಿನ್ನುವುದನ್ನು ಬಿಟ್ಟು ಅನ್ನ ತಿಂದು ಬದುಕಲು ಮನಸ್ಸು ಮಾಡಬಹುದೆ? ಸಾಧ್ಯವಿಲ್ಲ. ಅದರಂತೆ ಕಲಿತರೂ ಬುದ್ಧಿಹೀನರಾದ ನಿಮ್ಮಂತ ಬುದ್ಧಿಹೀನರ ಮುಂದೆ ಕೈಜೋಡಿಸಿ ಕರುಣೆ ಸಿದ್ಧಿಸಿಕೊಳ್ಳಲು ಸಾಧ್ಯವಿಲ್ಲ. ನಿಮ್ಮಂತವರನ್ನು ಕಾಲಿನ ಕೆರವಾಗಿ ಮೆಟ್ಟಿ, ತೊಟ್ಟಿಗೆಸೆಯುವ ಬುದ್ಧಿವಂತಿಕೆ ಮಾಡಬೇಕು.

(ಭೋಜರಾಜ, ವಿಕ್ರಂ ಬರುವರು)

ಭೋಜರಾಜ— ಶಹಭಾಷ್, ಗಂಡೆದೆಯ ಹೆಣ್ಣೆ. ಕಂಡ–ಕಂಡವರ ತೋಳ ತೆಕ್ಕೆಯಲ್ಲಿ ಸಿಕ್ಕು ಬಿದ್ದು, ಗಾಣದಲ್ಲಿ ಹಿಂಡಿದ ಕಬ್ಬಿನಂತಾಗಿದ್ದರೂ, ಇನ್ನೂ ನಿನ್ನ ರೋಷ, ಆವೇಶ ಕಡಿಮೆ ಆಗಿಲ್ಲವಲ್ಲ. ಅವತ್ತು ನಮ್ಮನ್ನೇ ನಾಶ ಮಾಡ್ತೀನಂತ ಆವೇಶದಿಂದ ಆದೇಶ ಕೊಟ್ಟವಳು, ಇವತ್ತು ಮತ್ತೊಬ್ಬನ ಪಾಶಕ್ಕೆ ಬಲಿಯಾಗಿ ನೀನೇ ನಾಶವಾಗಿರುವಿಯಲ್ಲ.

ವಿಕ್ರಂ– ಇವಳ ನಾಶದಲ್ಲಿ ನಮ್ಮ ಕೈ ವಶವಾಗುವ ಮಂತ್ರವೊಂದಡಗಿದೆಯಲ್ಲ ಡ್ಯಾಡಿ.

ಅರವಿಂದ– ಮಂತ್ರ...ತಂತ್ರ..., ಏನ್ಸಾರ್ ಹೇಳ್ತಾಯಿರೋದು? ನಿಮಗೆ..., ಇವಳ ಪರಿಚಯವಿದೆಯೋ?

ವಿಶಾಲ– ಪರಿಚಯ? ಯಾರದು? ನನ್ನದೆ? (ನಗು) ಅಯ್ಯೋ ಡಾಕ್ಟ್ರೆ, ಬೆಣ್ಣೆ ತಿಂದವರ ಮುಂದೆ, ಮಜ್ಜಿಗೆ ಕುಡಿದವನು ಬಾಯಿ ಚಪ್ಪರಿಸಿದಂತಾಯಿತು ನಿಮ್ಮ ಪ್ರಶ್ನೆ. ಆಸೆಯ ಮತ್ತಿನಲ್ಲಿ ನೀವು ರುಚಿ ನೋಡಿದ ಈ ಹೆಣ್ಣಿನ ತಿರುಳನ್ನು ಈ ಮೊದಲು ಇವರಿಬ್ಬರೂ ಸವಿದು ಬಿಟ್ಟಿದ್ದಾರೆ. ನೀವೀಗ ಕುಡಿದಿದ್ದು ತಾಜಾ ಹಾಲಲ್ಲಾ ಡಾಕ್ಟ್ರೆ. ಈ ನಾಯಿಗಳು ಕುಡಿದು ಬಿಟ್ಟ ಎಂಜಲ ಹಾಲು.

ಅರವಿಂದ– ಮುಚ್ಚು ಬಾಯಿ ಗರ್ಭಪಾತ ಮಾಡಿಸಿಕೊಳ್ಳುವುದಕ್ಕಾಗಿ ನನ್ನಾಸ್ಪತ್ರೆಗೆ ಬಂದು, ನನ್ನ ಮೇಲೆ ಅಪವಾದ ಹೊರಿಸುವೆಯಾ? ನನ್ನ ಮರ್ಯಾದೆಯ ಗತಿ ಏನಾಗುತ್ತನ್ನೊ ಪ್ರಜ್ಞೆಯಿದೆಯಾ ನಿನಗೆ?

ವಿಶಾಲ– ಕಳ್ಳನಿಗೊಂದು ಪಿಳ್ಳೆ ನೆವ ಅನ್ನುವಂತೆ, ಸುಳ್ಳುಗಳನ್ನು ಪೋಣಿಸುವ ಜಾಣತನ ಯಾಕ ಮಾಡ್ತೀರಿ ಡಾಕ್ಟ್ರೆ? ಶೀಲ ಕಳೆದುಕೊಂಡ ಹೆಣ್ಣಾದ ನಾನೇ ನನ್ನ ಮೈ ಕದ್ದ ಗಂಡಸರ ಸಂಖ್ಯೆಯನ್ನು ಅಂಕೆ ಮಾಡಿ ಹೇಳುತ್ತಿರುವಾಗ, ಗಂಡು ಗುಂಡಿಗೆಯ ಗಂಡಸರಾದ ನೀವೇಕೆ ಸತ್ಯ ಹೇಳಲು ಶಂಕೆ ಪಡುತ್ತೀರಿ? ನೀವು ಮೂವರೂ ತಿಂದಿರುವುದು ನರಕವೇ ಅಂದಾಗ, ನಿಮ್ಮ ಹರಕು ಮನಸ್ಸುಗಳು ಸತ್ಯವನ್ನು ಬಚ್ಚಿಡಲು ಪ್ರಯತ್ನಿಸುವುದರಲ್ಲಿ ಅರ್ಥವಿಲ್ಲ. ಮುಸುರೆಗೆ ಮುತ್ತುವ ನೊಣಗಳ ಜಾತಿ ನಿಮ್ಮದಾಗಿರುವಾಗ ನೀತಿಯೂ ಒಂದೇ ಆಗಿರಬೇಕಲ್ಲವೆ?

ಅರವಿಂದ– ಮೂರ್ಖ ಹೆಣ್ಣೆ, ಸಲಿಗೆ ಕೊಟ್ಟ ನಾಯಿ ಅಡಿಗೆ ಮನೆಗೆ ಬಂದಂತೆ ಅಬಲೆಯೆಂದು ಅನುಕಂಪ ತೋರಿಸಿದ್ರೆ, ನನ್ನ ಪಾಲಿಗೆ...

ಭೋಜರಾಜ- ದುಷ್ಟ ಗ್ರಹವಾದ್ಲು ಅಂತೀರಾ?

ಅರವಿಂದ- ನೋಡಿ ಸಾರ್...

ಭೋಜರಾಜ- ಡಾಕ್ಟ್ರೆ, ಯಾಕ ಸುಮ್ಮನೆ ನಮ್ಮನ್ನು ಮೆಚ್ಚಿಸೋ ಹುಚ್ಚುತನ ಮಾಡ್ತಿರಿ? ಮೀನಿಗೆ ಈಜು ಕಲಿಸುವ ಬುದ್ಧಿವಂತಿಕೆ ಪ್ರದರ್ಶಿಸುವ ಮೂರ್ಖತನ ಮಾಡಬೇಡಿ.

ವಿಕ್ರಂ- ಒಂದು ವೇಳೆ ಪ್ರಯತ್ನ ಮಾಡಿದ್ರೆ ಹುಲಿ ಬಾಯಿಗೆ ಸಿಕ್ಕ ಜಿಂಕೆ, ಹಸಿರಿಗೆ ಬಾಯಿ ಹಾಕಲು ಅವಸರ ಪಟ್ಟಂತೆಯೇ ಸರಿ.

ವಿಶಾಲ– ಈಗಲಾದ್ರು ಅರ್ಥವಾಯಿತೆ ಡಾಕ್ಟ್ರೆ ಈವರ ಬುದ್ಧಿಯ ಗೂಡಾರ್ಥ. ಯಾಕ ಸುಮ್ಮನೆ ಅರ್ಥವಿಲ್ಲದ ಕಾಲ ವ್ಯರ್ಥ ಮಾಡುತ್ತಿದ್ದಿರಿ? ಮಹಾ ಕಾಮುಕರ ಸಂಗಮವಾಗಿರುವ ಈ ಸಮಯದಲ್ಲಿ, ಮತ್ತೆ ಬೇರೊಂದು ಹೆಣ್ಣಿನ ಬಾಳನ್ನು ಹಾಳು ಮಾಡುವ ವಿಚಾರ ಕೂಟ ನಡಸಿರಿ. ಕಾಲ ಕೂಡಿ ಬರುವತನಕ ನಿಮ್ಮಂತವರ ಕುಲ ಬೆಳಿಯುತ್ತಲೇ ಇರಬೇಕು. ಆದರೆ, ಅಂಕೆ ತಪ್ಪಿದ ಬೆಂಕಿ ಊರು ಸುಟ್ಟರೂ, ನೀರು ಬಿದ್ದಾಗ ಆರದೆ ಇರಲಾರದು. ಅಲ್ಲಿ ಯವರೆಗೂ ಈ ಸಮಾಜದಲ್ಲಿ ನಿಮ್ಮ ದಗುಲುಬಾಜಿ,ದರಬಾರು ನಡೆಯುತ್ತಲೇ ಇರಲಿ, ಪಾಪದ ಫಲ ಪಾಶವಾಗಿ ನಿಮ್ಮ ಕತ್ತಿಗೆ ಬೀಳೋವರೆಗೂ. ಅಬಲೆ ಹೆಂಗಳೆಯರ ಬಾಳನ್ನು ಗೋಳಿಗೀಡು ಮಾಡಿ, ನೀವು ಮಾತ್ರ ಮಜದಿಂದ ಮೆರೆಯುತ್ತಲೆ ಬದುಕಿರಿ. ದಿನಕ್ಕೊಂದು ಹೆಣ್ಣನ್ನು ಮಣ್ಣಿ ಸೇರಿಸಿ, ಹೆಣ್ಣಿ ಕುಲವನ್ನೇ ನಿರ್ನಾಮ ಮಾಡಲು ಸಿದ್ಧರಾಗಿ ನಿಲ್ಲಿರಿ. ನಡೆಯಲಿ–ನಡೆಯಲಿ ನಿಮ್ಮ ಕುಟಿಲ ವ್ಯಾಪಾರ, ಹೆಣ್ಣಿನ ಬಲತ್ಕಾರ. (ಹೋಗುವಳು)

ಭೋಜರಾಜ– ಯಾಕ ಡಾಕ್ಟ್ರೆ, ಅವಳ ಮಾತು ಕೇಳಿ ಗರ ಹೊಡೆದು ನಿಂತು ಬಿಟ್ರೆಲ್ಲಾ?

ವಿಕ್ರಂ– ತಮ್ಮ ಹುಳುಕು ಬೆಳಕಿಗೆ ಬಂತಲ್ಲಾ ಅನ್ನುವ ಕಳವಳದಿಂದ ಚಳಿ ಹತ್ತಿರಬೇಕು ಪಾಪ.

ಅರವಿಂದ– ನೋಡಿ, ಸುಮ್ಮನೆ ಸುತ್ತಿ ಬಳಸಿ ಮಾತಾಡಬೇಡಿ. ನಾ ಮಾಡಿರುವ ಅಪರಾಧವಾದರೂ ಏನು, ಸಾಭೀತು ಮಾಡಿ ತೋರ್ಸಿ.

ಭೋಜರಾಜ– ಸಾಭೀತು? (ನಗು) ವಿಕ್ರಂ..

ವಿಕ್ರಂ– ವಾಟ್ ಡ್ಯಾಡಿ...?

ಭೋಜರಾಜ– ಕಬ್ಬಿಣ ಹದಕ್ಕೆ ಬರ್ಬೇಕಾದ್ರೆ, ಏನ್ಮಾಡ್ಬೇಕು ಗೊತ್ತೇನು?

ವಿಕ್ರಂ– ಚೆನ್ನಾಗಿ ಕಾಯ್ಸಿ, ಸುತ್ತಿಗೆ ಪೆಟ್ಟು ಹಾಕಿದ್ರೆ, ಹದಕ್ಬಂದ ಕಬ್ಬಿಣ, ಬಯಸಿದ ಆಕಾರ ಕೊಡುತ್ತದೆ ಡ್ಯಾಡಿ.

ಅರವಿಂದ– ನೀವು ನನ್ನನ್ನ ಹೆದ್ರಿಸ್ತಾಯಿದಿರಾ?

ಭೋಜರಾಜ– ನಾವ್ಯಾಕ ನಿಮ್ಮನ್ಹೆದರ್ಸೊ ಪ್ರಯತ್ನ ಮಾಡೋಣ? (ಫೋಟೋ ತೆಗೆದು) ಈ ಫೋಟೋದಲ್ಲಿ ಮೂಡಿರುವ ನಿಮ್ಮ ಚೋರ ಪ್ರಣಯದ ಪ್ರತಿರೂಪ, ನಿಮ್ಮ ಗುಂಡಿಗೆಯನ್ನು ಅದುರಿಸಲು ಸಿದ್ಧವಾಗಿದೆ. (ಕೊಟ್ಟು) ನೋಡಿ, ಕಣ್ತುಂಬ ನೋಡಿ.

ಅರವಿಂದ– (ನೋಡಿ ಗಾಬರಿಯಿಂದ) ಈ ಫೋಟೋ...

ವಿಕ್ರಂ– ನಿಮ್ಮ ತಲೆ ಹಿಡುಕ ಜಗ್ಗುನ ಕೈಯಿಂದ, ಇಪ್ಪತ್ತೈದು ಸಾವಿರ ರೂಪಾಯಿ ಬೆಲೆ ಹೊತ್ತು, ನಮ್ಮ ಕೈಯಿಗೆ ಬಂದಿದೆ ಡಾಕ್ಟ್ರೆ.

ಅರವಿಂದ– ಓ ಮೈ ಗಾಡ್... (ಚಡಪಡಿಸುವನು)

ಭೋಜರಾಜ– ಈ ಭಾವಚಿತ್ರವನ್ನು ವನಜಾಳಿಗೆ ತೋರಿಸಿದ್ರೆ ಸಾಕು, ನಿಮ್ಮ ಮೋಡಿಯ ಪ್ರೀತಿ ಅವಳಿಂದ ಓಡಿ ಹೋಗಿ ಬಿಡುತ್ತದೆ.

ವಿಕ್ರಂ– ಅಷ್ಟೇ ಅಲ್ಲ, ಅಬಲೆ ಹೆಣ್ಣಿನ, ಅದೂ ಗರ್ಭಿಣಿ ಹೆಣ್ಣಿನ ಶೀಲಹರಣ ಮಾಡಿದ ಆಪಾದನೆಯ ಮೇಲೆ, ನೀವು ಸೆರಮನೆಯ ಸೇವಕರಾಗುವ ದುರ್ದಿನ ಒದಗಿ ಬರುತ್ತದೆ. ಕಾರಣ. ಈಗ ನಾವು ಹೇಳಿದಂತೆ ಕೇಳಿ, ಹೆಣ್ಣಿನ ಜೊತೆಗೆ ಹೊನ್ನನ್ನೂ ಪಡೆಯಲು ಸಿದ್ಧರಾಗುತ್ತೀರೋ? ಇಲ್ಲಾ ಮರ್ಯಾದೆ ಕಳೆದುಕೊಂಡು ಹಿಡಿ ಮಣ್ಣನ್ನು ಕಣ್ಣಿಗೆ ಹಾಕಿಕೊಂಡು ಬೊಬ್ಬೆ ಹಾಕುವ ಪರಿಸ್ಥಿತಿಯನ್ನು ಆಹ್ವಾನಿಸುತ್ತೀರೋ?

ಅರವಿಂದ– (ಕೂಗಿ) ಖಂಡಿತಾ ಇಲ್ಲ. ನೀವ್ಹೇಳಿದಂತೆ ಕೇಳ್ತೀನಿ. ಆದ್ರೆ ನನ್ನ ಮರ್ಯಾದೆ ಕಳೆಯುವ ವಿಚಾರ ಮಾತ್ರ ಮಾಡಬೇಡಿ.

ಭೋಜರಾಜ– ಛೇ ಛೇ ಎಲ್ಲಿಯಾದರೂ ಉಂಟೆ ಡಾಕ್ಟ್ರೆ? ಹಾಯೋ ಹಸುವಾದರೂ, ಹಾಲು ಕೊಡುತ್ತೇ ಅಂದಾಗ, ಆ ಹಸುವಿಗೆ ಹುಲ್ಲು ತಿನ್ನಿಸದೆ ಕಲ್ಲು ತಿನ್ನಿಸುವ ಮೂರ್ಖತನ ನಾವ್ಯಾಕೆ ಮಾಡೋಣ?

ವಿಕ್ರಂ— ನೋಡಿ ಡಾಕ್ಟ್ರೆ, ನೀವು ಯಾವ ಹೆಣ್ಣು, ಹೊನ್ನು ಬಯ ಪ್ರೀತಿಯ ನಾಟಕವಾಡ್ತಿದ್ದಿರೊ ಈ ಎರಡರಲ್ಲಿ ಆ ಹೆಣ್ಣು ಸಂಪೂರ್ಣ ನಿಮ್ಮ ಸೊತ್ತಾಗುತ್ತಾಳೆ. ಆದರೆ, ಹೊನ್ನು ಮಾತ್ರ ಈ ಮೂವರಿಗೂ ಸಮಭಾಗ ವಾಗಿ ಹಂಚುತ್ತವೆ.

ಭೋಜರಾಜ— ಆದರೆ ಒಂದು ಕಂಡೀಷನ್ ಡಾಕ್ಟ್ರೆ.

ಅರವಿಂದ— ಏನದು?

ಭೋಜರಾಜ— ಖಾಲಿ ಬಾಂಡ್ ಪೇಪರಿನಲ್ಲಿ ವನಜಾಳ ಸಹಿ ಬೀಳು ವಂತೆ ಮಾಡುವ ಜವಾಬ್ದಾರಿ ನನ್ನದು. ನಂತರ ವಿಲ್ ಬರೆಸಲು ಫ್ಯಾಮಿಲಿ ವಕೀಲರ ಸಹಕಾರವೂ ನನಗಿದೆ. ಆದರೆ, ನೀವು ತಾಳಿ ಕಟ್ಟುವ ಹಿಂದಿನ ದಿನವೇ ಮೂವರ ಹೆಸರಿಗೆ ಸಮಭಾಗವಾಗಿ ವಿಲ್ ಬರೆಸಬೇಕು. ಇದಕ್ಕೆ ನಿಮ್ಮೊಪ್ಪಿಗೆ ಇದೆ ತಾನೆ?

ಅರವಿಂದ— ತಿಪ್ಪೆಯಲ್ಲಿ ಬೀಳ್ತಿದ್ದವನನ್ನು ಉಪ್ಪರಿಗೆ ಮೇಲೆ ಕೂರುಸ್ತೀ ನಂದ್ರೆ ಯಾರು ಬೇಡವೆನ್ನುತ್ತಾರೆ?

ವಿಕ್ರಂ— ಆಯ್ತಲ್ಲ. ಇನ್ನಾದ್ರೂ ಈ ಸ್ವಜಾತಿ ಬಾಂಧವರ ಬೆಸುಗೆಯ ಗುರುತಿಗೆ ಸಣ್ಣ ಪಾರ್ಟಿ ಮಾಡೋಣ.

ಅರವಿಂದ— ಸಣ್ಣ ಪಾರ್ಟಿಯೇಕೆ ಸಾರ್...

ಭೋಜರಾಜ— ದೊಡ್ಡಾಸ್ತಿಗೆ ಅಧಿಪತಿಗಳಾಗುವ ಭೂಪರು ನಾವು, ದೊಡ್ಡ ಪಾರ್ಟಿನೆ ಮಾಡೋಣ ಅಂತಾರೆ ಡಾಕ್ಟ್ರು. ಅಲ್ವೆ ಮಿ॥ ಅರವಿಂದ?

ಅರವಿಂದ— ಎಸ್...! (ಮೂವರೂ ನಗುತ್ತಾ ಹೋಗುವರು)

## ಹತ್ತನೆಯ ದೃಶ್ಯ

### ರಸ್ತೆ

(ಭೋಜರಾಜ, ಮೂರ್ತಿ ಬರುವರು)

ಭೋಜರಾಜ— ಮೂರ್ತಿ, ಇವತ್ತು ನನ್ನಾಸೆ ಬಸಿರು ಚಿಗುರಿ, ಹಸಿರಾ

ಮೂರ್ತಿ– ಅಂದ್ರೇನ್ರಿ?

ಭೋಜರಾಜ– ನಿನಗರ್ಥವಾಗುವ ವಿಷಯಲ್ಲದು. ಸುಮ್ಮನಿದ್ದು ಬಿಡು.

ಮೂರ್ತಿ– ಖರೆರಿ. ಇತ್ತೀತ್ಲಾಗ ನನ್ನ ಮಾತು ನನಗ್ಗ ತಿಳಿದಂಗಾಗೇತಿ ಅಲ್ಲ ನಾ ಗಂಡ್ಸರ ಹೌದಲೊ?

ಭೋಜರಾಜ– ಈ ಅನುಮಾನ್ಯಾಕ ಬಂತಲೇ?

ಮೂರ್ತಿ– ಅನುಮಾನಲ್ಲ, ಅವಮಾನ. ಆ ರಂಗನ ಮುಂದ ನನ್ನ ಷುಡನ್ನ ಮಾಡ್ತಾಳಲ್ಲ ಲಿಲ್ಲಿ, ಈ ಅವಮಾನ ಹೆಂಗ ಸಹಿಸಿಕೊಳ್ಲಿ?

ಭೋಜರಾಜ– ನೋಡು ತಮ್ಮಾ, ಈ ಸಮಾಜದಾಗ ನಮಗ ಅವ ಮಾನರ ಅಗ್ಲಿ, ಬಹುಮಾನರ ಸಿಗಲಿ, ಇವೆರಡೂ ಸುಟ್ಟ ಬೂದಿ ಇದ್ದಂಗ.

ಮೂರ್ತಿ– ಬೂದಿದ್ದಂಗ?

ಭೋಜರಾಜ– ಹೌದಲೆ, ಸುಟ್ಟುಬೂದಿನ ತಿಪ್ಪಿಗೆ ಚಲ್ಲಿದ್ರ ಗೊಬ್ರಾ ಗುತ್ತ. ಅದನ್ನ ಗುಡಿಯಾಗಿಟ್ರ ಅಂಗಾರಾಗುತ್ತ. ಅಂದ್ರ ಆ ಬೂದಿ ತಿಪ್ಪಿಗೆ ಬಿದ್ರಾ ಬೆಲಿ ಐತಿ, ಗುಡಿಯಾಗಿಟ್ರ ಬೆಲಿ ಐತಿ. ಹಂಗ ನಾವು. ಸುಮ್ಮನ ಯಾಕ ತಲಿಕೆಡಿಸ್ಕೊಂತಿ ನಡಿ ಮನಿಗೆ.

ಮೂರ್ತಿ– ನೀವು ನಡಿರಿ. ನಾ ಸ್ವಲ್ಪ ಸೂಳ್ಯಾರ ಮನಿಕಡಿ ಹೋಗಿ ಬರ್ತೀನಿ.

ಭೋಜರಾಜ– ಯಾಕಲೆ ?

ಮೂರ್ತಿ– ಇವತ್ತು ರಾಖಿ ಹಬ್ಬ, ರಾಖಿ ಕಟ್ಟಿಸ್ಕೊಂಡು ಬರ್ತೀನಿ.

ಭೋಜರಾಜ– ಅಂದ್ರ. ಊರಾಗ್ಯಾರೂ ರಾಖಿ ಕಟ್ಟೋರಿಲ್ಲೇನು ?

ಮೂರ್ತಿ– ಅದಾರ. ಆದ್ರ, ಸೂಳ್ಯಾರ್ಹತ್ರಾನ ಕಟ್ಟಿಸಿಕೊಳ್ಳೋ ಕೆಟ್ಟ ಚಟ ಐತ್ರಿ ನನಗ.

ಭೋಜರಾಜ– ನಡಿ ಹಂಗಾರ ನಾನೂ ಬರ್ತೀನಿ. ನೀ ರಾಖಿ ಕಟ್ಟಿಸ್ಕೊ.

ಮೂರ್ತಿ– ನೀವು ಹಾಸಿಗಿ ಹಾಸೀರಿ. ಬೇಷ್ ಗಂಟು ಬಿದಿ. ನೀವು.

ಅವತ್ನೋಡಿದ್ರೆ ಲಿಲ್ಲಿ ಹಿಡ್ಕೊಳ್ಳಾಕ ಹೋದ್ರಿ, ಆಕಿ ಕೆಲ್ಸನ ಬಿಟ್ಹೋಗ್ತಿದ್ಲು. ಕಣ್ಮುಂದಿದ್ದಿದ್ರೆ ಪ್ರಯತ್ನ ಮಾಡಿ, ಬಲಿಗೆರ ಹಾಕ್ಕೊಂತ್ತಿದ್ದೆ.

ಭೋಜರಾಜ– ಯಾಕ ಮಾತಾಡ್ತಿಯಲೆ? ನಾಯಿಗತಿ ಆಕಿ ಬೆನ್ನತ್ತಿ ತಿರುಗ್ತಿದಿ. ಒಂದಿನಸರ ಸಿಂಪಲ್ಲಾಗಿ ಕಿಸ್ ಕೊಡಾಕ ನಿನಗಾಗುವಲ್ದು. ಅದ ನನ್ನ ಕೈಗೆ ಸಿಗಲಿ ನೋಡು.

ಮೂರ್ತಿ– ಆಕಿನ ಬಂದ್ಲು ಅದೇನ್ಮಾಡ್ತಿರೊ ಮಾಡ್ರೆಂಗಾರ.

(ಲಿಲ್ಲಿ ಬರುವಳು)

ಭೋಜರಾಜ– ಏನೇ ಲಿಲ್ಲಿ, ಎಲ್ಲಿಗ್ಹೊಂಟಿದಿ?

ಲಿಲ್ಲಿ– ಯಾಕಪಾ ಭೋಜಣ್ಣ, ಹೆಂಡತೀನ ಕರದಂಗ ಕರೀತಿಯಲ್ಲ ? ವೈವ್ಯಾಲ ಖಬರಿಲ್ಲಿ. ಇಲ್ಲಾಂದ್ರೆ (ಬಳೆ ಏರಿಸುತ್ತಾ) ಬಾಯಾನ ಹಲ್ಲು ನೆಲಕ್ಕ ಬಿದ್ದಾವು.

ಮೂರ್ತಿ– ಸಾವ್ಕಾರ್ರ. ಬಳಿ ಏರ್ಸಾಕತ್ತಿದ್ಲು. ನಿಂತ್ರ ಕೆಡ್ತೀವಿ. ದೌಡು ಜಗಾ ಬಿಡೋಣ ನಡ್ರಿ.

ಭೋಜರಾಜ– ಮುತ್ಸಾಳ, ಇಕಿಗ್ಹೆದರಿ ಜಗಾ ಬಿಡ್ತಿಯಾ ? ಇನ್ನರ ಗಂಡ್ಸಾಗಲೇ ಗಂಡ್ಸಾಗು.

ಮೂರ್ತಿ– ಇಕಿ ಮುಂದ ಯಾವ ಟೈಪ್ ಗಂಡ್ಸಾಗ್ಬೇಕನ್ನೋದ್ದು ತಿಳಿದಂಗಾಗೇತಿ ನನಗ.

ಭೋಜರಾಜ– ಏನಂದೆ, ಜಿಂಕೆ ಮರಿಯೆ ? ನನ್ನ ಹಲ್ಲುದುರುಸ್ತಿಯಾ? ಅಷ್ಟು ಧೈರ್ಯ ಐತೇನು ನಿನಗ ?

ಲಿಲ್ಲಿ– ಧೈರ್ಯ, ನಿಮ್ಮಪ್ಪನಷ್ಟೈತಿ. ನಿನ್ನಂತ ನೀಚನಿಂದ ಮಾನ ಕಳ್ಕೊಂಡು, ಪ್ರಾಣ ಬಿಡೋ ಅಳ್ಳಿದೆ ಹೆಣ್ಣಲ್ಲ ನಾನು. ಹುಟ್ಟು ಗರತಿ ಮಗಳದೀನಿ. ವೈ ಮುಟ್ಟಾಕ್ಬಂದ್ರೆ, ನಿಂತ ಜಗದಾಗ ಹರ್ದು ತಿಂದುಬಿಟ್ಟೇನು.

ಮೂರ್ತಿ– ಲಿಲ್ಲಿ ತಿನ್ನೋದಾದ್ರ ಇವರೊಬ್ರುನ್ನ ತಿನ್ನು, ನನ್ನ ಸುದ್ದಿಗ್ಬರ್ಬೇಡ

ಭೋಜರಾಜ– ಮೂರ್ತಿ ಸುಮ್ನಿರ್ತಿಯೋ ಬಡಿಸಿಕೊಂತಿಯೊ? ಇಕಿ ನನ್ನ ತಿಂತಾಳ?

ಮೂರ್ತಿ– ನೋಡ್ರೆಲ್ಲಿ ದುರಗವ್ವಂಗ ಬಾಯಿ ತರ್ಕೊಂಡು ತಿನ್ನಾಕ ನಿಂತಾಳ.

ಭೋಜರಾಜ– ಹಂಗಾರ್ಹೆಂಗ ತಿಂತಾಳ ತಿನ್ಲಿ ನಾನೂ ನೋಡ್ತಿನಿ.

ಮೂರ್ತಿ– ಹೆಂಗ ತಿಂತಾಳ ಜಗಾನೋಡಿ ಬಾಯ್ಹಾಕ್ತಾಳೆ. ಹರ್ಕೊಂಡು ತಿಂತಾಳ.

ಭೋಜರಾಜ– ನನ್ನ ಹುಡುಗಿ? ತಿಂತಿಯೇನು ಬಾ ಹಂಗಾರ ನಿನ್ನ ಗುಲಾಬಿ ಗಲ್ಲಾನ ಹರ್ಕೊಂಡು ನಾ ತಿಂತೀನಿ (ಹಿಡಿಯಲು ಹೋಗುವನು ಅಲ್ಲಿ ಕಪಾಳಕ್ಕೆ ಹೊಡೆಯುವಳು)

ಮೂರ್ತಿ– ಜಯ ಜಯ ನಮಃ ಪಾರ್ವತಿ ಪತಿ ಹರ ಹರ ಮಹಾದೇವ

ಭೋಜರಾಜ– ಲೇ ಮೂರ್ತಿ...

ಮೂರ್ತಿ- ನನ್ನ ಮ್ಯಾಲ್ಯಾಕ ಸಿಟ್ಟಿಗ್ಬರ್ತೀರಿ? ನಾ ಬಡ್ಕೊಂಡೆ ಬಳಿ ಏರ್ನಿ ಸಿಗ್ನಲ್ ಕೊಟ್ಟಾಳ, ಅಕಿ ಸುದ್ದಿಗ ಹೋಗೂದು ಬ್ಯಾಡಂತ. ಕೇಳಿದ್ರೇನು ನನ್ನ ಮಾತ?

ಲಿಲ್ಲಿ– ಯೇ ಭೋಜರಾಜ ನಿನ್ನಂತ ಚೆಂಡಾಲನ ಕೈಗೆ ಅಷ್ಟು ಸರಳ ಸಿಗೋ ಹೆಣ್ಣಲ್ಲ ನಾನು

ಮೂರ್ತಿ– ಬರೊಬ್ಬರಿ. ಅವತ್ತು ನೀವಿಕಿನ ಕೆಡ್ಸಾಕ್ಹೋಗಿದ್ರಿ. ಆ ರೊಚ್ಚೈತಿ ನಿಮ್ಯಾಲ. ಇನ್ನೂ ನನ್ನ ಕೈಗೆ ಅಗದಿ ಸರಳ ಸಿಕ್ತಾಳ ಹೌದಿಲ್ಲ ಲಿಲ್ಲಿ?

ಲಿಲ್ಲಿ- (ಬಳಿ ಏರಿಸುತ್ತ) ಹತ್ರ ಬಂದು ನೋಡು ಗೊತ್ತಾಗುತ್ತೆ.

ಮೂರ್ತಿ– ಬ್ಯಾಡ್ಬಿಡು ಮಾರಾಯಳ. ಮೊದಲ್ಹ ನಮ್ಹಲ್ಲಿನ ಬೇರೂ ಅದ್ರದಾವ.

ಭೋಜರಾಜ– ನನ್ಮಗನೆ, ಅಕಿ ನನ್ನ ಕಪಾಳಕ್ಕೆ ಹೊಡದಾಳ, ನೀ ಶಿಕಿನ ರಮಸಾಕ್ಷತಿಯೂ?

ಮೂರ್ತಿ– ಮತ್ತೇನು ಮಾಡ್ಲಿ, ನಾನ್ನು ತಡವಿ ನಿಮ್ಮಂಗ ಕಟಿ ಸ್ಕೊಳ್ಲೆನು?

ಭೋಜರಾಜ– ಮಾತು ಬಿಟ್ಟು ಮೊದಲಿಕಿನ ಹೊತ್ಕೊಂಡು ನಡಿ ಅಂದೆ

ಮೂರ್ತಿ- ಇಕಿನ್ನ... ನಾ ಹೊರಬೇಕಾ? ಸಾವ್ಕಾರ್ರ. ಮನ್ನೆ ಅಟ್ಟದ ಮ್ಯಾಗಿಂದ ಬಿದ್ದು ನಡನ ಬಾದಾಗೇತಿ. ಬಗ್ಗಿದ್ರ ಏಳೂದು ಒಜ್ಜೈತಿ. ನೀವು ಹೊತ್ಕೊಳ್ರಿ. ನಾ ಹಿಂದ ಬಾಡಿಗಾಡಾಗಿ ಬರ್ತೀನಿ.

ಭೋಜರಾಜ– ಥರ್ ಯೂಸ್ ಲೆಸ್ ಫೆಲೊ. ಏ ಸೊಕ್ಕಿನ ಹೆಣ್ಣೆ ನನ್ನ ಕಪಾಳಕ್ಕೆ ಹೊಡ್ದೆಲ್ಲಾ? ನಿನ್ನ ಸುಮ್ನ ಬಿಡುದಿಲ್ಲ. ಮಾನ ಕಳೆದು ಮಣ್ಣು ಸೇರುಸ್ತೀನಿ. ಇವತ್ಯಾರು ಬಂದು ಬಿಡಸ್ತಾರ ಬಿಡಿಸ್ಲಿ ನಿನ್ನ ನೋಡ್ತೀನಿ,

(ರಂಗ ಬರುವನು)

ರಂಗ- ಯಾರ್ರ್‍ಯಾಕ? ಇಲ್ಲೆ ಅದಾನ್ನೋಡು ಬಹದ್ದೂರ ಗಂಡು.

ಭೋಜರಾಜ– ರಂಗ್ಯಾ...

ರಂಗ- ಯಾಕಲೇ ಮಂಗ್ಯಾ...?

ಭೋಜರಾಜ– ನನಗ ಮಂಗ್ಯಾ ಅಂತ, ಲೇ ಹಚ್ಚಿ ಮಾತಾಡ್ತಿಯೇನೋ ಬಡ್ಡಿ ಮಗನೆ.

ರಂಗ– ನಿನಗ ಮಂಗ್ಯಾ ಅನ್ದೆ, ಮನುಷಾ ಅಂತಾರೇನೋ ಅಡ್ಡಾತಿಡ್ಡಿ ನನ್ನ ಮಗನೆ.

ಮೂರ್ತಿ– ಸಾವ್ಕಾರ್ರ ಈಗರ ದೌಡು ಮನಿ ಸೇರಾನ ಬರ್ರಿ. ಏಕ್ ದಮ್ ಡೇಂಜರ್ ಪೊಜಿಷನ್ನಿಗೆ ಬಂತೀಗ. ನನಗಂತೂ ನಡುಗ ಶುರುವಾಗೇತಿ

ಭೋಜರಾಜ– ಹಂಗ ನಡುಗಿ ಸಾಯಿ ಮಗನ. ಲೇ ರಂಗಾ. ನಾ ಯಾರನ್ನೋ ಪ್ರಜ್ಞಿಲ್ಲದ್ಹಂಗ ಮಾತಾಡ್ತಿಯಾ?

ರಂಗ– ನನ್ನ ಕಣ್ಮುಂದ ದೇಶೋದ್ಧಾರದ ಕೆಲ್ಸ ಮಾಡಾಕ ನಿಂತಿದ್ದಿ ಅಂದಾಗ ನೀ ಯಾರನ್ನೊ ಪ್ರಜ್ಞೆ ಹೆಂಗ ತಪ್ತಿನಿ?

ಮೂರ್ತಿ– ಏನಲೇ ರಂಗ ಹಂಗ್ಯಾತಾಡಿದ್ರೆ? ನಿನಗ ಸಂಬ್ಳ ಕೊಡೊ ಧಣಿ ಅವಾರವರು. ಸಿಟ್ಟಿಗೆದ್ದು ನೌಕ್ರಿಯಿಂದ ತಗೆದೊಗದ್ರ ಮಣ್ಣು ತಿಂದ್ಕೊಂತ ಕುಂದ್ರುಬೇಕಾಗುತ್ತ.

ರಂಗ– ಅಪ್ಪಾ ನಾಯಿ ಬಾಲ್ದಂತವನ, ಇವರ್ದು ಕಂಡವರ ಮನಿಯಾಗ ದಂಡದ ಕೂಳ ತಿಂದ್ಕೊಂತ ಬಿದ್ದಾರ, ನನಿಗ್ಹೆಂಗ ಧಣಿ ಆಗ್ತಾರ್ಲೆ? ನನ್ನ ಕೆಲ್ಸಕ್ಕ ತಗೊಂಡಿರೋದ ವನಜಮ್ಮ, ಸಂಬ್ಳ ಕೊಡೋದು ವನಜಮ್ಮ, ಆವ್ರ ಮನಸ್ನು ಕೆಟ್ಟಾಗಿ ಇವತ್ತ ನೌಕ್ರಿಯಿಂದ ತಗಿಲಿ, ಸಂತೋಷದಿಂದಹೋಗ್ತಿನಿ. ಆದ್ರ ಇವ್ರಿಗೇನು ಅಧಿಕಾರೈತಲೆ? ಆ ದಮ್ಮಿದ್ರೆ ನೌಕ್ರಿಯಿಂದ ತಗಿ ಅಂತ ಹೇಳಿವ್ರಿಗೆ.

ಮೂರ್ತಿ– ಏನ್ರಿದು, ಈ ಮಗ ನಿಮಗ ಸವಾಲ್ ಹಾಕ್ತನಲ್ಲ?

ಭೋಜರಾಜ– ಹಾಕ್ದೆ ಏನ್ಮಾಡ್ತಾನ್ಲೆ, ಇವನ ಜೆಸ್ತಿಂದೆ ನನ್ನ ಸೊಸೆ ದೊಂದು ದೊಡ್ಡ ಧೈರ್ಯಾನೆ ಐತಲ್ಲ.

ಮೂರ್ತಿ– ಇಲ್ರಿ. ಈ ಮಗನ ಮಾರಿ ನೋಡಿದ್ರ, ಹುಲಿಸ್ಯೆತ ನಿಂತ ಜಗಾದಾಗ ನಿದ್ದಿ ಮಾಡುತ್ತ ಸಾವ್ಕಾರ್ರ. ಸಂಬಂಧಿಲ್ಲದ ವಿಷಯ್ದಾಗ ತಲಿ ಹಾಕೋದು ಬಾಳಿ ಮಗ ಅಲ್ರಿ ಇಕೇನು ಸಂಬಂಧಂತ ಪರವಹಿಸ್ಕೊಂಡು ಬಂದಿರ್ಬೇಕು?

ರಂಗ– ಏನ್ಸಂಬಧ?

ಮೂರ್ತಿ– ಹೌದಲೇ ನಿನಗೇನು ಸಂಬಂಧ?

ರಂಗ– (ಲಿಲ್ಲಿ ಭುಜದ ಮ್ಯಾಲ ಕೈ ಹಾಕಿ) ಇಕಿ ನನ್ನ ಲವರ್?

ಮೂರ್ತಿ– ಇಕಿ ನಿನ್ನ ಲವರ್ಥ? ನೋಡ್ರಿ ಸಾವ್ಕಾರ ನನಗೆ ಹುಚ್ಚು ಹಿಡ್ಯಾಕ ಹೆಂಗ ಮಾತಾಡ್ತಾನ? ಆ ಪೋಸರ ಹೆಂಗ ಕೊಟ್ಟು ನಿಂತಾನ್ನೋಡ್ರಿ ನನ್ನ ಹೊಟ್ಟಿ ಉರ್ಯಾಕ?

ಭೋಜರಾಜ– ನೋಡ್ತಿದೀನಪ್ಪಾ ನೋಡ್ತಿದಿನಿ. ಲೇ ರಂಗ್ಯಾ ಈ ಭೋಜರಾಜನ್ನ ಕೆಣಕಿ ಬದ್ಕೊದು ಬಾಳಕಷ್ಟ ಈ ಮಾತು ನೆನಪಿಟ್ಕೊಳಲೆ ನೆನ ಪಿಟ್ಕೊ. ನಡಿಯಲಿ ಮೂರ್ತಿ.

(ಹೋಗುವನು)

ಮೂರ್ತಿ- ನನ್ಮಾತೂ ನೆನಪಿಟ್ಕೊಳಲೇ, ಇನ ರ ಇಕಿನ ಕೆ.ಬಿಟಿ. ಭಲೋ ಆತು. ಇಲ್ಲಾಂದ್ರೆ...

ರಂಗ– ಏನ್ಮಾಡ್ತಿಯಾ?

ಮೂರ್ತಿ– ಒಬ್ಬಾವನ ಸಿಕ್ಕಾಗ ಹೇಳ್ತೀನಿ ಮಗನ. (ನಿಂತು) ಲೇ ಲಿಲ್ಲಿ......

ಲಿಲ್ಲಿ– ಯಾಕಲೇ ಗ್ರಹಚಾರ ಕೆಟ್ಟವನ. (ಬಳಿ ಬರ್‍ತಾಳೆ)

ಮೂರ್ತಿ– ಹೊಗ ನಿನೌನು ಹಾಳಾಗ್ಹೋಗು. (ಹೋಗುವನು)

ರಂಗ– ಮತ್ತೇನು ಲಿಲ್ಲಿ ಸಮಾಚಾರ?

ಲಿಲ್ಲಿ– ಹೊಗ ನಿನ್ಜೊತೆ ಮಾತಾಡಾಕ ನಾಚಿಗಿ ಬರುತ್ತ.

ರಂಗ– ನಾಚಿಗಿ? ಒಮ್ಮಿಗೆ ಯಾಕ ಬಡುಕೊಂತದ?

ಲಿಲ್ಲಿ– ನೀ ನನಗ ಲವ್ವರ್ ಅಂದೆಲ್ಲ.

ರಂಗ– ಅದಕ ನಾಚಿಗಿ ಬಂತೇನು? ಅನಾದಿ, ಆ ನನ್ನ ಮಕ್ಳ ಕೈಯಿಂದ ನಿನ್ನ ಪಾರು ಮಾಡೋ ಸಲುವಾಗಿ ಹಂಗ ನಾಟಕ ಮಾಡಿದೆ.

ಲಿಲ್ಲಿ– ಹಂಗಾರ ನನ್ನ ಲವ್ ಮಾಡದಿಲ್ಲ?

ರಂಗ– ಎಲ್ಲಿ ಲವ್ ತರ್‍ಲಿ, ಮನಸಿನ ತುಂಬಾ ಬರೆ ನೋವೆ ತುಂಬೇತಿ. ಮನುಷ್ಯಾ ನಾ ಕಂಡೀಪನ್ನಿಲ್ಲೇ ಲಿಲ್ಲಿ.

ಲಿಲ್ಲಿ– ಥೂ. ಸ್ವಲ್ಪರ ಕರುಣೆಲ್ಲಲ್ಲ ನಿನಗ. ನನ್ನ ಜೀವನ ಹಾಳು ಮಾಡಾಕ. ಬೀದಿ ನಾಯಿಗಳು ಬೆನ್ನು ಬಿದ್ದಿರೋದು ಕಣ್ಣಾರೆ ಕಂಡ್ರೂ. ನಿನ್ನ ಕಲ್ಲು ಹೃದಯ ಕರಗುವಲ್ಲದಲ್ಲ. ಅತು ಬಿಡು ಒತ್ತಾಯದ ಪ್ರೀತಿ ಜೀವನಕ್ಕ ಕುತ್ತಾಗುತ್ತಂತ. ಸುಮ್ನ ನನ್ನಾಸೆ ಸಲುವಾಗಿ ನಿನಗ್ಯಾಕ ನಿರಾಸೆ ಮಾಡ್ಬೇಕು? ನನ್ನ ಹಣೆಬರ್‍ದಾಗಿದ್ದುದ್ದ ನಾ ಉಣ್ತೇನಿ. ಬರ್‍ತೀನಿ ರಂಗು.

ರಂಗ– ಹುಚ್ಚಿ ನಿಂದ್ರು. ನೀತಿವಂತ ಹೆಣ್ಣಿನ ಕಣ್ಣಾಗ ನೀರು ಹರಿಸುವಂತ ನೀಚ ನಾನಲ್ಲ. ನನ್ನ ಪರೀಕ್ಷೆಯೊಳಗ ನೀ ಗೆದ್ದಿ, ನನ್ನ ಮನಸ್ಸು ಕದ್ದಿ.

ಲಿಲ್ಲಿ– ಅಂದ್ರ ನೀನು...

ರಂಗ– ಲವ್ ಮಾಡಾಕ ರೆಡಿ.

ಲಿಲ್ಲಿ– ಖರೇನ ನೀ ಹೇಳೋದು?

ರಂಗ– ಸುಳ್ಳು ಹೇಳಾಕ, ನನ್ನೇನು ಹೈಬ್ರಿಡ್ ಪ್ರೇಮಿ ಅಂತ ತಿಳದಿಯೇನು?

ಲಿಲ್ಲಿ– ಮತ್ತೆ, ಎಷ್ಟು ಹೆದರಿಸಿದ್ದೆಲ್ಲ?

ರಂಗ– ಪ್ರೇಮದ ವಿಷಯ ಹೆದರಿಕೊಂತ, ಹೆದರ್ಸಿಕೊಂತನ ಪ್ರಾರಂಭಾಗಬೇಕು, ಅಂದ್ರ ಸ್ವಾರಸ್ಯಿರುತ್ತೆ. ಅವಸ್ರಕ ಬಿದ್ರ ಸಕ್ರಿ ತಿಂದು ಚಾ ಕುಡ್ದಂಗಾಗುತ್ತೆ.

ಲಿಲ್ಲಿ– ಛೀ ಛೀ ನಮ್ಮ ಪ್ರೇಮ ಸಪ್ಪಾಗಬಾರದು. ಸಾಯುತನ ಹುರುಪಿನ್ಯಾಗ ಇರಬೇಕು.

ರಂಗ– ಎಪ್ಪತ್ತು ಕಳೆದ್ರೂ, ನೀ ಒಪ್ಪಿರಬೇಕು ಅಂತ ಗಂಡ್ಸದಿ.

ಪದ

## ಹನ್ನೊಂದನೆಯ ದೃಶ್ಯ

### ಕಟ್ ಜಂಗಲ್

(ವಿಶಾಲ ಬರುವಳು)

ವಿಶಾಲ– ಹೆಣ್ತನ ಕಳೆದುಕೊಂಡ ಹೆಣ್ಣಿಗೂ, ಮಣ್ಣು ಸೇರುವ ಹೆಣಕ್ಕೂ ಯಾವ ವ್ಯತ್ಯಾಸವೂ ಇಲ್ಲ. ಆದರೂ, ಹೆಣ್ತನ ಕಳೆದುಕೊಂಡು ಬದುಕುವ ಹೆಣ್ಣಿಗಿಂತಲೂ ಈ ಮಾನವ ಪ್ರಪಂಚವನ್ನೇ ಮರೆತು ಮಣ್ಣು ಸೇರುವ ಹೆಣವೇ ಎಷ್ಟೋ ಪಾಲು ಮೇಲು ಅಂದಾಗ, ನಾನು ಬದುಕುವುದರಲ್ಲಿ ಅರ್ಥವೇನಿದೆ? ಶೀಲ ಕಳೆದುಕೊಂಡಿರುವ ನಾನು ಈ ಸಮಾಜದಲ್ಲಿ ಮಾದರಿ ಹೆಣ್ಣಾಗಿ ಬದುಕಲು ಸಾಧ್ಯವಿದೆಯೇ? ಬದುಕಿದರೂ ಅದಕ್ಕೊಂದು ಬೆಲೆ ಇದೆಯೇ? ಬೆಲೆ ಇದ್ದರೂ, ಆ ಬದುಕಿಗೆ ನಿರ್ದಿಷ್ಟವಾದ ನೆಲೆ ಸಿಗುತ್ತದೆಯೇ? ನೆಲೆ ಸಿಕ್ಕರೂ, ನನ್ನ ಶೀಲವನ್ನು ಕೊಲೆ ಮಾಡಿದವರ ತಲೆ ತೆಗೆಯಲು ನನ್ನಿಂದಾಗುತ್ತದೆಯೇ? ಖಂಡಿತಾ ಸಾಧ್ಯವಿಲ್ಲ. ಈ ಕಲಿಯುಗದ ಒಬ್ಬ ನೀಚ ಪುರುಷರ ತಲೆಗಳು, ಹೆಣ್ಣಿನ ಪಾಲಿಗೆ ಮಾರಕವಾಗಿ ಸೃಷ್ಟಿಯಾಗುತ್ತಲೆ ಇರುತ್ತವೆ. ಅಂದಾಗ, ಇಂಥವರ ತಲೆ ತೆಗಿಯುವ ಹುಚ್ಚು ಸಾಹಸ ಮಾಡುವುದಕ್ಕಿಂತ ನನ್ನ ಪ್ರಾಣ ಕಳೆದುಕೊಳ್ಳುವುದೇ ಲೇಸಲ್ಲವೆ?

(ನಗು) ಈ ಪ್ರಶ್ನೆಗೆ ಮತ್ತೊಬ್ಬರ ಉತ್ತರ ಕಾಯುವುದಕ್ಕಿಂತ, ನಾನೇ ಸತ್ತು ಹೋಗುತ್ತೇನೆ.

(ಹೋಗುವಾಗ ಧರ್ಮಯ್ಯ ಬರುವನು)

ಧರ್ಮಯ್ಯ– ನಿಲ್ಲು ತಾಯಿ.

ವಿಶಾಲ– ನೀವು......?

ಧರ್ಮಯ್ಯ– ಯಾಕಮ್ಮ, ನನ್ನ ಗುರ್ತು ಸಿಗಲಿಲ್ಲವೆ?

ವಿಶಾಲ– (ನೆನಪಾದವಳಂತೆ) ಅಂದು, ಆ ನೀಚರ ಮನೆಯಿಂದ ಹೊರ ಬೀಳುವಾಗ......

ಧರ್ಮಯ್ಯ– "ಹೆಣ್ಣಿನ ರೂಪದಲ್ಲಿ ಕಾಣುವ ನರರಾಕ್ಷಸಿಯನ್ನುವ ಮಾತನ್ನು ನಿನ್ನ ಬಾಯಿಂದ ಕೇಳಿದವನೂ ನಾನೆ. ನರರಾಕ್ಷಸಿಯಾಗಬೇಕಾದವ ಳಿಂದಲೇ ಸತ್ತು ಹೋಗುತ್ತೇನೆನ್ನುವ ಮಾತನ್ನು ಇಂದು ಕೇಳಿದವನೂ ನಾನೆ,

ವಿಶಾಲ– ಮನುಷ್ಯರನ್ನೇ ತಿಂದು ತೇಗುವ ರಾಕ್ಷಸರು ತುಂಬಿಕೊಂಡಿದ್ದಾರೆ ಇಂದಿನ ಸಮಾಜದಲ್ಲಿ. ಅಂದಾಗ ನನ್ನಂತ ಅಬಲೆ ಹೆಣ್ಣು, ರಾಕ್ಷಸಿಯ ವೇಷ ಹಾಕುವ ಸಾಹಸ ಮಾಡಿದ್ರು, ಆ ನಿಜವಾದ ರಾಕ್ಷಸರನ್ನು ನಾಶ ಮಾಡಲು ನನ್ನಿಂದ ಸಾಧ್ಯವಿದೆಯೇ?

ಧರ್ಮಯ್ಯ– ನೋಡಮ್ಮಾ. ಯಾವ ಕಾರ್ಯವನ್ನು ಸತ್ಯದ ಹಾದಿ ಯಲ್ಲಿ ಸಾಧಿಸಲು ಸಾಧ್ಯವಿಲ್ಲವೋ. ಆ ಕಾರ್ಯವನ್ನು ಮೋಸದಿಂದಾದರೂ ಸಾಧಿಸುವ ಧೈರ್ಯ ಮಾಡಬೇಕು.

ವಿಶಾಲ– ಧೈರ್ಯ ಈ ಕಾಲದಲ್ಲಿ? ಅದೂ ನನ್ನಂತ ಅಬಲೆ ಹೆಣ್ಣಿನಲ್ಲಿ? (ನಗು) ಯಜಮಾನ್ರೆ, "ಪ್ರೇಮ" ಅನ್ನುವ ಕುರುಡಿಯನ್ನು "ಕಾಮ" ಅನ್ನುವ ಕಟುಕ, "ಬಲತ್ಕಾರ" ಅನ್ನುವ ನೀರಿಲ್ಲದ ಭಾವಿಗೆ ತಳ್ಳಿ, "ನೀನು ಸಾಯುವುದಿಲ್ಲ, ಧೈರ್ಯವಾಗಿರು ಅಂತ, ಮೇಲೆ ನಿಂತುಕೊಂಡ್ರೆ ಬಾಯಿ ಬಡಿದುಕೊಂಡರೆ, ಆ ಕುರುಡಿಗೆ ಧೈರ್ಯ ಬರುವುದಾದರೂ ಹೇಗೆ? ಆಸರೆ ಕೊಟ್ಟು ಮೇಲೆತ್ತಿಕೊಳ್ಳುವ ದೊಡ್ಡ ಗುಣ ಆ ಕಟುಕನಿಗೆ ಬಂದರಲ್ಲವೆ! ಕುರು

ಡಿಗೆ ಧೈರ್ಯ, ಸ್ಥೈರ್ಯ ಬರುವುದೇ? ಅದೂ ನಿಜಾನೆ. ನನ್ನಂತವಳ ಧೈರ್ಯ, ಸ್ಥೈರ್ಯಕ್ಕೆ. ಈ ಕಾಲವೇ ಎದುರಾಗಿ ನಿಂತಿರುವಾಗ, ಪಾಪ! ಆ ಕಟುಕನಸಣ್ಣ ತನವೇನೂ ತಪ್ಪಲ್ಲ. ನಂಬಿದವರ ನಾಲಿಗೆಯ ಮೇಲೆ ನಂಜು ಸುರಿಸುವ ಕಾಲ ಯಜಮಾನ್ರೆ ಇದು.

ಧರ್ಮಯ್ಯ– ಹುಚ್ಚಮ್ಮಾ. ಕಾಲ. ತನ್ನ ದೈನಂದಿನ ಕರ್ತವ್ಯವನ್ನು ಪಾಲಿಸುತ್ತಿದೆ. ಆದರೆ. ಸೃಷ್ಟಿಯ ಮೂಲವನ್ನು ಹಾಳು ಮಾಡಲು ಹೊಂಚು ಹಾಕುತ್ತಿಲ್ಲ. ನಿನ್ನಂತೆ ಶೀಲ ಕಳೆದುಕೊಂಡವರು ಕಾಲವನ್ನು ಹೀಯಾಳಿಸು ತ್ತಾರೆ. ದುಡಿದು ಹೊಟ್ಟೆ ತುಂಬಿಸಿಕೊಳ್ಳಲಾಗದ ಹೇಡಿಗಳು, ಸಮಾಜವನ್ನು ಜರಿಯುತ್ತಾರೆ. ಇನ್ನು ನಾವೇ ಬುದ್ಧಿವಂತರೆಂದು ತಮ್ಮಷ್ಟಕ್ಕೆ ತಾವೇ ತಿಳಿದು ಕೊಂಡವರ ಕಣ್ಣಿಗೆ ಈ ಜಗದ ಜನರೆಲ್ಲರೂ ಕುರಿಗಳಂತೆ ಕಾಣುತ್ತಾರೆ. ಆದರೆ ಕಾಲವನ್ನು ಹೀಯಾಳಿಸುವವರಾಗಲಿ, ಸಮಾಜವನ್ನು ಜರಿಯುವವರಾಗಲಿ, ಜನರನ್ನು ಕುರಿಗಳಂತೆ ಕಾಣುವವರಾಗಲಿ ಅಸ್ತು ಅನ್ನಿಸಿಕೊಳ್ಳುವ ಪುಣ್ಯ ಜೀವಿಗಳಲಾಗುವುದಿಲ್ಲ. ತಿಪ್ಪೆಯಲ್ಲಿ ಬಿದ್ದು ಕೊಳೆತು ಹೋಗುವ ಕಸವಾಗು ತ್ತಾರೆ. ಕಾರಣ, ಪೆಟ್ಟು ತಿಂದವರು ಕಾಲವನ್ನು ಹೀಯಾಳಿಸಬಾರದು. ಆ ಕಾಲ ವನ್ನೇ ಬಳಸಿಕೊಂಡು ಜಯ ಗಳಿಸುವ ಬುದ್ಧಿವಂತಿಗೆ ಮಾಡಬೇಕು.

ವಿಶಾಲ– ನಿಮ್ಮಾತು ಕೇಳಿದ್ರೆ, ನನ್ನಂತೆ ನಿಮ್ಮ ಜೀವನದ ಕಥೆಯೂ...

ಧರ್ಮಯ್ಯ– ವ್ಯಥೆಯನ್ನೇ ಹೆಣೆದುಕೊಂಡ ಸತ್ಯ ಕಥೆಯಮ್ಮ.

ವಿಶಾಲ– ಆ ನಿಮ್ಮ ವ್ಯಥೆಯ ಕಥೆ ಏನೆಂದು ನಾನು ಕೇಳಬಹುದೇ?

ಧರ್ಮಯ್ಯ– ಕೇಳುವುದು ನಿನ್ನ ಧರ್ಮ, ಹೇಳುವುದು ನನ್ನ ಕರ್ತವ್ಯ ಒಪ್ತೀನಿ. ಆದರೆ, ಆತ್ಮಹತ್ಯೆ ಮಾಡಿಕೊಂಡು ಮಣ್ಣು ಸೇರಲು ಹೊರಟಿರುವ ನಿನ್ಮುಂದೆ ನನ್ನ ಕಥೆ ಹೇಳಿದ್ರೆ, ಹೇಡಿಯ ಬೆನ್ನು ಬಿದ್ದ ಕರ್ಮಗೇಡಿ ನಾನಾ ಗ್ತೀನಿ.

ವಿಶಾಲ– ಅಂದ್ರೆ...?

ಧರ್ಮಯ್ಯ– ಛಲ ಸಾಧಿಸಲು ಹೊರಟವನು,ಬಲವಿಲ್ಲದವನ ಸಹಾಯ

ಕೇಳಿದ್ರೆ, ಈಜಲು ಬಾರದ ಮೂರ್ಖರಿಬ್ಬರು ಜೂಜು ಕಟ್ಟಿಕೊಂಡು ನದಿಗೆ ಬಿದ್ದು ಪ್ರಾಣ ಬಿಟ್ಟಂತಾಗುವುದಿಲ್ಲವೆ?

ವಿಶಾಲ– ನೀವೀಗ ನನ್ನ ಸಹಾಯ ಯೋಚಿಸಲು ಬಂದಿದ್ದೀರಾ?

ಧರ್ಮಯ್ಯ– ಯಾಚನೆಯಲ್ಲಮ್ಮಾ. ನಮ್ಮಿಬ್ಬರ ಗುರಿ ಸಾಧಿಸುವ ಯೋಚನೆ ಯಾವ ತಂದೆ ಮಗ ನಿನ್ನ ಶೀಲ ಕಳೆದು ಈ ಸ್ಥಿತಿಗೆ ತಂದರೊ ಆ ಚಂಡಾಲರೆ ನನ್ನ ಮಗಳ ಮಾನ ಕಳೆದು ಸಾವಿಗೀಡು ಮಾಡಿದರು ಅಷ್ಟೇ ಅಲ್ಲ, ಈಗ ಮತ್ತೊಂದು ನಿರಪರಾಧಿ ಹೆಣ್ಣಿನ ಬಾಳಿಗೆ ಬಿರುಗಾಳಿಯಾಗಿ ನಿಂತಿದ್ದಾರೆ. ನಿನ್ನ ವೈರಿ ಕದ್ದ ಮೂರನೇ ವ್ಯಕ್ತಿ ಆ ಅರವಿಂದನೊಂದಿಗೆ.

ವಿಶಾಲ– ನಿಮ್ಮಾತು ನಿಜವೆ?

ಧರ್ಮಯ್ಯ– ಸುಳ್ಳು ಹೇಳಿ ನಾನು ಸಾಧಿಸುವುದಾದರೂ ಏನಿದೆ ತಾಯಿ? ನೋಡಮ್ಮ ನೀನು ಸಾಯಲು ಹೊರಟಿದ್ದಿಯಾ. ಆದರೆ ಆ ನಿನ್ನ ಸಾವು ಸಾರ್ಥಕವಾಗಬೇಕು. ಈ ಕಾಮುಕರು ಮುತ್ತಿಗೆ ಹಾಕಿರುವ ಮುಗ್ಧ ಹೆಣ್ಣಿನ ಶೀಲ ಉಳಿಸುವ ಪುಣ್ಯ ಜೀವಿ ನೀನಾಗಬೇಕು. ಕಾರಣ ಆತ್ಮಹತ್ಯೆಗೆ ಹೊರಟಿರುವ ನಿರ್ಧಾರವನ್ನು ಬದಲಿಸಿ, ಈ ನೀಚರ ಸಂಹಾರಕೆ, ಕಂಕಣ ಕಟ್ಟಿ ನಿಲ್ಲು ತಾಯಿ.

ವಿಶಾಲ– ಅದು ನನ್ನಿಂದ ಸಾಧ್ಯವಿದೆಯೇ?

ಧರ್ಮಯ್ಯ– ರೊಚ್ಚಿಗೆದ್ದ ಹೆಣ್ಣಿಗೆ ಅಸಾಧ್ಯವಾದದ್ದು ಇತಿಹಾಸದಲ್ಲೇ ಯಾವುದೂ ಇಲ್ಲಮ್ಮಾ, ನೀನೇ ವಿಚಾರಿಸಿ ನೋಡು ಏನೂ ಅರಿಯದ ಮುಗ್ಧ ಹೆಣ್ಣಿನ ಬಾಳು ಈ ರಾಕ್ಷಸರಿಂದ ನಾಶವಾಗುವುದು ನ್ಯಾಯವೆ? ಭೋಗಕ್ಕೋಸ್ಕರವಾಗಿಯೇ ಬದುಕಿ, ತ್ಯಾಗದ ಸೋಗಿನಲ್ಲಿ. ಹೆಣ್ಣಿನ ಮನಗಳನ್ನು ಮಲೀನ ಮಾಡುವ ಇಂಥಾ ಕಾಮಾಂಧರ ಕಾಲ ಕಸವಾಗುವುದು ಧರ್ಮವೆ? ಸಮಾಜದಲ್ಲಿ ಸಾವಿರಾರು ಹೆಣ್ಣುಗಳ ಬಾಳು ಹಾಳಾಗುವುದನ್ನು ತಡೆಯಲು ಸಾಧ್ಯವಿಲ್ಲದಿದ್ದರೂ ಕಣ್ಣೆದುರಿಗೆ ಹಾಳಾಗುತ್ತಿರುವ ಈ ಒಂದು ಹೆಣ್ಣಿನ ಬಾಳನ್ನಾದರೂ ಉಳಿಸೋಣವೇ ಇಲ್ಲಾ ನಾವೇ ಅಳಿಸಿ ಹಾಕೋಣವೆ? ಅಥವಾ ನಾವೇ ಹಾಳಾದವರು, ಮತ್ತೊಬ್ಬರ ಬಾಳನ್ನೇಕೆ ಬೆಳಗಿಸುವ ಮೂರ್ಖತನ ಮಾಡೋಣವೆಂದು ನಾವೇ ಸತ್ತು ಮಣ್ಣು ಸೇರೋಣವೆ?

ವಿಶಾಲ– ಇಲ್ಲ ಯಜಮಾನ್ರೆ ಇಲ್ಲ, ಮಣ್ಣು ಸೇರಬೇಕಾದವರು ನಾವಲ್ಲ, ಮಾನವಂತ ಹೆಣ್ಣುಗಳೊಂದಿಗೆ ಚಲ್ಲಾಟವಾಡುವ ಆ ಕಾಮುಕ ಪಿಶಾಚಿಗಳು, (ನಿರ್ಧಾರವಾಗಿ) ಯಜಮಾನ್ರೆ, ಸಾಯುವ ನಿರ್ಧಾರವನ್ನು ಬದಲಿಸಿ, ಆ ನೀಚರ ಸಂಹಾರಕ್ಕೆ ಸಿದ್ಧಳಾಗಿದ್ದೇನೆ. ಹೇಳಿ ಪಾಪಿಗಳ ತಲೆ ಗಳನ್ನು ವೆಲಕ್ಕುರುಳಿಸಲು ನಾನೇನು ಮಾಡಲಿ? ಚಂಡಿಯಾಗಲೆ, ಚಾಮುಂಡಿ ಯಾಗಲೆ? ಅಥವಾ ಆ ಭಂಡರಿಗೂ ಮಿಗಿಲಾದ ಜಗಭಂಡಳಾಗಿ, ಅವರ ರುಂಡ ಮುಂಡಗಳನ್ನು ಚಂಡಾಡಲು ದುರ್ಗಿಯಾಗಿ ನಿಲ್ಲಲೇ?

ಧರ್ಮಯ್ಯ– ದುರ್ಗಿಯಾಗಿ ನಿಲ್ಲಲೇ ಎಂದು ಕೇಳುವ ಸಮಯಕ್ಕೆ ಆಸ್ಪದವೆಲ್ಲಿದೆಯಮ್ಮ? ಬೆಳಗಾದರೆ ಆ ಹೆಣ್ಣಿನ ಬಾಳು ಹರಿದು ಚಿಂದಿ ಯಾಗುವ ಪರಿಸ್ಥಿಯಲ್ಲಿದೆ. ಅಂಟುರೋಗದ ಸಂಕೇತವಾಗಿರುವ ಅವರನ್ನು ಜೀವದಿಂದಿರಲು ಬಿಟ್ಟರೆ, ಇಡೀ ಹೆಣ್ಣು ಕುಲವೇ ನಿನ್ನಂತೆ ಸಾವಿನ ದವಡೆಗೆ ತುತ್ತಾಗಲು ಸಿದ್ಧರಾಗಿ ನಿಲ್ಲಬೇಕಾಗುತ್ತದೆ. ಕಾರಣ ಬದುಕು ನಿರಸವಾಗಿರುವ ನಮ್ಮಿಬ್ಬರ ಜೀವ ಕೊಸರಿ ಹೋದರೂ ಚಿಂತೆಯಿಲ್ಲ, ಆ ಪಾಪಿಗಳ ಉಸಿರನ್ನು ನಾಮಶೇಷ ಮಾಡಲೇ ಬೇಕು. ಕಾಲ ಕಳೆಯುವುದರಲ್ಲಿ ಅರ್ಥವಿಲ್ಲ. (ಅಡ್ರೆಸ್ ಕಾರ್ಡ್ ತೆಗೆದು) ತಗೋಳಮ್ಮ ನೀನು ನೇರವಾಗಿ ವಿಳಾಸಕ್ಕೋಗು.ನಾನ್ಹಿಂದಿ ನಿಂದ ಬರ್‍ತಿನಿ.

ವಿಶಾಲ– ಸರಿ ಯಜಮಾನ್ರೆ (ಹೋಗುವಳು)

ಧರ್ಮಯ್ಯ– ಅಂತೂ ರೊಚ್ಚಿಗೆದ್ದ ಈ ಹೆಣ್ಣು ಸರ್ಪದಿಂದ ಆ ನೀಚರ ನಾಶವಾಗುವ ಭರವಸೆ ಮೂಡಿದಂತಾಯಿತು.(ಆ ಕಡೆ ನೋಡಿ) ಓ, ಅರವಿಂದ ವನಜ ಈ ಕಡೆನ ಬರ್‍ತಾಯಿದ್ದಾರೆ, ಬರ್‍ಲಿ (ಮರೆಯಾಗುವನು)

(ಅರವಿಂದ–ವನಜ ಹಾಡುತ್ತ ಬರುವರು)

ವನಜ– ಅರವಿಂದ ನಮ್ಮಾವನವರು ಮುಂದಿನ ವಾರದಲ್ಲಿ ನಮ್ಮ ಮದುವೆ ನಿಶ್ಚಯಿಸಿದ್ದು ನನಗೆಷ್ಟು ಸಂತೋಷವಾಗಿದೆ ಗೊತ್ತಾ?

ಅರವಿಂದ– ನಿನಗೇನು ಸಂತೋಷವಾಗಿದೆ. ಆದರೆ ಇನ್ನು ಒಂದು ವಾರ ಕಾಯ್ಬೇಕಲ್ಲ, ಅಂತ ನನಗೆ ಸಂಕಟವಾಗ್ತಾಯಿದೆ,

ವನಜ– ಪಾರ ಅನ್ನುವುದು ನಿಮಗಷ್ಟು ದೂರವಾಗಿ ತೋರುತ್ತಿದೆ ಯೇನು?

ಅರವಿಂದ– ದೂರವಷ್ಟೇ ಅಲ್ಲ, ಭಾರವಾಗ್ತಾ ಇದೆ. ನೋಡು, ಭಾಗ್ಯ ಬರುವ ಸಮಯದಲ್ಲಿ ಅಯೋಗ್ಯರ ಹಾವಳಿ ಬಹಳ. ಕಾರಣ, ಬರುವ ಭಾಗ್ಯ ಆದಷ್ಟು ಬೇಗ ಬಂದರೆ ಒಳ್ಳೆಯದಲ್ಲವೆ ?

ವನಜ– ಭಾಗ್ಯ ಅಂದರೆ ನಿಮ್ಮ ದೃಷ್ಟಿಯಲ್ಲಿ...?

ಅರವಿಂದ– ನೀನು ಹುಚ್ಚಿ, ನಿನ್ನ ಸಂಪತ್ತಿಗೆ ಆ ಸಂಕೇತ ಕೊಟ್ಟೆನೆಂದು ತಿಳಿದರೆ, ನನ್ನನ್ನು ಅರ್ಥಮಾಡಿಕೊಂಡಿದ್ದೇ ವ್ಯರ್ಥ. ನಾನೀ ಪ್ರಾಣದೇವತೆಗೆ ಭಾಗ್ಯ ಎಂದು ಕರೆದೆನೇ ಹೊರತು...

ವನಜ– ನೋಡಿ ಅರವಿಂದ್, ಪ್ರೀತಿಗೆ ಕಣ್ಣಿಲ್ಲ. ಅದು ಮತ್ತೊಬ್ಬರಿಗೆ ಕಾಣುವುದೂ ಇಲ್ಲ. ಆದರೆ, ಪ್ರೀತಿಸಿದವನು ತನ್ನ ಪ್ರಿಯತಮೆಗೆ, ಹಾಲು ತುಂಬಿದೆಯೆಂದು ತಂದು ಕೊಟ್ಟ ಕಪ್ಪು ಸೀಸೆಯಲ್ಲಿ ಹಾಲಿದೆಯೋ, ಹಾಲಾ ಹಲವಿದೆಯೋ ಎಂದು ಪರೀಕ್ಷಿಸದೆ ಕುಡಿಯುವುದು, ಆ ಪ್ರಿಯತಮೆಯ ಮೂರ್ಖತವಲ್ಲ, ಅವಳ ಆದರ್ಶ ಪ್ರೀತಿಯ ಪ್ರತೀಕ.

(ಧರ್ಮಯ್ಯ ಬರುವನು)

ಧರ್ಮಯ್ಯ– ಆ ಪ್ರತೀಕ ಅತಿರೇಕವಾದಾಗ, ಆಪತ್ತುಗಳು ಮುತ್ತುವ ಸಂಭವ ಬಹಳವಮ್ಮ.

ವನಜ– ಏನ್ಹೇಳ್ತಿದಿರಿ ಧರ್ಮಯ್ಯ.

ಧರ್ಮಯ್ಯ– ಅಂಥಾದ್ದೇನೂ ಇಲ್ಲಮ್ಮ. ನೀವೇಳಿದ ಆದರ್ಶ ಪ್ರೇಮಿ ಗಳ ನಿದರ್ಶನ ಕೇಳಿದೆ. ಕೆಲ ಗಂಡಿನ ಪ್ರೀತಿಯ ಹಿನ್ನೆಲೆಯಲ್ಲಿ ಸ್ವಾರ್ಥವಿರುವು ದನ್ನು ತಿಳಿಯದೆ, ತಿಪ್ಪೆ ಕಸವಾಗಿರುವ ಕೆಲ ಹೆಣ್ಣುಗಳ ನೆನಪಾಗಿ, ಸಣ್ಣ ಉದಾಹರಣೆ ಕೊಟ್ಟೆನಷ್ಟೆ.

ವನಜ– ನಿಮ್ಮ ಉದಾಹರಣೆಗೆ ನನ್ನ ಅರವಿಂದರು ಹೋಣೆಯಾಗುವು ದಿಲ್ಲ. ಆ ಭರವಸೆ ನನಗಿದೆ.

ಅರವಿಂದ– ವನಜ, ನಮ್ಮ ಪ್ರೀತಿ ಸಾಚ ಎಂದು ಇವರಿಗೆ ಪರಿಚಯವಾಗುವತನಕ, ನಮ್ಮ ಪ್ರೀತಿ ಅರಿವಾಗುವದಿಲ್ಲ ಅಲ್ಲವೆ ಧರ್ಮಯ್ಯ.

ಧರ್ಮಯ್ಯ– ನಾನು ವಯಸ್ಸು ಕಳೆದ್ರೂ, ನಿಮ್ಮನುಭವ ನನಗಾಗಿಲ್ಲ ಸಾಹೇಬ್ರೆ. ಆದರೆ ನನಗೆ ತಿಳಿದಿರುವುದಿಷ್ಟೆ. "ಬೆಳ್ಳಗಿರುವುದೆಲ್ಲಾ ಹಾಲೆಂದು ತಿಳಿಯುವ ಮೂರ್ಖ ಜನ ಬಹಳ ಇದ್ದಾರೆ, ಕಳ್ಳರ ಸುಳ್ಳು ಪ್ರೀತಿಯು ತಿರುಳು ತಿಳಿಯದ ತಿಳಿಗೇಡಿಗಳಿದ್ದಾರೆ" ಎಂದು. ಈ ಮಾತನ್ನು ಎಲ್ಲ ಬಲ್ಲ ತಮಗೇಳುವುದರಲ್ಲಿ ಅರ್ಥವಿಲ್ಲವೆಂದು ನನ್ನ ಭಾವನೆ. ಇದಕ್ಕೆ ನೀವೇನಂತೀರಿ ?

ವನಜ– ಅವರೇನಂತಾರೆ? ಕಳ್ಳ ಸುಳ್ಳರ ಪ್ರೀತಿ ನಮ್ಮದಲ್ಲ ಅಂತಾರಷ್ಟೆ. (ನಗುತ್ತಾ) ಒಳ್ಳೆ ಧರ್ಮಯ್ಯ. ಅರವಿಂದ, ಇವರು ಯಾವಾಗಲೂ ಹೀಗೆನೆ. ಆಗಿ ಹೋದ ಚರಿತ್ರೆಗಳನ್ನು ನನ್ನ ಮುಂದೆ ಉದಾಹರಣೆಗಳನ್ನಾಗಿ ನಿಲ್ಲಿಸ್ತಿರ್ತಾರೆ.

ಅರವಿಂದ– ಇವರ ಮನಸ್ಸು ಹಸುಗೂಸಿನಂತಾದ್ದು ಅಂತ ನನಗೊತ್ತಿದೆ ವನಜ ಸರಿ. ನೀ ಮುಂದಾಗು, ಸಧ್ಯ ನಿನ್ನ ಹಿಂದೆನೆ ನಾವೂ ಬರ್ತೀವಿ.

ವನಜ– ಸರಿ ಬೇಗ ಬನ್ನಿ. (ಹೋಗುವಳು)

ಅರವಿಂದ– ಏನು ಧರ್ಮಯ್ಯನವರೆ ಒಗಟಿನ ಮಾತಿನಲ್ಲಿ ನಾನು ಕೆಟ್ಟವನೆಂದು ಎತ್ತಿ ತೋರಿಸುವ ಪ್ರಯತ್ನ ಮಾಡುತ್ತಿದ್ದೀರಿ?

ಧರ್ಮಯ್ಯ– ಕದ್ದು ತಿಂದವರಿಗೆ ಯಾವ ಸುದ್ದಿ ಹೇಳಿದ್ರೂ, ತನಗೇ ತೆಗಳಿದನೆಂದು ತಪ್ಪು ತಿಳಿದುಕೊಳ್ಳುತ್ತಾರೆ. ಆದರೆ, ಅದಕ್ಕೆ ಕಾರಣ ನಾನಲ್ಲ, ಕದ್ದು ತಿಂದವರ ಕರ್ಮ.

ಅರವಿಂದ– ಹಾಗಾದರೆ, ಕದ್ದವನ ಸ್ವಾಳಿವಿನ ಸುದ್ದಿಯನ್ನು ಊರ್ತುಂಬಾ ಹಬ್ಬಿಸುವವನಿಗೆ, ಯಾವ ಕಾಣಿಕೆ ಕೊಡುವುದು ಧರ್ಮವಾಗಬಹುದು, ಆ ಕದ್ದವನ ಪಾಲಿಗೆ?

(ಭೋಜರಾಜ ಬರುವನು)

ಭೋಜರಾಜ– ಅದನ್ನು ಕೇಳಿ ಕೊಡುವುದಕ್ಕಿಂತ, ಕೊಟ್ಟು ಸಂತೋಷಪಡುವುದು ಲೇಸಲ್ಲವೆ ಡಾಕ್ಟ್ರೆ?

ಅರವಿಂದ– ಹಾಗಾದರೆ..., ನಾನು ಕೇಳಿದ್ದು ತಪ್ಪೆ?

ಭೋಜರಾಜ– ತಪ್ಪೊ, ಒಪ್ಪೊ ಒಟ್ಟು ಮನ ಒಪ್ಪುವ ಕಾಣಿಕೆ ಕೊಟ್ಟು ಕರ್ತವ್ಯ ಮುಗಿಸಿದ್ರೆ ತೀರ್ತು, ಏನಂತೀರಾ?

ಧರ್ಮಯ್ಯ– ಮಾತಾಡಿ ಕೆಡುವವರಿಗಿಂತ, ಕೆಟ್ಟು ಮಾತಾಡುವವರಲ್ಲಿ ಅರ್ಥ ಬಹಳ ಇರುತ್ತದೆ. ನೀವು ಕೊಡುವ ಕಾಣಿಕೆಯನ್ನು ಸ್ವೀಕರಿಸಲು ನಾನು ಸಿದ್ಧನಿದ್ದರೂ, ಕೊಡುವ ಯೋಗ್ಯತೆ ನಿಮಗಿರಬೇಕಲ್ಲ.

ಭೋಜರಾಜ– ನಮ್ಮ ಯೋಗ್ಯತೆಯನ್ನು ಪ್ರತ್ಯಕ್ಷ ಪರಿಚಯ ಮಾಡಿ ಕೊಡುತ್ತೇವೆಯೇ ಹೊರತು, ನಿನ್ನಂಥ ಕ್ಷುಲ್ಲಕನಮುಂದೆ ವಿವರಿಸುವ ಮೂರ್ಖ ತನ ಮಾಡುವುದಿಲ್ಲ.

ಅರವಿಂದ– ಸಾರ್, ನಾವು ಇವನನ್ನು ಕ್ಷುಲ್ಲಕನೆಂದು ತಿಳಿದಿದ್ದರೆ, ಇವನು ನಮ್ಮನ್ನು ಲೋಭಿಗಳು ಅಂತ ತಿಳಿದಿದ್ದಾನೆ.

ಭೋಜರಾಜ– ಹೌದೇನೋ ಧರ್ಮಯ್ಯ?

ಧರ್ಮಯ್ಯ– ಅಲ್ಲಾ ಅನ್ನುವ ಮೂರ್ಖತನ ನಾನ್ಯಾಕ ಮಾಡ್ಲಿ? ಲೋಭಿಯನ್ನುವ ಎರಡಕ್ಷರದ ಅರ್ಥವೇ ನೀವು. ನಿಮ್ಮಂತವರನ್ನು ಕಂಡೇ ಆ ಸರ್ವಜ್ಞನು. "ಉಣ್ಣದೊಡವೆಯ ಗಳಿಸಿ, ಮಣ್ಣೊಳಗೆ ಬೈತಿಟ್ಟು, ಚನ್ನಾಗಿ ನೆಲವ ಸಾರಿಸಿದವನ ಬಾಯೊಳಗೆ ಮಣ್ಣು ಕಾಣಯ್ಯಾ ಸರ್ವಜ್ಞ" ಅಂತ ಹೇಳಿದ್ದಾನೆ.

ಭೋಜರಾಜ– ಸರ್ವಜ್ಞ ಹೇಳಿದನ್ನು ಬೊಗಳುವೆಯಾ ಭಿಕಾರಿ?

ಧರ್ಮಯ್ಯ- ಬೊಗಳುತ್ತಿಲ್ಲ, ನಿಮ್ಮ ಹೀನ ಗುಣಗಳನ್ನು ಹೊಗಳು ತ್ತಿದ್ದೇನೆ. ಯೇ ಭೋಜರಾಜ, ನೀನು ಯಾರು? ಮಾಡಿರುವ ಪಾಪವೇನೆಂಬು ದರ ಅರಿವು ನಿನಗಿಲ್ಲದಿದ್ದರೂ, ನನ್ನ ಮಗಳ ಶೀಲಗೆಡಿಸಿ, ಸಾವಿನ ದವಡೆಗೆ ನೂಕಿರುವ ನಿನ್ನ ಮುಖದ ಮರೆವು ಮಾತ್ರ ನನಗಾಗಿಲ್ಲ, ಆಗುವುದೂ ಇಲ್ಲ. ನನ್ನ ಮಗಳ ಸಾವಿಗೆ ಕಾರಣರಾದ, ನಿಮ್ಮ ಪ್ರಾಣ ತೆಗೆಯದೆ ಇಷ್ಟು ದಿನ ಯಾಕೆ ಬಿಟ್ಟಿದ್ದೇನೆ ಗೊತ್ತೆ? ಅಡಗಿರುವ ವಿಷ ಜಂತು ತಾನಾಗಿಯೇ ಬಯ ಲಿಗೆ ಬರಲೆಂದು ಯಾಕಂದ್ರೆ, ಪಾಪಿಗೆ ತಗುಲುವ ಶಾಪವನ್ನು ತಪ್ಪಿಸಲು ಯಾವ ಭೂಪನಿಗೂ ಸಾಧ್ಯವಿಲ್ಲ.

ಭೋಜರಾಜ– ಶಹಭಾಷ್ ಧರ್ಮಯ್ಯ ಶಹಭಾಷ್. ಇದುವರೆಗೂ ಪೆಟ್ಟು ತಿಂದ ಸರ್ಪದ ಪಕ್ಕದಲ್ಲಿ ಮೈಮರೆತು ಮಲಗಿದ್ದ ನನ್ನನ್ನು, ಇಂದು ನೀನೇ ಎಚ್ಚರಿಸಿದೆ. ಇನ್ನು ನಿನ್ನಿಚ್ಛೆಯ ಕಾಣಿಕೆಯನ್ನು ಖಂಡಿತಾ ಕೊಡುತ್ತೇನೆ. ಭೋಗಕ್ಕಾಗಿ ಬದುಕುವವರ ಮುಂದೆ ತ್ಯಾಗಕ್ಕಾಗಿ ಬದುಕುತ್ತೇನೆಂದು ಹೇಳುವ ನಿನ್ನಂತ ಅರಸಿಕನಿಗೆ ನಾ ಕೊಡುವ ಕಾಣಿಕೆ ಇದೆ. (ಗುಂಡು ಹಾರಿಸುವನು. ಧರ್ಮಯ್ಯ ಚೀರಿ ನರಳುತ್ತ)

ಧರ್ಮಯ್ಯ– ಅಯ್ಯೋ ಪಾಪಿ, ಸತ್ಯದ ತಲೆಯ ಮೇಲೆ ಚಪ್ಪಲಿ ಇಡುವ ಮೂರ್ಖನಾದೆಯಾ? (ಬಿದ್ದು ಸಾಯುವನು)

ಭೋಜರಾಜ– ಸತ್ಯಕ್ಕೆ ಸಾವೇ ಹೊರತು ಅಸತ್ಯವನ್ನು ಗೆಲ್ಲುವ ಸಾಮರ್ಥ್ಯ ಈ ಕಲಿಯುಗದಲ್ಲಿ ಬರುವುದಿಲ್ಲ. ನಿನ್ನ ಪ್ರಾಣದ ಪ್ರಯಾಣ ಸುಖಕರವಾಗಲಿ ಗುಡ್ ಬೈ.

ಅರವಿಂದ– ಅಂತೂ ಪ್ರಾಣಿ ಮಣ್ಣು ಸೇರ್ತು.

ಭೋಜರಾಜ– ಇನ್ನೂ ಸೇರಿಲ್ಲ, ಅಪಾಯ ನಮಗೊದಗದಂತೆ ಉಪಾಯವಾಗಿ ನಾವೇ ಸೇರಿಸ್ಬೇಕು. ಬನ್ನಿ ಹೇಳ್ತೀನಿ. (ಹೋಗುವರು)

## ಹನ್ನೆರಡನೆಯ ದೃಶ್ಯ

### ರಸ್ತಾ

ರಂಗ– ಏನಾತಲ್ರಿ ದೇವರಂತಾ ಧರ್ಮಯ್ಯನವರ ಗತಿ? ಹಾಡಗಲೇ ಗುಂಡಿಟ್ಟು ಕೊಂದಾರಲ್ಲ ಚಂಡಾಲ್ರು. ಇವರೇನವ್ರಿಗೆ ಅನ್ಯಾಯ ಮಾಡಿದ್ದಾರು ಅಂತೀನಿ? ಈ ನನ್ನ ಮಕ್ಳು ಸರಳ ಸಾಯುದಿಲ್ಲ, ಕೊಳತು, ಹುಳಬಿದ್ದು, ಗಬ್ಬು ನಾತಿಟ್ಟು ಸಾಯ್ತಾರ. ಪಾಪ, ವನಜಮ್ಮನ ಗೋಳಾಟ ನೋಡಬಾರದ್ರಿ, "ತಂದಿದ್ದಂಗಿದ್ರು, ತಬ್ಲಿ ಮಾಡಿ ಹೋದ್ರು" ಅಂತ ಹೆಣದ ಮ್ಯಾಲ ಬಿದ್ದು ಒಂದ್ಸ ಸವನ ಅತ್ತುಬಿಟ್ರು. ಅವರ ಮ್ಯಾಲ ಅಷ್ಟು ಪ್ರೀತಿನು ಇದ್ರವರು. ಅಂದಲ್ಲೇ ಮಿಲ್ಲಿನ ಮುಂದ ಧರ್ಮಯ್ಯನವ ಮೂರ್ತಿ ನಿಲ್ಲಿಸಿ ಬಿಟ್ಟಾರ.

(ಆ ಕಡೆ ನೋಡಿ) ಅಪ್ಪ, ಮಗ ಈ ಕಡೆನೆ ಬರ್‍ತಾದಾರಲ್ಲ ಬರ್‍ಲಿ, ಬರ್‍ಲಿ (ಮರೆಯಾಗುವನು)

ವಿಕ್ರಂ– ಡ್ಯಾಡಿ ಅವತ್ತು, ನಾ ಹೇಳಿದ ವಿಷಯ ಸತ್ಯವಾಯ್ತಲ್ಲ? ನನಗೆ ಮೊದಲೇ ಗೊತ್ತಿತ್ತು. ಆ ಧರ್ಮಯ್ಯನಿಗೆ ನಮ್ಮ ವಿಷಯ ಗೊತ್ತಿದ್ದೇ, ನಮ್ಮ ನಾಶಕ್ಕೆ ಸಮಯ ಕಾಯ್ತಾಯಿದ್ದ ಅಂತ.

ಭೋಜರಾಜ– ಕರೆಕ್ಟ್ ಮೈ ಸನ್. ಅದಕ್ಕಾಗಿ ಈ ಭೂಪತಿ ಅವನನ್ನೇ ಸರ್ವನಾಶ ಮಾಡಿಬಿಟ್ಟೆ. ಈ ಭೋಜರಾಜನಿಗೆದುರಾಗಿ ನಿಂತವರು ಬಹಳ ಕಾಲ ಈ ಭೂಮಿಯ ಮೇಲೆ ಬದುಕಿರಲು ಸಾಧ್ಯವಿಲ್ಲಪ್ಪಾ.

ವಿಕ್ರಂ– ಸತ್ತವನ ಸುದ್ದಿ ಬಿಡಿ ಡ್ಯಾಡಿ. ಸಧ್ಯ ಆ ವಕೀಲಂತೂ ನಾವು ಹೇಳಿದಂತೆ ವಿಲ್ ಬರೆಯಲು ಒಪ್ಕೊಂಡ. ಆದ್ರೆ ವನಜಾಳಿಂದ ಸಹಿ ಮಾಡಿಸಿ ಕೊಂಡ ಖಾಲಿ ಬಾಂಡ್ ಪೇಪರಿನಲ್ಲಿ ವಿಲ್ ಬರೆಸುವಾಗ, ಆ ಅರದಂದನಿಗೂ ಆಸ್ತಿಯಲ್ಲಿ ಸಮಭಾಗ ಬರಸ್ತೀರೇನು?

ಭೋಜರಾಜ– ಏನಂದೆ? ಅರವಿಂದನಿಗೆ ಆಸ್ತಿಯಲ್ಲಿ ಸಮಭಾಗ? (ನಗು) ಅಯ್ಯೋ ಬೆಪ್ಪ. ನನ್ನ ಹಸಿವಿಗೇ ಸಾಲದ ಅನ್ನದಲ್ಲಿ ಭಿಕ್ಷುಕನಿಗೂ ದಾನ ಮಾಡುವ ಬುದ್ಧಿಗೇಡಿಯಲ್ಲಪ್ಪಾ ಈ ಭೋಜರಾಜ. ಆಳುವುದಾದರೆ ಚಕ್ರ ವರ್ತಿಯಾಗಿ ಆಳುವ ವಿಚಾರ ಮಾಡುತ್ತಾನೆಯೇ ಹೊರತು, ಸಾಮಾನ್ಯ ಸಾಮಂತ ರಾಜನಾಗಿ ಆಳುವ ಹೇಡಿ ವಿಚಾರವನ್ನು ಕನಸಿನಲ್ಲಿಯೂ ಮಾಡುವು ದಿಲ್ಲ. ಬೀಜ ಸಸಿಯಾಗಿ, ಮರವಾಗಿ, ಫಲ ಬಿಡುವುದಕ್ಕಾಗಿ ನಾ ಹಾಕಿದ ಗೊಬ್ಬರವಷ್ಟೆ ಆ ಅರವಿಂದ. ಅದು ಮಣ್ಣಲ್ಲಿ ಮಣ್ಣಾಗುವುದೇ ಹೊರತು, ಹಣ್ಣು ತಿನ್ನುವ ಭಾಗ್ಯವನ್ನು ಬೇಡಿ ಬಂದಿರುವುದಿಲ್ಲ.

ವಿಕ್ರಂ– ಹಾಗಾದ್ರೆ ಅವರ ಮದುವೆ ಅವರ ಪಾಲಿಗೆ ಮಸಣವಾಗುತ್ತೆ ಅನ್ನಿ.

ಭೋಜರಾಜ– ಹೌದು. ಅವರ ಆನಂದದ ಮೊದಲ ರಾತ್ರಿ, ಅವರ ಪಾಲಿಗೆ ಜೀವನದ ಕೊನೆಯ ರಾತ್ರಿಯಾಗಬೇಕು. ಯಾರಿಗೂ ಅನುಮಾನ ಬರದಂತೆ. ಅಂದು ಅವರು ತಿನ್ನುವ ಹಣ್ಣೆನಲ್ಲಾಗಲೀ, ಕುಡಿಯುವ ಹಾಲಿನ

ಲ್ಲಾಗಲಿ ವಿಷ ಬೆರಸಿ ಅವರ ಉಸಿರನ್ನೇ ನಿಲ್ಲಿಸಬೇಕು. ಆಮೇಲೆ, ಆ ಸರ್ವ ಸಂಪತ್ತಿಗೆ ನಾನೇ ಚಕ್ರವರ್ತಿ.

ವಿಕ್ರಂ– ಡ್ಯಾಡಿ, ಇದು ರಸ್ತೆ. ಯಾರಾದ್ರೂ ಕೇಳಿಸಿಕೊಂಡಾರು ನಡಿರಿ, ಮೊದಲು ಅರವಿಂದ, ವನಜಾರ ಮದುವೆ. ಮಂತ್ರಕ್ಕೆ ನಾಂದಿ ಹಾಡೋಣ. (ಹೋಗುವಾಗ ರಂಗ ಬರುವನು) ಲೇ ರಂಗ.

ರಂಗ– ಯಾಕ್ರಿ ಸಾಹೇಬ್ರ?

ವಿಕ್ರಂ– ನಾವಿಲ್ಲಿ ನಿಂತಿದ್ದನ್ನು ನೋಡಿನೂ, ಎದೆ ಸೆಟಿಸಿ ನಮ್ಮುಂದೆನೆ ಹೋಗ್ತಿಯಲ್ಲ. ಎಷ್ಟು ಸೊಕ್ಕಲೆ ನಿನಗೆ?

ಭೋಜರಾಜ– ಇವನಿಗೆ ಕೊಬ್ಬು ಜಾಸ್ತಿ ಆಗಿದೆ. ರಸ್ತೆಯಲ್ಲಿ ನನಗ ಸ್ಯೆತ ಸಿಕ್ಕಂಗ ಮಾತಾಡಿದಾನಿವನು ಅವತ್ತೇ ಇವನ ಸೊಕ್ಕು ಮುರಿತಿದ್ದೆ...

ರಂಗ– ಧೈರ್ಯ ಬರಲಿಲ್ಲ.

ವಿಕ್ರಂ– ರ್‍ಯಾಸ್ಕಲ್, ನಿನ್ನಂತವನ ಕೊಬ್ಬಿಳ್ಯಾಕೆ ಧೈರ್ಯಬೇಕೇನಲೆ?

ರಂಗ– ಧೈರ್ಯ ಅಷ್ಟ ಅಲ್ಲ, ನನ್ನ ತಡವಬೇಕಾದ್ರೆ ಹಣಬರ ಗಟ್ಟಿದ್ದವರ ತಡವಬೇಕು. ಕೊಬ್ಬಿಳ್ಯಾಕ ಬಂದವರ ಮುಬ್ಬು ಬಿಡ್ಸೊ ಭೂಪತಿ ರಂಗಿವನು.

ಭೋಜರಾಜ– ನೋಡಿದೇನಪಾ ವಿಕ್ರಂ, ಈ ಮಗನ ಪೊಗರೆಷ್ಟೈತಿ?

ವಿಕ್ರಂ– ಏನಲೇ ಬಡ್ಡಿ ಮಗನೆ ನಾವ್ಕೊಡೊ ದುಡ್ಡು, ನಾಪ್ಹಾಕೊ ಅನ್ನ ತಿಂದು ಬದುಕೋ ನಾಯಿ ನೀನು. ನಮಗ್ಹ ಮರ್ಯಾದಿ ಕೊಡದಂಗ ಮಾತಾಡ್ತಿಯಾ?

ರಂಗ– ಈ ಮಾತಿಗೆ ಈಗಲೇ ನಿಮ್ಮಪ್ಪಗ ಉತ್ರ ಕೊಟ್ಟೇನಿ ಬೇಕಾರ ಮನಿಗೆ ಹೋದಿಂದ ಕೇಳಿ ತಿಳ್ಕೊಳ್ರಿ. ಆದ್ರ ನಂದೊಂದು ಮಾತು ಕೇಳ್ರಿ ಡೂಪ್ಲಿಕೇಟ್ ಸಾವ್ಕಾರ್ರೆ..., ನನ್ನ ಕೈಯಾಗ ಕಸುವೈತಿ, ಕಸುಬೂ ಐತಿ. ದುಡಿತಿನಿ ಅನ್ನೋ ದಮ್ಮೈತಿ. ಅಡವ್ಯಾಗಿದ್ರೂ ಬದುಕ್ತೇನಿ ಅನ್ನೋ ವಿಶ್ವಾಸೈತಿ. ಆದ್ರ ಮತ್ತೊಬ್ಬರ ಎಂಜಲಿಗೆ ಬಾಯಿ ತೆರ್ಕೊಂಡು ಬಿದ್ದಿರೋ ನಿಮ್ಮಂ

ತವರಿಗೆ ಬರಬಾರದ ಕೆಡುಗಾಲ ಬಂತಂದ್ರ ಏನ್ಹೇಳ್ಲಿ ನಿಮ್ಮ ಫಜೀತಿನ, ತುತ್ತು ಕೂಗಿಗಾಗಿ ಕೋಳಿಗತಿ ತಿಪ್ಪಿ–ತಿಪ್ಪಿ ಕೆದರಿಕೊಂತ ತಿರುಗ್ಬೇಕಾಗುತ್ತ.

ವಿಕ್ರಂ– ಸ್ಕೌಂಡ್ರಲ್. ನಮ್ಮನ್ನ ಎಂಜಲಿಗೆ ಬಿದ್ದವರು ಅನ್ನುವಷ್ಟು ಸೊಕ್ಕು ಬಂತೇನೋ ನಿನಗ (ಹೊಡೆಯಲು ಕೈ ಎತ್ತುವನು, ರಂಗ ಕೆ ಹಿಡಿದು)

ರಂಗ– ನನ್ನ ಹೊಡಿಯಾಕೆತ್ತಿದ ಈ ಕೈ ಕತ್ತರಿಸಿ. ನಾಯಿ-ನರಿ ಬಾಯಿಗೆ ಹಾಕ್ತಿದ್ದೆ. ಆದ್ರ ನಿಮ್ಮ ಪಾಪದ ತೂಕ ಎಷ್ಟು ಕೆ. ಜಿ. ಆಗೇತೊ. ಇನ್ನೂ ಎಷ್ಟು ಕೆ. ಜಿ. ಆಗೋದೈತೊ? ಇದನ್ನ ಲೆಕ್ಕ ಹಾಕಿ ಆ ದೇವರು ನಿಮಗ ಎಷ್ಟು ಕೆ. ಜಿ. ಕೊಡಬೇಕಂತ ವಿಚಾರ ಇಟ್ಟಾನೋ ನನಗೊತ್ತಿಲ್ಲಂದಲ್ಲಿ ಅದಕ ನಿಮ್ಮನ್ನ ಸರಳ ಕೈಬಿಡ್ತೀನಿ ಏನ್ನ ನಿಮಗ ಶಿಕ್ಷೆ ಆದ್ರೂ ಆ ದೇವರಿಂದಾನೆ ಆಗ್ಲಿ

ಭೋಜರಾಜ– ವಿಕ್ರಂ ಈ ಭಿಕಾರಿ ನನ್ನ ಮಗನ ಕೂಡ ಯಾಕ ಕೆಲ್ಸಕ ಬಾರದ ಪ್ರಯತ್ನ ನಡಸ್ತಿಯಾ? ಇವನಿಗೆ ಏನು ಮಾಡೋದು ನಾ ಮಾಡ್ತೀನಿ. ಬಾ ಹೋಗೋನ (ಹೋಗುವನು)

ವಿಕ್ರಂ– ಲೇ ರಂಗ ಇವತ್ತಿಂದ ಬಹಳ ಹುಷಾರಿಯಿಂದಿರು ಮಗನ (ಹೋಗುವನು)

ರಂಗ– ಹೋಗಲೇ ನನಗೇನು ಹುಷಾರಿಂದ ಇರಾಕ್ಹೇಳ್ತಿ? ಆ ದೇವರ ದೃಷ್ಟಿಯೊಳಗ ಹುಷಾರಿಂದ ಬದುಕ್ಬೇಕಾದವರು ನೀವು.

(ಲಿಲ್ಲಿ ಬರುವಳು)

ಲಿಲ್ಲಿ– ಆ ದೇವರಿಗೂ ಲಂಚಕೊಟ್ಟು ಪಾಪದ ಹೊರೆ ಕಡಿಮೆ ಮಾಡ್ಕೊಳ್ಳಾಕ ಪ್ರಯತ್ನ ಪಡೋ ಭೂಪರದಾರ ವರು.

ರಂಗ– ಲಂಚಕೊಟ್ರೂ, ಇವರ ಗುಟ್ಟು ರಟ್ಟಾದ್ರ ಆ ದೇವರ ಚಟ್ಟ ಕಟ್ಟಸ್ತಾನ. ಈ ನನ್ನ ಮುಕ್ಕು ಧರ್ಮಯ್ಯನ್ನ ಕೊಲೆ ಮಾಡಿದ್ವಲ್ದೆ. ಈಗ ವಜನಮ್ಮನ ಪ್ರಾಣ ತೆಗಿಯೋ ವಿಚಾರ ನಡಸ್ಯಾರ ಗೊತ್ತೆನು ?

ಲಿಲ್ಲಿ– ಹೌದ? ಸಂಗಾರ, ಈ ದುಷ್ಟರ ನಿರ್ನಾಮ ಮಾಡುವುದಕ್ಕಾಗಿ ನಾನು ಕಂಕಣಬದ್ಧಳಾಗಿ ನಿಲ್ಲುತ್ತೇನೆ.

ರಂಗ– ಈ ಅವತಾರ್ದಾಗ ದುಷ್ಟರನ್ನ ನಿರ್ನಾಮ ಮಾಡ್ತಿಯಾ ? ನಿನಗ ಸ್ವಲ್ಪರ ಬುದ್ಧೈತೆನು ?

ಲಿಲ್ಲಿ– ಯಾಕ ?

ರಂಗ– ಯಾಕಂತಿಯಲ್ಲ ? ಶ್ರೀಕೃಷ್ಣ ಪರಮಾತ್ಮ ಮೋಹಿನಿ ಅವತಾರ್ದಲ್ಲಿದ್ದಾಗ, ಆ ಪರಮೇಶ್ವರನೇ ಅವನ್ನ ಲವ್ ಮಾಡಾಕ ಹೋಗಿದ್ದ. ಇನ್ನೀ ನರಮನುಷ್ಯಾರು ಬಿಡ್ತಾರೇನು ? ಹರುಕು ಸೀರಿ ಉಟ್ಟು, ಮುರುಕು ರೊಟ್ಟಿ ಜೋಡಾಕ್ಟಂದ ತಿರುಕಿನ ಸೈತ ರೇಪ್ ಮಾಡೋ ತಲೀ ಕೆಟ್ಟವರಿರ ಬೇಕಾದ್ರೆ, ಇನ್ನು ನಿನ್ನಂತ ಟಿಪ್ ಟಾಪಿರೋ ಹುಡುಗಿನ ಹರ್ಕೊಂಡು ತಿಂದ್ಬಿಡ್ತಾರ. ಹುಚ್ಚಿ. ನಡಿ ಮನಿಗೆ. ದುಷ್ಟರನ್ನ ನಿರ್ನಾಮ ಮಾಡಾಕೋಗಿ, ನೀನ್ನ ನಿರ್ನಾಮಾದಿಯಾ.

ಲಿಲ್ಲಿ– ಹೆಣ್ಣಿಗೆ ಅಸಾಧ್ಯವಾದದ್ದು ಯಾವದೂ ಇಲ್ಲ ರಂಗು.

ರಂಗ– ಹಿಂಗಂದವ್ರ ಬಾಳ ಜನ ಮಣ್ಣಿಗೋದ್ರು.

ಲಿಲ್ಲಿ– ಮಣ್ಣಿಗೋದ್ರೂ, ಎಂದಿಗೂ ಮರೆಯದ ಮಹಿಳೆಯರಾಗಿ ಉಳಿದಿದ್ದಾರೆ. ಇತಿಹಾಸದಲ್ಲಿ ಅವರ ಹೆಸರು ಅಜರಾಮರವಾಗಿಯೇ ಇದೆ.

ರಂಗ– ಲಿಲ್ಲಿ, ಸಧ್ಯ ನನ್ಕೂಡ ಲವ್ ಮಾಡ್ತಿಯೋ ? ದುಷ್ಟರನ್ನ ಹುಡುಕ್ಯಾಡಿ ಮರ್ಡರ್ ಮಾಡ್ತಿಯೋ ?

ಲಿಲ್ಲಿ– ಏನು ಲವ್ ಮಾಡ್ತಿ ಬಿಡ ನಿನ್ನ, ಮೊದಲಿನ ಹುರುಪ್ಪ ಬರುವಲ್ದೀಗ.

ರಂಗ– ಕಟದಾರು ನಿನ್ನ. ಯಾವ ಸುದ್ದಿ–ಗದ್ದಿಲ್ಲದಂಗ ತಣ್ಣಗಿದ್ದವನಿಗೆ ಲವ್ವಿನ ಹವಾ ತುಂಬಿ, ಹುರುಪೆಬ್ಸಿ, ಈಗ ನಿಂದು ಹೌನಾಗೇತಂದ್ರ ಯಾಗ್ಕೇಳ್ತಾರ ?

ಲಿಲ್ಲಿ– ಪರವಾಯಿಲ್ಲ. ನಾ ಸ್ಟಾರ್ಟ್ ಮಾಡಿದ ಗಾಡಿ, ಅರ್ಧಾಗ್ದಂಗ ಛಾರ್ಜಿನ್ಯಾಗ ಉಳುದೈತನ್ನೋದು ಖಾತ್ರಿ ಆತು.

ರಂಗ– ಅಂದ್ರ ನೀ ಬಾಡಿ ಅನ್ನೊ ಗಾಡಿ ಪರೀಕ್ಷೆ ಮಾಡೋ ಮೆಕ್ಯಾನಿ

ಕ್ಕೇನು? ನೋಡು ಇನ್ನೊಂದು ತಿಂಗ್ಳೊಪ್ಪತ್ತು. ಕಚ್ಚಾ ರೋಡಿನ್ಯಾಗೋಡ್ಸಿ ಕೊನಿಗೊಮ್ಮೆ ಗುಡ್ಡ ಹತ್ತಿಸಿಳಿಸಿ ಖಾತ್ರಿ ಮಾಡ್ಕೊಂತಿಯೇನು?

ಲಿಲ್ಲಿ– ಬ್ಯಾಡ ಸುಮ್ನ ಗಾಡಿ ಸವೆಸಿದ್ರೆ ನನಗ ಲಾಸಾಗುತ್ತ.

ರಂಗ– ಅಷ್ಟರ ತಿಳ್ಕೊಂಡಿಯಲ್ಲ ನನ್ನ ಪುಣ್ಯ. ಅಂದಂಗ ಲಿಲ್ಲಿ ಆ ಮೂರ್ತಿನ ಈಗಗರ ನಿನ್ನ ಕಾಡೋದು ಬಿಟ್ಟಾನಿಲ್ಲೊ?

ಲಿಲ್ಲಿ– ಜೀವ ಬಿಟ್ರೂ. ಅವನೇನು ಕಾಡೋದು ಬಿಡದಿಲ್ಲ.

ರಂಗ– ಪಾಪ ಅವನದೂ ವಯಸ್ಸು ಹೆಂಗ ಬಿಡ್ತಾನ? ಅದಕ ಅವನೌನ ಜೀವನ್ದಾಗ ನೆನಪಿಟಿರ್ಬೇಕು ಅಂತ ಮದವಿನ ನಾವ ಮಾಡಿ ಬಿಡಾನ.

ಲಿಲ್ಲಿ– ಹೆಣ್ಣಲ್ಲಿಂದ ತರ್ತೀಯಾ?

ರಂಗ– ಕನಸಿನ್ಯಾಗ ಸೈತ ಕಂಡಿರ್ಬಾದು ಅಂತ ಹೆಣ್ಣು ತರ್ತೀನಿ. ಬಾಯಿಲ್ಲಿ ಹೇಳ್ತೀನಿ (ಕಿವಿಯಲ್ಲಿ ಹೇಳಿ) ನೀ ಇಷ್ಟು ಮಾಡು ಮುಂದಿಂದು ನಾ ನೋಡ್ಕೊಂತೀನಿ.

ಲಿಲ್ಲಿ– ಇಷ್ಟ ಹೌದಿಲ್ಲ? ಚಿಂತಿಬಿಡು. ಮರಿಗೆ ನಿಂತು ನೋಡು.

ರಂಗ– ಬಂದ ನೋಡಲ್ಲಿ ಕೆಂಟ್ರಿ ಶೆರೆ ಕುಡ್ದುವರ್ಗತಿ, ನಾನಿಲ್ಲೆ ಮುಲಗಿರ್ತೀನಿ. ನಿನ್ನ ಕೆಲ್ಸ ಶುರು ಮಾಡಿಕೊ (ಮರೆಯಾಗುವನು)

(ಮೂರ್ತಿ ಬರುವನು)

ಮೂರ್ತಿ– ಹಾಯ್ ಲಿಲ್ಲಿ.

ಲಿಲ್ಲಿ– ಹಾಯ್ ಡಿಯರ್.

ಮೂರ್ತಿ ಆಂ! ಡಿಯರ್? (ಸುತ್ಲೂ ನೋಡಿ) ಯಾರಿಗಂದಿ? ಇಲ್ಲಂತು ಆ ರಂಗಿಲ್ಲ.

ಲಿಲ್ಲಿ– ನೀನದಿಯಲ್ಲ. ನಿನಗ ಅಂದಿದ್ದು ನನ್ನ ರಾಜಾ.

ಮೂರ್ತಿ– ನನಗೇನ ಕೆಡುಗಾಲನ ಬಂತಿದು. ಇಕಿ ಬಾಯಾಗ ಡಿಯರ್ರು ರಾಜಾ ಅಂತ ಬರಬೇಕಾದ್ರ. ನನ್ನ ಹೆಣ ಹೊರೊ ವಿಚಾರನ ಇರ್ಬೇಕಿದು. ಮಿಸ್ ಲಿಲ್ಲಿ, ನನಗ ಮೈಯಾಗ ಆರಾಮಿಲ ದವಾಖಾನೆಗೆ ಹೋಗಿ ಬರ್ತೀನಿ.

ಲಿಲ್ಲಿ– ಪ್ರಾಣಕಾಂತ. ನಿನ್ನ ಪ್ರಾಣವಲ್ಲಭೆಯನ್ನು ಬಿಟ್ಟೇ ಹೋಗುತ್ತಿರುವೆಯಲ್ಲ.

ಮೂರ್ತಿ– ಛಿಛೀ ಹೆಂಗಾದಿತು ? ನಿನ್ನ ಮಾತು ನಂಬಿ ಹತ್ರಕ್ಕ ಬಂದು, ಒದಿಸ್ಕೊಂಡು ಸಾಯ್ಲ್ಯಾಸಿ ತಡಿ.

ಲಿಲ್ಲಿ– ಎಂಥಾ ಮಾತಾಡುತ್ತಿರುವಿ ಪ್ರಿಯ ?

ಮೂರ್ತಿ– ಪ್ರಿಯ ?? ದೊಡ್ಡ ಗೂಟಾನ ಜಡಿತಾಳ ಕಾಣುತ್ತ ನನಗ.

ಲಿಲ್ಲಿ– ನೀನೇ ನನ್ನ ಜೀವ. ನಿನಗೆ ಒದಿಯುತ್ತೇನೆಯೇ ?

ಮೂರ್ತಿ– ಬದಿತಿಯೋ. ಪ್ರಾಣ ತಗಿತಿಯೋ ? ಅದ್ದು ತಿಳಿದಂಗಾಗೇತೀಗ್. ನನ್ನ ಮಾರಿ ನೋಡಿದ್ಕೊಡ್ಲೆ ಯಾಕಲೇ, ಬೇವಾರ್ಸಿ. ಐವಾನ ಅನ್ನೋ ಶಬ್ದಗಳು ಬರ್ಬೇಕಾದ ನಿನ್ನ ಬಾಯಲ್ಲಿ. ಡಿಯರು. ರಾಜ. ಪ್ರಿಯ ಅನ್ನೊ ಶಬ್ದಗಳು ಬರ್ತದಾವಲ್ಲ, ಏನ್ಸಮಾಚಾರ. ? ನನ್ನ ರಮಿಸಿ ಕರ್ಕೊಂಡ್ಹೋಗಿ. ಮರ್ಡರ್ ಮಾಡೋ ವಿಚಾರೈತೆನು ನಿನಗ ?

ಲಿಲ್ಲಿ– ಅದೇನಿಲ್ಲ. ನನಗ ನಿನ್ನ ಮ್ಯಾಲ ಮನಸ್ಸಾಗೇತಿ.

ಮೂರ್ತಿ– ನಿನಗ ನನ್ನ ಮ್ಯಾಲ ಮನಸ್ಸಾಗೇತ ? ಇದೇನಿದು. ಒಮ್ಮಿಗೆ ನಮ್ಮ ದೇಶದ ಸಂವಿಧಾನನೇ ಬದ್ಲಿ ಮಾಡಿದಂಗಾತಲ್ಲ. ಅಲ್ಲ್ಯ. ಮುಂಗ್ಸಿ ಹಾವಿನ್ಕೂಡ ಗೆಳೆತನ ಮಾಡುತ್ತಂದ್ರ ಯಾರು ನಂಬ್ತಾರ ? ಸಾಧ್ಯನ ಇಲ್ಲದು. ಇವಳೌಳ ಏನ್ನ ಪ್ಲಾನ್ ಮಾಡ್ತ್ಯಾಳ. ಲಿಲ್ಲಿ ಖರೆ ಹೇಳು, ಆ ರಂಗ್ಯಾ ನಿನಗ ಈ ನಮೂನಿ ನಾಟಕ ಮಾಡಂತ ಹೇಳಿ ಕಳ್ಸ್ಯಾನ ಹೌದಿಲ್ಲೊ ?

ಲಿಲ್ಲಿ– ಥೂ, ಆ ಚಂಡಾಲನ ಹೆಸರೆತ್ತಬ್ಯಾಡ ನನ್ಮುಂದೆ. ನನಗವನು ಮಾಡಿರೋ ಅನ್ಯಾಯ ನೆನಸ್ಕೊಂಡ್ರೆ, ನನ್ನ ಮೈಯಲ್ಲಾ ಉರಿತೈತಿ.

ಮೂರ್ತಿ– ರಂಗ್ಯಾ. ನಿನಗನ್ಯಾಯ ಮಾಡಿದ್ನ ?

ಲಿಲ್ಲಿ– ಹೌದು. ನನ್ನ ಪ್ರೀತಿ ಮಾಡಂವಂಗ ನಾಟಕ ಮಾಡಿ, ಮದಿವ್ಯಾಗ್ತಿನಂತ ಮಾತು ಕೊಟ್ಟು, ಈಗ ಅದ್ಯಾವುದೋ ಹುಡುಗಿ ಕರ್ಕೊಂಡು ದಿನಾ ಸುಡುಗಾಡಿಗೋಕ್ಯಾನ ಲವ್ ಮಾಡಾಕ.

ಮೂರ್ತಿ– ಸುಡುಗಾಡಿಗೋಕ್ಯಾರ ? ಅಲ್ಲೇನು ಹೆಣ ಎಬ್ಬುತಾರೆನು ?

ಲಿಲ್ಲಿ– ಹಂಗಲ್ಲ. ಯಾರಿಗೂ ಗೊತ್ತಾಗಬಾರ್ದಂತ. ಆ ಹುಡ್ಗಿನೆ ಇವ್ನಿಗೆ ಸುಡುಗಾಡಿಗೆ ಬರಾಕೇಳ್ಯಾಳಂತ,

ಮೂರ್ತಿ– ಹೊಸಾದ್ದು ಕೇಳಿದಂಗಾತಿದು. ಸುಡುಗಾಡದಾಗ ಲವ್ ಮಾಡ್ತಾರಂದಿಂದ. ಅವರೌರ ರಾಕ್ಷಸ ವಂಶದವರಿರ್ಬೇಕು.

ಲಿಲ್ಲಿ– ಆದಕ, ಆ ರಾಕ್ಷಸ ವಂಶದವನ್ನ ಬಿಟ್ಟು. ಈ ಗಂಧರ್ವ ವಂಶದ ವನ್ನ ಲವ್ ಮಾಡ್ಬೇಕನ್ನೊ ಮನಸ್ಸಾಗೇತಿ.

ಮೂರ್ತಿ– ಲಿಲ್ಲಿ ನಿನ್ನ ಪಠಾತ್ಕೇಳಿ ನನಗ ನಡುಗ ಬರಾಕ್ಹತ್ತೇತಿ. ಮೊದಲ್ಲು ನೀನು ಬೆರಿಕಿ ಹೆಣ್ಣದಿ. ಲವ್ ಮಾಡ್ತೀನಿ ಅಂದು... (ಕೆನ್ನೆ ಮುಟ್ಟಿ ಕೋಡು) ಬ್ಯಾಡ ಮರಾಯುಳ ನಿನ್ನ ಸಹವಾಸನ್ನು ಬ್ಯಾಡ ನನಗ.

ಲಿಲ್ಲಿ– ಸರಿ ಬಿಡ್ರುಗಾರ. ಆ ರಂಗೊಬ್ಬಾಂವ ಮೋಸ ಮಾಡಿದ. ಈಗ ನೀನೂ ನನ್ನ ಕೈ ಬಿಡಾಕ ತಯಾರಾಗಿದಿ ಅಂದಿಂದ. ನಾನ್ಯಾಕ ಬದುಕಿರ್ಲಿ? ಇಲ್ಲೇ ಯಾವ್ದರ ಮರಕ್ಕ ಉರ್ಲು ಹಾಕ್ಕೊಂತಿನಿ, ಬರ್ತೀನಿ.

ಮೂರ್ತಿ– ಸ್ವಲ್ಪ ತಡಿ. ನಾನೀಗ ಒಲ್ಲೆ ಅಂದ್ರ, ಸಾಯ್ತಿಯಾ?

ಲಿಲ್ಲಿ– ಈಗ್ನೊಂಟಿನಲ್ಲ ಸಾಯಾಕ.

ಮೂರ್ತಿ– ಖರೇನ..ನೀ ನನ್ನ ಪ್ರೀತಿ ಮಾಡ್ತೀಯಾ?

ಲಿಲ್ಲಿ– ಮೊದಲು ಹೂಂ ಅನ್ನು. ಆವ್ಯಾಲ , ನೋಡು. ಹೆಂಗ ಮಾಡ್ತೀನಿ ಪ್ರೀತಿನ?

ಮೂರ್ತಿ– ಹೂಂ ಅಂತೀನಿ. ಆದ್ರ ನೀ ನನಗ ಮೋಸ ಮಾಡಬಾರು ನೋಡು.

ಲಿಲ್ಲಿ– ನಿನಗನುಮಾನಿದ್ರ ನಾಳೆನೆ ಮದಿವ್ಯಾಗಿ ಬಿಡನಲ್ಲ.

ಮೂರ್ತಿ– ಆಂ. ಈಗ ಪೂರಾ ಖಾತ್ರ್ಯಾತು ನನಗ. ನೀ ಯುಸ್ ಅಂದ್ರೆ ಇವತ್ತ್ಲೆ ಕಟ್ತೀನಿ ತಾಳಿನ?

ಲಿಲ್ಲಿ– ಹಂಗನ್ನೋ ನನ್ನ ಚಕೋರ.

–ಪದ–

(ಪದ ಮುಗಿದ ನಂತರ)

ಮೂರ್ತಿ– ಲಿಲ್ಲಿ, ನೀನಂದಗ ನಾಳಿನೆ ಮದಿವಿ ವ್ಯವಸ್ಥ ಮಾಡ್ತೀನಿ. ಆದ್ರ ಮದವಿ ಎಲ್ಲಿಟ್ಕೊಳ್ಳೋದು?

ಲಿಲ್ಲಿ– ಸುಡುಗಾಡಿನ್ಯಾಗ.

ಮೂರ್ತಿ– ಆಂ? ಸುಡುಗಾಡಿನ್ಯಾಗ್ನ?

ಲಿಲ್ಲಿ– ಹೌದು. ಯಾಕಂದ್ರ, ಆ ರಂಗನೂ ಹುಡಿಗಿ ಕೂಡ ಅಲ್ಲಿಗ್ಬಂದಿರ್ತಾನೆ. ನಾವು ಮದುವ್ಯಾಗಿದ್ದು, ಮೊದ್ಲು ಅವರ ಕಣ್ಣಿಗ್ಬೀಳ್ಬೇಕು. ಅವರ ಹೊಟ್ಟಿ ಉರಿಬೇಕು.

ಮೂರ್ತಿ– ನಿನ್ನ ವಿಚಾರೇನೋ ಬರೊಬ್ಬರಿನೆ. ಆದ್ರ, ಸುಡುಗಾಡಿನ್ಯಾಗ ಮದಿವ್ಯಾಗೋದಂದ್ರ ನನಗ್ಯಾಕೋ ಸರಿ ಕಾಣವಲ್ದು.

ಲಿಲ್ಲಿ– ನನ್ನಾಸಿಗೆ ಒಪ್ತಿಯಿಲ್ಲೇನು?

ಮೂರ್ತಿ– ಒಪ್ತೀನಿ, ಸುಡುಗಾಡಂದ್ರೂ ಸೈ. ಗಟಾರಂದ್ರೂ ಸೈ ನಿನಗ ತಾಳಿ ಕಟ್ತೀನಿ. ಆ ರಂಗ್ಯಾನ ಸೊಕ್ಕು ಮುರಿತೇನಿ.

ಲಿಲ್ಲಿ– ಗಂಡಂದ್ರೆ ನೀನೆ. ಹಂಗಾರ ನಾಳೆ ನೀನು...

ಮೂರ್ತಿ– ಮದುಮಗನಾಗಿ. ತಾಳಿ ಸಮೇತ ಸುಡುಗಾಡಿಗ್ಬರ್ತೀನಿ ತಾಳಿ ಕಟ್ತೀನಿ, ಆ ರಂಗ್ಯಾನ ಸೊಕ್ಕು ಮುರ್ದು, ನಿನ್ನ ಅಂಡಮಾನ್ ದ್ವೀಪಕ್ಕೆ ಹನಿಮೂನಿಗೆ ಕರ್ಕೊಂಡ್ಹೋಕ್ಕೀನಿ. ಆದ್ರ, ನೀ ನನಗ ಮೋಸ ಮಾತ್ರ ಮಾಡಬ್ಯಾಡ?

ಲಿಲ್ಲಿ– ನನ್ನ ದೇವರು ನೀನು. ನಿನಗ ಮೋಸ ಮಾಡ್ತೀನಾ?

ಮೂರ್ತಿ– ನಾ ನಿನಗೇನೊ ದೇವರಾದೆ, ಆದ್ರ ನಾವು ದೆವ್ವಗಳ ಸಾಕ್ಷಿಯಾಗಿ ಮದಿವ್ಯಾಗ್ಬೇಕಾತಲ್ಲ. ಅದು ಛಲೊನ. ಯಾಕಂದ್ರ ನಮ್ಮ ಜೋಡಿ ಖಾಯಂ ಜಂಟಿಯಾಗಿರಾಕ, ಜನ ಸಾಮಾನ್ಯರ ಆಶೀರ್ವಾದಕ್ಕಿಂತ, ಭೂತ, ಪ್ರೇತಗಳ ಆಶೀರ್ವಾದನ್ನ ಸರಿ. ಹಂಗಾರ ನಾ ಬರ್ಲ?

ಲಿಲ್ಲಿ– ಈಗ್ಹೋಗು, ಮರಿದೆ ನಾಳೀ...

ಮೂರ್ತಿ– ಸುಡುಗಾಡಿಗ್ಬರ್ತೀನಿ, ತಾಳಿ ಕಟ್ತೀನಿ. ಆ ರಂಗ್ಯಾನ ಸೊಕ್ಕು ಮುರಿತೇನಿ (ಹೋಗುವನು)

ಲಿಲ್ಲಿ– ಹೋಗು ಮಗನೆ ಯಾರ ಸೊಕ್ಕು ಮುರಿತೆತಿ ಅನ್ನೋದು ನಾಳೆ... (ರಂಗ ಬರುವನು)

ರಂಗ– ಸುಡುಗಾಡಿನ್ಯಾಗ ಗೊತ್ತಾಗುತ್ತ, ಅಂತೂ ಲಿಲ್ಲಿ, ಆ ಮಗನ ಮುಂದ ಚಂದ ನಾಟಕ ಮಾಡಿದೆ.

ಲಿಲ್ಲಿ– ಒಟ್ಟವನ್ನ ಸುಡುಗಾಡಿಗೆ ಬರಾಕ ವ್ಯವಸ್ಥೆ ಮಾಡೇನಿ ಮುಂದಿಂದು ಏನ್ಮಾಡೋದು, ಬಿಡೋದು ನಿನಗ ಕೂಡಿದ್ದು.

ರಂಗ– ಅದರ ಚಿಂತಿ ಬಿಡು ಇವನ ಮದಿವಿನ ಹೆಂಗ ಮಾಡ್ತೀನಿ ನೋಡುವಂತಿ ನಡಿ.

(ಹೋಗುವರು)

## ಹದಿಮೂರನೆಯ ದೃಶ್ಯ

### ಮಿಲ್ಲಿನ ಆವರಣ

(ವನಜ ಕಾಟನ್ ಮಿಲ್ಲಿನ ದ್ವಾರ ಬಾಗಿಲು ಅರ್ಧ ವೃತ್ತಾಕಾರದಲ್ಲಿ ಮಿಲ್ಲಿನ ಹೆಸರು. ಮಧ್ಯಭಾಗದಲ್ಲಿ ಧರ್ಮಯ್ಯನವರ ಶಿಲಾಮೂರ್ತಿಯನ್ನು ಪ್ರತಿಸ್ಥಾಪಿಸಿದೆ. ಆ ಮೂರ್ತಿಯನ್ನೇ ನೋಡುತ್ತಾ ವನಜ ಚಿಂತಾಕ್ರಾಂತಳಾಗಿ ನಿಂತಿದ್ದಾಳೆ, ಭೋಜರಾಜ ಬಂದು ಅವಳನ್ನು ನೋಡಿ)

ಭೋಜರಾಜ– ವನಜ..., (ಸುಮ್ಮನಿರಲು) ವನಜಮ್ಮ.

ವನಜ– (ಎಚ್ಚೆತ್ತು, ಕಣ್ಣೊರೆಸಿಕೊಳ್ಳುತ್ತಾ) ಓಹ್ನ ಮಾವ.

ಭೋಜರಾಜ– ನೋಡಮ್ಮ ವನಜ, ಮುಗಿದು ಹೋದ ಕಥೆಯನ್ನು ಮುಂಬರುವ ಬದುಕಿಗೆ ವ್ಯಥೆಯಾಗಿ ಅರಿಸಿಕೊಳ್ಳಬಾರದು. ಪಾಪದ ಕೊಡ ತುಂಬಿದ ಮೇಲೆ ಆಯುಷ್ಯವನ್ನು ಕೈಗಡ ತರಲು ಸಾಧ್ಯವಿದೆಯೇನಮ್ಮಾ? ಖಂಡಿತಾ ಸಾಧ್ಯವಿಲ್ಲ. ಅದರಂತೆ ಆ ಧರ್ಮಯ್ಯನಿಗೂ, ಈ ಭೂಮಿಗೂ ಋಣ ತೀರ್‍ತು, ಪ್ರಾಣ ಹೋಯ್ತು. ಅದಕ್ಯಾಕಮ್ಮ ಇಷ್ಟು ಚಿಂತೆ ಮಾಡ್ತೀಯಾ?

ವನಜ– ಅವರ ಸಾವು ಸಹಜವಾಗಿದ್ದರೆ ನಾನಷ್ಟು ವೇದನೆ ಪಡುತ್ತಿರಲಿಲ್ಲ. ನೀಚರ ಗುಂಡಿಗೆ ಸಾಚಾ ಮನುಷ್ಯ ಬಲಿಯಾಗಿದ್ದನ್ನು ಕಂಡು, ನನ್ನ ಬುದ್ಧಿಗೆ ಮಂಕು ಕವಿದು ಬಿಟ್ಟಿದೆ. ನೀವೇ ಹೇಳಿ ಮಾವ, ಆ ಧರ್ಮಯ್ಯ ಧರ್ಮರಾಯನ ಗುಣದವರಲ್ಲವೆ? ಅವರನ್ನು ಈ ರೀತಿ ಕೊಲೆ ಮಾಡಿರುವುದು ಅನ್ಯಾಯವಲ್ಲವೆ?

ಭೋಜರಾಜ– ಅನ್ಯಾಯವಮ್ಮ. ಮಹಾ ಅನ್ಯಾಯ. ಅವರಾರೀತಿ ಕೊಲೆಯಾಗಿದ್ದನ್ನು ಕಂಡು ಧರ್ಮವೇ ಸತ್ತು ಹೋಯ್ತಲ್ಲಾ. ಇನ್ನು ನಾವು ಬದುಕುವುದರಲ್ಲಿ ಅರ್ಥವಿಲ್ಲಾಂತ. ನನ್ನಾತ್ಮ ನೊಂದು–ಬೆಂದು ಹೋಗಿದೆ. ಆದರೇನು ಮಾಡೋದಮ್ಮ. ನಮ್ಮ ಪಾಪದ ಕೊಡ ತುಂಬೋವರೆಗೂ. ಪಾಲಿಗೆ ಬಂದದ್ದನ್ನು ಅನುಭವಿಸ್ಲೇಬೇಕಲ್ಲ?

ವನಜ– ಆ ರೀತಿ ಅವರನ್ನು ಕೊಲೆ ಮಾಡಿದವರು ಯಾರಿರಬೇಕು ಮಾವ ?

ಭೋಜರಾಜ– ಎಂಥಾ ಪ್ರಶ್ನೆ ಕೇಳಿದೆಯಮ್ಮ ? ಕಳವು ಮಾಡೋನು ಸುಳಿವು ಕೊಟ್ಟು ಕದಿತಾನೇನಮ್ಮ ? ಧರ್ಮಯ್ಯನ ಕೊಲೆ ಯಾವ ರೀತಿ ಸಮಸ್ಯೆಯಾಗಿದೆಯೆಂದರೆ, ಕೊಟ್ಟಿಗೆಯಲ್ಲಿ ಕಟ್ಟಿದ ಪಸುವನ್ನು, ಕಾಡಿನಿಂದ ಹುಲಿ ಬಂದು ತಿಂದು ಹೋದಂತಾಗಿದೆ. ಅಂದರೆ, ಆ ಹುಲಿ, ಬಹಳ ದಿನ ತನ್ನ ಪರಿಸರದಲ್ಲಿ ಆಹಾರ ಸಿಗದೆ ಹಸಿದಿರಬೇಕು. ತಾಳ್ಮೆ ಕಳೆದುಕೊಂಡು ಊರಿಗೆ ನುಗ್ಗಿ, ಪಸುವನ್ನು ತಿಂದಿರಬೇಕು. ಕಾರಣ, ಬಗೆ ಹರಿಯದ ಸಮಸ್ಯೆಗೆ ತಲೆ ಬಿಸಿ ಮಾಡುವುದಕ್ಕಿಂತ, ಮುಂದಿನ ಆಶಾ ಜೀವನದ ಕಡೆ ಗಮನ ಹರಿಸುವುದೇ ಒಳ್ಳೆಯದು.

ವನಜ– ದುಃಖ ವ್ಯಕ್ತವಾಗುವ ಈ ಸಮಯದಲ್ಲಿ, ಆಶಾ ಜೀವನದ ಕಡೆ ಗಮನ ಹರಿಸಲು ಮನಸ್ಸಾದರೂ ಹೇಗೆ ಬರುತ್ತದೆ ಮಾವ ?

ಭೋಜರಾಜ– ಹಾಗಂತ, ಗೊತ್ತು ಮಾಡಿರೋ ಮದುವೆನ ತಪ್ಸೋದಕ್ಕೆ ಬರುತ್ತೇನಮ್ಮ ? ಈಗಾಗ್ಲೆ ವಿಕ್ರಂ, ಅರವಿಂದ ಕೂಡಿ, ಲಗ್ನಪತ್ರಿಕೆ ಹಂಚಿ, ಮದುವೆ ಸಿದ್ಧತೆಯಲ್ಲಿದ್ದಾರೆ.

ವನಜ– ಹಾಗಾದ್ರೆ. ಮದುವೆ ಮುಂದೂಡಲು ಸಾಧ್ಯವಿಲ್ಲವೇ ?

ಭೋಜರಾಜ– ಸಾಧ್ಯವೊ. ಅಸಾಧ್ಯವೊ ನೀನೇ ವಿಚಾರಿಸಿ ನೋಡಮ್ಮ. ಮದುವೆ ದಿನ, ಮುಹೂರ್ತದ ವೇಳೆ ಎಲ್ಲ ನಿಶ್ಚಯಿಸಿ ಆಗಿದೆ. ದೂರದೂರುಗಳಿಂದ ಆಹ್ವಾನಿತರಾದ ಗಣ್ಯ ವ್ಯಕ್ತಿಗಳು ಬರುವ ನಿರೀಕ್ಷೆಯಿದೆ ಅಂದಾಗ. ಆಗಿ ಹೋದ ಅನಾಹುತಕ್ಕೆ ಅಳುತ್ತಾ ಕುಳಿತರೆ. ಮುಂದಾಗೊ ಅವಮಾನವನ್ನು ಸಹಿಸೋದು ಅಸಾಧ್ಯವಾಗೋದಿಲ್ವೇನಮ್ಮ ? ಸುಮ್ನೆ ಯಾಕಮ್ಮ ಇಲ್ಲದ ವಿಚಾರಗಳಿಗೆ ತಲೆ ಕೆಡಿಸಿಕೊಳ್ತಿಯಾ ? ನಾನು ನಿನ್ನ ಹಿತಚಿಂತಕನೇ ಹೊರತು.. ಮನಸ್ಸೊಯ್ಯೋ ವಂಚಕನಲ್ಲಮ್ಮ. ಎಲ್ಲಾ ಸರಿಯಾಗುತ್ತೆ ನೀನೇನೂ ಯೋಚನೆ ಮಾಡ್ಬೇಡಮ್ಮ.

ವನಜ– ಸರಿ ಮಾವ. ನಿಮ್ಮಿಷ್ಟ. ಆದರೆ. ನೀವು ನನಗೆ ಕೊಟ್ಟ ಮಾತನ್ನು ನೆರವೇರ್ಸಿ ಕೊಡ್ತೀರಲ್ವೆ?

ಭೋಜರಾಜ– ಅದೇ, ಆಸ್ತಿಯನ್ನು ಅರವಿಂದನ ಹೆಸರಿಗೆ ಮಾಡ್ಸೊದಲ್ವೆ?

ವನಜ– ಹೌದು ಮಾವ.

ಭೋಜರಾಜ– ಆ ಯೋಚನೆನೆ ಮಾಡಬೇಡಮ್ಮ. ನಿನ್ನಾಸೆ ಖಂಡಿತ ನೆರವೇರ್ಸಿ ಕೊಡ್ತೀನಿ. ಆದರೆ...

ವನಜ– ಆದರೇನು?

ಭೋಜರಾಜ– ಮದುವೆ ನೋಡಿದ್ರೆ ಮೂರ್ದಿನ ಉಳಿದಿದೆ. ನೀನ್ಹೇಳ್ತಿಯಾ, ಆಸ್ತಿ ಅರವಿಂದನ ಹೆಸರಿಗಾದ ನಂತರವೇ ತಾಳಿ ಕಟ್ಟಿಸಿಕೊಳ್ತೀನಿ ಅಂತ. ಆದ್ರೆ, ನಮ್ಮ ಫ್ಯಾಮಿಲಿ ವಕೀಲ್ರು ಅಮೇರಿಕಾಕ್ಕೋಗಿದ್ದಾರಂತೆ. ಬರೋದು ಇನ್ನೂ ಒಂದು ತಿಂಗಳು ತಡವಾಗುತ್ತಂತೆ. ಕಾರಣ ಏನು ಮಾಡ್ಬೇಕು ಅಂತಾನೆ ನನಗೆ ತೋಚ್ತಾಯಿಲ್ಲ.

ವನಜ– ಅದಕ್ಯಾಕೆ ಯೋಚನೆ ಮಾಡ್ತೀರಿ? ಬಾಂಡ್ ಪೇಪರ್ ತರಿಸಿ, ಸಹಿ ಮಾಡಿ ಬಿಡ್ತೀನಿ. ನಂತರ ವಕೀಲ್ರು ಬಂದ ಮೇಲೆ. ವಿಲ್ ಬರೆಸಿದರಾಯ್ತು. ಒಟ್ಟಿನಲ್ಲಿ ನನ್ನ ಒಡೆಯರಾಗೋ ಅರವಿಂದರು, ನನಗೆ ತಾಳಿ ಕಟ್ಟೋ ದಿನವೇ ನನ್ನಾಸ್ತಿಗೂ ಒಡೆಯರಾದರೆನ್ನುವ ಭಾವನೆಯಾದರೂ ನನ್ನ

ಮನಕ್ಕೆ ಉಳಿಯಬೇಕು. ನಾ ಕೊಟ್ಟ ಮಾತಿಗೂ ಬೆಲೆ ಸಿಕ್ಕಂತಾಗಬೇಕು. ಅದೇ ನನ್ನ ಬಯಕೆ.

ಭೋಜರಾಜ– ಅಂತೂ ಸಮಸ್ಯೆಯನ್ನು ಸಲೀಸಾಗಿ ಬಗೆ ಹರಿಸಿದಿಯಮ್ಮ. ಒಟ್ಟು. ನಿನ್ನಾಸೆಗೆ ಆತಂಕವಾಗಬಾರದು ಅಷ್ಟೆ ಸರಿ. ನೀನು ಮನೆಗೆ ನಡಿಯಮ್ಮ. ನಾನು ಬಾಂಡ್ ಪೇಪರ್ ತಗೊಂಡು ವಿಕ್ರಂ ಹಾಗೂ ಅರವಿಂದರನ್ನ ಕರ್‍ಕೊಂಡು ಬರ್‍ತೀನಿ. (ಹೋಗುವನು)

ವನಜ– ನಿಜಕ್ಕೂ ನಮ್ಮಾವ ಮನುಷ್ಯರೂಪಕ್ಕೆ ಹೊರತಾದ ದೇವರು.

(ವಿಶಾಲ ಬರುವಳು)

ವಿಶಾಲ– ದೇವರಲ್ಲ, ದೆವ್ವ.

ವನಜ– ಯಾರ್‍ನೀನು?

ವಿಶಾಲ– ವಿಧಿ ಅನ್ನುವ ವ್ಯಾಧಿಗೆ ತುತ್ತಾಗಿ ಬಾಧೆ ಪಡುತ್ತಿರುವ ದುರ್ಭಾಗ್ಯಳು.

ವನಜ– ಇದ್ದಹುದು ಆದರೆ ದೇವರಂತಾ ನಮ್ಮಾವನಿಗೆ ದೆವ್ವ ಅನ್ನಲು ಕಾರಣವೇನು ?

ವಿಶಾಲ– ದೆವ್ವಕ್ಕ ದೇವರು ಅಂದೆಯಲ್ಲ, ಅದೇ ಕಾರಣ ನೋಡಮ್ಮಾ ಕಣ್ಣಿಗೆ ಕಾಣುವಂತೆ ಕೆಟ್ಟತನ ಮಾಡೋರಲ್ಲಿ ಒಂದು ಪಕ್ಷ ಮಾನವಿಯತೆ ಮನೆ ಮಾಡಿಕೊಂಡಿರಬಹುದು. ಆದರೆ ಬಾಯ್ತುಂಬ ತಂಗಿ ಅಂತ ಕರೆದು ಮನದಲ್ಲಿ ಅವಳ ಶೀಲ ಹಾಳು ಮಾಡುವ ಕೆಟ್ಟ ವಿಚಾರ ಇದ್ದವರಲ್ಲಿ ಮಾನವಿಯತೆ ಮಣ್ಣಲ್ಲಿ ಮುಚ್ಚಿದ ಹೆಣವಾಗಿ ಹೋಗಿರುತ್ತದೆ.

ವನಜ– ಅಂದ್ರೆ ?

ವಿಶಾಲ– ಅಂದ್ರೆ ಪ್ರಾಮಾಣಿಕತನ ಎದ್ದು ಕಾಣುವ ಇಂಥಾ ದೊಡ್ಡವರಲ್ಲಿ, ಆ ಪ್ರಾಮಾಣಿಕತನ ಕದ್ದು ಮನೆ ಮಾಡಿಕೊಂಡಿರುತ್ತದೆ. ತಾಯಿ ತೋರುವ ಮಮತೆಯನ್ನು ತಮ್ಮ ಕಾಮುಕ್ಕಾಗಿ ಬಳಸಿಕೊಳ್ಳುವ ಇಂಥ ಕಾಮ ಪಿಶಾಚಿಗಳಿಗೆ ದೆವ್ವ ಅನ್ನದೆ ದೇವರು ಅನುವುದು ನಮ್ಮ ಮೂರ್ಖತನದ ಪರಮಾವಧಿ ಮೀರಿದಂತಾಗುವುದಿಲ್ಲವೆ?

ವನಜ– ನೀನೇನು ತಲೆಕೆಟ್ಟವಳೋ, ಹುಚ್ಚು ಹಿಡಿದವಳೋ ಅಥವಾ ಮತ್ತೊಬ್ಬರ ಮನಸ್ಸನ್ನು ಹಾಳು ಮಾಡಲು ಹೊರಟಿರುವ ಮಾಟಗಾತಿಯೋ? ದೇವರು ಕಲ್ಲಿನ ರೂಪದಲ್ಲಿದ್ದರೂ ಕರುಣೆಯುಳ್ಳವನೆನ್ನುವ ನಂಬಿಕೆ ನನ್ನದಾಗಿ ರುವಾಗ, ಆ ನನ್ನ ನಂಬಿಕೆಯನ್ನು ಕೊಂದು ನೀನೇನು ಸಾಧಿಸಲು ಹೊರಟಿರು ವೆಯೋ ನನಗರ್ಥವಾಗುತ್ತಿಲ್ಲ.

ವಿಶಾಲ– ತಪ್ಪು ತಿಳಿಬೇಡ ತಾಯಿ ಸತ್ಯವನ್ನೇ ಹೇಳ್ತೀನಿ. ನಾನು ಸಾಧಿಸಲು ಹೊರಟಿರುವುದೇನೋ ನಿಜ. ಆದರೆ ಆ ಸಾಧನೆ ಮತ್ತೊಬ್ಬರ ಮನಸ್ಸನ್ನು ಮಲಿನ ಮಾಡುವುದಲ್ಲಮ್ಮ. ಹೆಣ್ಣು ಕುಲಕ್ಕೆ ಹುಣ್ಣಾಗಿರುವ ವಿಷಘಾತುಕ ಸೈತಾನರ ಸಂಹಾರ ಮಾಡುವುದು,

ವನಜ– ಅಂದರೆ?

ವಿಶಾಲ– (ದುಃಖ) ಮದುವೆ ಹಂದರದಲ್ಲಿ ಮಧುಮಗಳಾಗಿ ನಿಲ್ಲ ಬೇಕಾದ ನನ್ನನ್ನು ಮನಬಂದಂತೆ ಭೋಗಿಸಿ ಬೀದಿಯಲ್ಲಿ ನಿಲ್ಲಿಸಿರುವವರ ರಕ್ತ ದೋಕುಳಿಯಾಡುವುದು. ನನ್ನಂತೆ ನೀನೂ ಹೆಣ್ಣಲ್ಲವೆ? ಶೀಲ ಕಳೆದು ಕೊಂಡವಳ ಬದುಕು ಒಡೆದ ಮಡಿಕೆಯನ್ನುವುದರ ಅರಿವು ನಿನಗಿಲ್ಲವೆ? ಇದ್ದರೆ ನೀನೇ ಹೇಳಮ್ಮಾ ನನ್ನ ಹೆಣ್ತನವನ್ನು ಮಣ್ಣು ಗೂಡಿಸಿದವರನ್ನು ದೇವರೆಂದು ಪೂಜಿಸಲೇ ಅಥವಾ ಕಣ್ಣು ಕಿತ್ತು ಕುರುಡರನ್ನಾಗಿಸಲೆ?

ವನಜ– ಅಂಥವರನ್ನಾಗಿಸುವುದರಲ್ಲಿ ಯಾವ ಅರ್ಥವೂ ಇಲ್ಲ. ಕೆಟ್ಟತನ ಕ್ಕಾಗಿಯೇ ಹುಟ್ಟಿದ ಅವರು ತಡವರಿಸುತ್ತಾ ಬಂದಾದರೂ ತಮ್ಮ ಚಟ ತೀರಿಸಿಕೊಂಡು ಬಿಡುತ್ತಾರೆ. ಇಂಥವರನ್ನು ಕರುಣೆಯಿಲ್ಲದೆ ಕಡಿದು ನಾಯಿ ನರಿಗಳ ಬಾಯಿಗೆ ಚಲ್ಲಬೇಕು.

ವಿಶಾಲ– ಒಪ್ಪಿದೆ ತಂಗಿ... ನಿನ್ನ ಕಟು ಸತ್ಯವನ್ನು. ಕೇವಲ ನನಗಾದ ಅನ್ಯಾಯವನ್ನು ಕೇಳಿಯೇ ನಿನಗಿಷ್ಟು ರೋಷ ಉಕ್ಕಿರಬೇಕಾದ್ರೆ, ಆ ಅನ್ಯಾ ಯಕ್ಕೆ ಬಲಿಯಾಗಿರುವ ನನಗಿನ್ನೆಷ್ಟು ಆಕ್ರೋಶ ಕುದಿಯುತ್ತಿರಬೇಕು.

ವನಜ– ಆ ರೀತಿ ನಿನ್ನ ಬದುಕಿನೊಂದಿಗೆ ಚಿನ್ನವಾಡಿದ ತಿಳಿಗೇಡಿಗಳು ಯಾರಮ್ಮಾ?

(ವಕೀಲ ಬರುವನು)

ವಕೀಲ– ಒಬ್ಬರಲ್ಲ ಮೂವರಮ್ಮ.

ವನಜ– ವಕೀಲ್ರೆ ನೀವು...?

ವಕೀಲ– ಹೌದಮ್ಮ ನಾನೆ. ನಾನೀಗಾಗ್ಲೆ ಅಮೇರಿಕಾಗೆ ಹೋಗಿರುವುದಾಗಿ ನಿನ್ನ ಮಾವನವರು ತಿಳಿಸಿರಬೇಕಲ್ಲವೆ?

ವನಜ– ಹೌದು. ಆದರೆ...

ವಕೀಲ– ನಾನು ಅಮೇರಿಕಾಗೆ ಹೋಗಿಲ್ಲ. ಹೋಗುವ ಅವಶ್ಯವೂ ನನಗಿಲ್ಲ. ಇದೆಲ್ಲ ನಿಮ್ಮಾವ ಭೋಜರಾಜರ ಕಾರಸ್ಥಾನವಮ್ಮ.

ವನಜ– ಏನು ಕಾರಸ್ಥಾನವೇ?

ವಕೀಲ– ಹೌದಮ್ಮಾ. ಹೌದು. ಯಾರನ್ನು ನೀನು ದೇವರೆಂದು ತಿಳಿದುಕೊಂಡಿರುವೆಯೋ ಅವರ್ಯಾರೂ ಖಂಡಿತ ನಿನ್ನ ಪಾಲಿನ ದೇವರಲ್ಲವಮ್ಮಾ ದೆವ್ವಗಳು. ಈಗ ನಿನ್ನೆದುರು ನಿಂತಿರುವ ಈ ಹೆಣ್ಣಿನ ನೇರ ಪರಿಚಯ ನನಗಿಲ್ಲದಿದ್ದರೂ ಇವಳ ಹಿನ್ನೆಲೆಯ ವಿಷಯವೇನೆಂಬುದನ್ನು ಧರ್ಮಯ್ಯನವರಿಂದ ತಿಳಿದುಕೊಂಡಿದ್ದೇನೆ.

ವನಜ– ಹಾಗಾದರೆ ಇವಳು ಹೇಳಿದಂತೆ...

ವಕೀಲ– ಶೀಲ ಕಳೆದುಕೊಂಡವಳಮ್ಮ. ಅದು ಒಬ್ಬರಿಂದಲ್ಲ ಮೂವರಿಂದ. ಅವರ್ಯಾರು ಗೊತ್ತೇನಮ್ಮ? ನಂಬರ್ ಒನ್ ನಿನ್ನ ಕಣ್ಣಿಗೆ ಸಭ್ಯ ವ್ಯಕ್ತಿಯಂತೆ ಕಾಣಿಸಿಕೊಳ್ಳುತ್ತಿರುವ ವಿಕ್ರಂ, ನಂಬರ್ ಟು ನಿನ್ನ ಮೆದುಳಿನ ನಿಯಂತ್ರಣವನ್ನೇ ತನ್ನ ಕೈಯಲ್ಲಿಟ್ಟುಕೊಂಡಿರುವ ಭೋಜರಾಜ, ನಂಬರ್ ಥ್ರೀ ನಿನ್ನ ಕೊರಳಿಗೆ ತಾಳಿ ಕಟ್ಟಿ, ತನಗೆ ದಕ್ಕುವ ಸಂಪತ್ತಿನಾಶೆಗೆ ಬಾಯ್ದೆರೆದ ಹೆಬ್ಬಾವಿನಂತಿರುವ ಡಾ॥ ಅರವಿಂದ.

ವನಜ– ಸಾರ್ ನೀವ್ಹೇಳ್ತಿರೋದು...?

ವಕೀಲ– ನಿನ್ನ ಸುತ್ತ ಪ್ರೇತವಾಗಿ ತಿರುಗುತ್ತಿರುವ ಕಪಟ ಹಿತೈಷಿಗಳು. ಚಟದ ಪ್ರಿಯಕರನ ಬಗ್ಗೆ ಹೇಳುತ್ತಿದ್ದೇನೆ. ಇವರೆಲ್ಲರೂ ನಿನ್ನ ಸಂಪತ್ತನ್ನು. ತಮ್ಮ ಕೈವಶ ಮಾಡಿಕೊಳ್ಳಲು ಹೆಣಗುತ್ತಿದ್ದಾರೆ. ನಿನ ಕೈಯಿಂದ

ಖಾಲಿ ಬಾಂಡ್ ಪೇಪರಿಗೆ ಸಹಿ ಮಾಡಿಸಿಕೊಂಡು, ನಂತರ ನನ್ನಿಂದ ವಿಲ್ ಬರೆಸುವ ವಿಚಾರದಿಂದ ಹಣದಾಸೆ ತೋರ್ಸಿ, ನನ್ನನ್ನು ಅವರ ತಾಳಕ್ಕೆ ಕುಣಿಯಲು ಪ್ರೇರೇಪಿಸಿದರು. ಆ ಕ್ಷಣದಲ್ಲಿ ಒಪ್ಪಿಕೊಂಡವನಂತೆ ನಾಟಕ ಮಾಡಿ. ಈಗ ನಿನ್ನೆದುರು ಸತ್ಯ ಬಿಚ್ಚಿಡಲು ಓಡಿ ಬಂದೆ. ಯಾಕಂದ್ರೆ, ನಾನು ನಿನ್ನ ತಂದೆಯವರ ಪರಮ ಸ್ನೇಹಿತನಮ್ಮ.

ವನಜ– ವಕೀಲ್ರೆ. ವಕೀಲ್ರೆ ನನಗಿದನ್ನು ನಂಬುವುದಕ್ಕೆ ಆಗ್ತಾಯಿಲ್ಲ.

(ರಂಗ ಬರುವನು)

ರಂಗ– ನಂಬ್ಲೇಬೇಕವ್ವಾ. ನಂಬ್ಲೆ ಬೇಕು. ಇಲ್ಲಿದ್ರೆ ಈ ನನ್ನ ಮಾತ್ನ ನಿಮಗೆ ಮಣ್ಣು, ಮಣ್ಣು ತಿನಿಸ್ತಾರವಾ.

ವನಜ– ರಂಗಣ್ಣ...!

ರಂಗ– ಹೌದವ್ವ. ನಿಮ್ಮ ಕೈಯಾಗಿನ ಆಳುಮಗನ ಬಾಯಿಂದ ಇಟ್ಟಿ ಮಾತುಗಳು ಬರ್ತಾವಲ್ಲ ಅಂತ ದಯ ಮಾಡಿ ನನ್ನ ಮ್ಯಾಲೆ ಬೇಸ್ರ ಮಾಡ್ಕೋಬ್ಯಾಡ್ರಿ, ಇಷ್ಟು ದಿನ ನಿಮ್ಮಾವನವರು ಮಾಡ್ತಿದ್ದ ಅನ್ಯಾಯಗಳನ್ನೆಲ್ಲಾ ಮನಸ್ನಲ್ಲೇ ಇಟ್ಕೊಂಡು ಮರುಗ್ತಿದ್ದೆ. ಆದ್ರೀವತ್ತು, ಅನಿವಾರ್ಯವಾಗಿ ಹೇಳ್ಬೇಕಾಗೇತಿ ವನಜವ್ವ, ನೀವು ತಂದೆ ಅಂತ ನಂಬಿರೋ ಭೋಜರಾಜರಾಗ್ಲಿ, ಸಾಧು ಹಸು ಅಂತ ತಿಳಿದಿರೋ ವಿಕ್ರಂರಾಗ್ಲಿ, ನೀವು ಪ್ರೇಮಿಸಿರೋ ಅರವಿಂದರಾಗ್ಲಿ ಮನುಷ್ಯ ಕುಲ್ದಾಗ ಹುಟ್ಟಬಾರ್ದಿತ್ತವಾ. ಹುಟ್ಟಿ, ಮನುಷ್ಯ ಜಾತಿಗೇ ಕಳಂಕ ಹಚ್ಚಿ ಬಿಟ್ಟಾರ. ಇವರು ಮಾಡ್ತಿರೋ ಅನ್ಯಾಯ ಒಂದಲ್ಲ ಎರಡಲ್ಲ, ನೂರಾರು, ಸಾವಿರಾರು.

ವಕೀಲ– ಈ ನೀಚರಿಂದ ಎಷ್ಟೋ ಹೆಣ್ಣುಗಳ ಶೀಲ ಮಣ್ಣು ಪಾಲಾಗಿವೆ.

ರಂಗ– ಅದೆಷ್ಟೋ ಹೆಣಗಳು ಕೆರೆ, ಭಾವಿಗಳಲ್ಲಿ ತೇಲಾಡಿದ್ದಾವೆ.

ವಕೀಲ– ಇದೇ ನಿಮ್ಮಾವ ಭೋಜರಾಜ. ಟೈಪಿಸ್ಟ್ ಲಿಲ್ಲಿನ ಬಲತ್ಕಾರ ಮಾಡಾಕ್ಹೋಗಿದ್ದ.

ರಂಗ– ಅಷ್ಟೇ ಅಲ್ಲವ್ವಾ, ದೇವರಂತ ಧರ್ಮಯ್ಯನವರ ಕೊಲೆ ಮಾಡಿದ ಚಂಡಾಲ್ರೂ ಇವರೇ ಕಣವ್ವ, ಇವರೆ. (ವನಜ ತಲೆ ಸುತ್ತಿ ಬೀಳುವಳು. ಎಲ್ಲರೂ ಗಾಬರಿಯಿಂದ ಅವಳತ್ತ ಹೋಗುವಾಗ ತೆರೆ)

## ಹದಿನಾಲ್ಕನೆಯ ದೃಶ್ಯ

### ರಸ್ತೆ

(ಭೋಜರಾಜನಿಗೆ, ವಕೀಲ ಎದುರಾಗುವನು)

ವಕೀಲ– ನಾಶವಾಯ್ತು, ಭೋಜರಾಜರೆ, ಸರ್ವನಾಶವಾಯ್ತು.

ಭೋಜರಾಜ– ಯಾಕ್ರಿ, ಏನಾಯ್ತು?

ವಕೀಲ– ವನಜ ನಿಮ್ಮನಿಗೆ ಬಂದಿದ್ಲು.

ಭೋಜರಾಜ– ಏನು, ವನಜ ನಿಮ್ಮನಿಗೆ ಬಂದಿದ್ಲ?... ಅಂದ್ರ, ನಿಮ್ಮನ್ನ ನೋಡೇ ಬಿಟ್ಲ?

ವಕೀಲ– ನೋಡೋದೇನು, ಮಾತೂ ಆಡ್ಸಿದ್ಲು.

ಭೋಜರಾಜ– ವಕೀಲ್ರೆ, ವಕೀಲ್ರೆ ನಾ ಹೇಳಿದ್ದೇನು? ನೀವು ಮಾಡಿದ್ದೇನು? ನೀವೀಗಾಗ್ಲೆ ಅಮೇರಿಕಾಕ್ಕೆ ಹೋಗಿದ್ದೀರಿ ಅಂತ ಅವಳಿಗೆ ಹೇಳಿಬಿಟ್ಟಿದ್ದೆ. ಈಗ ನೀವಿಲ್ಲಿ ಎಂಥಾ ಅನಾಹುತ ಮಾಡಿ ಬಿಟ್ಟಿದ್ದೀರಿ. ನೀವ್ಯಾಕ ಹೊರಗ ಬರಾಕ್ಹೋಗಿದ್ರಿ?

ವಕೀಲ– ನಾನ್ಯಾಕ ಹೊರಗಡೆ ಬರ್ಲಿ? ಮನಿ ಒಳಗ್ಹ ಕುಂತಿದ್ದೆ. ವನಜ ತನ್ನ ಗೆಳತಿಯೊಬ್ಬಾಕಿನ ಕರ್ಕೊಂಡು, ಒಮ್ಮಿಗೆ ಒಳಗ ಬಂದೇ ಬಿಟ್ಲು. ಬಂದವಳ್ಹ ಯಾಕ್ರಿ ವಕೀಲ್ರೆ ಅಮೇರಿಕಾಕ್ಕೆ ಹೋಗಿಲ್ವೆ ಅಂತ ಕೇಳಿದ್ಲು.

ಭೋಜರಾಜ– ನೀವೇನ್ಹೇಳಿದ್ರಿ?

ವಕೀಲ– ಹೊರಟಿದ್ದೆ, ಆದ್ರ ನನ್ನ ಸ್ನೇಹಿತರೊಬ್ಬರು ತೀರಿಕೊಂಡ ಕಾರಣ ತಾತ್ಕಾಲಿಕ ತಡೆ ಹಿಡಿಬೇಕಾಯ್ತು ಅಂದೆ. ಅದಕ್ಕವಳು ಹಾಗಾಗಿದ್ದೇ ಒಳ್ಳೆದಾಯ್ತು ಅನ್ನಬೇಕೆ?

ಭೋಜರಾಜ– ಅಂದ್ರೆ. ಆಸ್ತಿನ ಅರವಿಂದನ ಹೆಸರಿಗೆ ವಿಲ್ ಬರಿಯೋ ವಿಚಾರ ಹೇಳಿದ್ಲೇನು?

ವಕೀಲ– ವಿಲ್ ಬರಿಯೋ ವಿಚಾರವೇನೋ ಹೇಳಿದ್ಲು. ಆದ್ರ ಅರವಿಂದನ ಹೆಸರಿಗಲ್ಲ, ತನ್ನ ಗೆಳತಿ ಹೆಸ್ರಿಗೆ.

ಭೋಜರಾಜ– ಏನ್ಹೇಳ್ತಾಯಿದೀರಿ ನೀವು?

ವಕೀಲ– ಇರೋ ವಿಷಯಾನೆ ಹೇಳ್ತೀದೀನಿ. ಅಲ್ಲಮ್ಮಾ ಇವಳ್ಯಾರು? ಆಸ್ತಿನ ಇವಳೆಸ್ಸರಿಗೆ ಬರ್ಯೋದಿಕ್ಕೆ ಕಾರ್ಣೇನು? ಅಂತ ಕೇಳಿದೆ. ಅದಕ್ಕವಳು, ಆ ವಿಷಯ ಏನೂ ಕೇಳ್ಬೇಡಿ. ನಾನು ಮೆಜಾರ್ಟಿಗೆ ಬಂದಿರೋಳು, ನನ್ನಾಸ್ತಿನ ಇಷ್ಟಾ ಬಂದವರಿಗೆ ದಾನ ಮಾಡ್ತೀನಿ ಅಂತ ನನ್ನ ಬಾಯಿ ಮುಚ್ಚಿಸಿಬಿಟ್ಲು. ಹೀಗಾಗಿ, ಬೇರೆ ದಾರಿ ಇಲ್ದೆ ನಾನವಳ ಗೆಳತಿ ಹೆಸರಿಗೆ ವಿಲ್ ಬರ್ದುಬಿಟ್ಟೆ.

ಭೋಜರಾಜ– ಏನಂದ್ರಿ... ವಿಲ್ ಬರ್ದೇ ಬಿಟ್ರ್ಯಾ? ನೀವ್ಹೇಳ್ತೀರೋದು

ವಕೀಲ– ನಮ್ಮಪ್ಪನಾಣೆ ಸತ್ಯ.

ಭೋಜರಾಜ– ಥತ್ ಮೂರ್ಖ ವಕೀಲ. ವಿಲ್ ಬರೆದು ಮುಗಿಸಿ, ಆ ವಿಷಯ ನನಗ ತಿಳಿಸಿ, ನನ್ನ ಹೊಟ್ಟೆಗೆ ಕಿಚ್ಚು ಹಚ್ಚಲು ಬಂದಿದ್ದೀಯಾ? ವಕೀಲ ಇದರಲ್ಲಿ ನಿನ್ನದೇನೋ ಕೈವಾಡವಿದೆ. ಆದರಿಷ್ಟೆ, ನಾ ಪ್ರತ್ಯಕ್ಷ ಪ್ರಮಾಣಿಸಿ ನೋಡಿದ ನಂತರ, ನನ್ನ ಸ್ವಾಧೀನವಾಗಬೇಕಾದ ಆಸ್ತಿಗೆ ಯಾರೇ ಮುತ್ತಿಗೆ ಹಾಕಿರಲಿ, ಅವರ ಪ್ರಾಣ ಹೀರದಿದ್ರೆ ನಮ್ಮಪ್ಪನ ಮಗನೇ ಅಲ್ಲ. ನೆನಪಿಟ್ಕೊ ವಕೀಲ, ನೆನಪಿಟ್ಕೊ (ಹೋಗುವನು)

ವಕೀಲ– ನನಗೇನು ನೆನಪಿಟ್ಕೋ ಅಂತಿಯೋ ಅವಿವೇಕಿ. ನ್ಯಾಯಕ್ಕೆ ದೂರಾಗಿ, ಅನ್ಯಾಯ ಹೋರಾಡಿ ಗೆಲ್ಲೋದು ಕಷ್ಟ- ಈ ಮಾತು ನೀ ನೆನಪಿಟ್ಕೊ. (ಹೋಗುವನು)

## ಹದಿನೈದನೆಯ ದೃಶ್ಯ
### ಸುಡುಗಾಡು ಸೀನಿನ ಪರದೆ

(ಮೂರ್ತಿ ಮದುಮಗನ ವೇಷದಲ್ಲಿ ಬರುವನು)

ಮೂರ್ತಿ– ಎಲ್ಲಿಗ್ಬಂತ್ರಿ, ನನ್ನ ಮದಿವಿ ಫಜೀತಿ? ಕೈ ತಪ್ಪಿದ ಹೆಣ್ಣು, ಮತ್ತ ದಕ್ತನ್ನೋ ಸಂತೋಷ ಒಂದು ಕಡಿಗಾದ್ರೆ, ಮದಿವಿ ಮುಹೂರ್ತ ಸುಡುಗಾಡಿನ್ಯಾಗ ಪ್ರಾರಂಭ ಆಗೋ ಹೊತ್ತ ಬಂತಲ್ಲಾ ಅನ್ನೋ ಸಂಕಟ ಮತ್ತೊಂದು ಕಡೆ. ಆಗ್ಲಿ ಸುಡುಗಾಡಿನ್ಯಾಗ್ಲ ಆಗ್ಲಿ. ಒಟ್ಟ ಆ ಲಿಲ್ಲಿ ಕೊಳ್ಳಿಗೆ ತಾಳಿ ಕಟ್ಟಿ ಅಕಿ ಸೊಕ್ಕು ಮುರಿತೆನಿ ತೀರ್ತು. ಹೌದು, ಇಕೇನು ಇನ್ನು ಬರ್ಲಿಲ್ಲಲ್ಲ? ಕೈ ಕೊಟ್ಲೇನು ಮತ್ತ? ಯಾಕಂದ್ರ ಬಲು ಚೆರಿಕೆ ಹೆಣ್ಣದು. (ಆ ಕಡೆ ನೋಡಿ) ಯಾರೋ ಯಜಮಾನ್ರು ಈ ಕಡೆನೆ ಬರ್ತಿದಾರಲ್ಲ? ನನ್ನ ಮದಿವ್ಯಾಗೋ ಕಾಲಕ್ಕ ಯಾಪ್ದರ ಹೆಣ ತರಾಕ್ಹತ್ಯಾರೇನಂತೀನಿ? (ಯಜಮಾನನ ವೇಷದಲ್ಲಿ ಲಿಲ್ಲಿ ಬರುವಳು) ನಮಸ್ಕಾರ್ರಿ ಯಜಮಾನ್ರೆ.

ಲಿಲ್ಲಿ– ಯಾರದು? (ನೋಡಿ) ಮದುಮಗನ ವೇಷದಾಗ ಬಂದಿದಿಯಂದ್ರ, ಆ ಹುಡಿಗ್ಹೇಳಿದ ಹುಡುಗ ಸೀನ ಇರಬೇಕು. ನಿನ್ನ ಹೆಸರು ಮೂರ್ತೇನಪಾ?

ಮೂರ್ತಿ– ಹೌದು ಅಂದಂಗ ನೀವ್ಯಾರು? ಸುಡುಗಾಡಿಗೆ ಬಂದು ನನ್ನ ಹೆಸರು ಸೈತ ಹೇಳ್ತಿರಲ್ಲ.

ಲಿಲ್ಲಿ– ಎಂಥಾ ಹುಚ್ಚದಿಯೋ ನೀನು. ನನ್ನ ಕೈಯಾಗಿರೋ ಸಾಮಾನು ನೋಡಿದ್ರ ಗೊತ್ತಾಗುತ್ತ ನಾ ಯಾರು ಅಂತ.

ಮೂರ್ತಿ– ಗೊತ್ತಾತೇಳ್ರಿ. ಶವ ಇನ್ನೂ ದೂರೈತೇನ್ರಿ ?

ಲಿಲ್ಲಿ– ಶವ ? ಯಾವ ಶವ ? ಯಾರ ಶವ ?

ಮೂರ್ತಿ– ಸಧ್ಯ ನೀವ್ಯಾರ ಶವಕ್ಕ ಬಂದಿರಿ ?

ಲಿಲ್ಲಿ– ತಮ್ಮ, ನನ್ನ ಯಾರಂತ ತಿಳದಿ ನೀನು ?

ಮೂರ್ತಿ– ಸಮಾಧಿ ಮ್ಯಾಲ ಕುಂತು, ಮಂತ್ರ ಹೇಳೋ ಸ್ವಾಮ್ಯಾರಲ್ಲ ನೀವು ?

ಲಿಲ್ಲಿ– ತಪ್ಪು ನಿಂದಲ್ಲಪ್ಪಾ, ಆ ಹುಡುಗಿ ಮಾತು ಕೇಳಿ ಇಲ್ಲಿಗೆ ಬಂದೀನಲ್ಲ ನನ್ನ ತಪ್ಪು. ನೋಡಪಾ ನನ್ನ ಹೆಸರು ಗೋವಿಂದ ಶಾಸ್ತ್ರೀ ಅಂತ. ಸಧ್ಯ ನಿನ್ನ ಮದಿವಿ ಮಾಡಾಕ ಬಂದೀನಪ.

ಮೂರ್ತಿ– ಅಂದ್ರ ಲಿಲ್ಲಿ ಕಳಸ್ಯಾಳೇನ್ರಿ ನಿಮ್ಮನ್ನ?

ಲಿಲ್ಲಿ– ಆಂ, ಈಗ ತಿಳದಂಗಾತ ನೋಡು ನನಗ. ಆ ಹುಡುಗಿ ನನ್ನ ಹತ್ರ ಬಂದು ಹಿಂಗ ಸುಡುಗಾಡಿನ್ಯಾಗ ಮದಿವಿ ಇಟ್ಕೊಂಡಿವಿ. ದಯಮಾಡಿ ನೀವು ಬಂದು ನಮ್ಮ ಮದಿವಿ ಮಾಡಿ, ಆಶೀರ್ವಾದ ಮಾಡಬೇಕು ಅಂದ್ಲು. ಮದಿವಿ ಜಗಾ ಕೇಳೇ ವಿಚಾರಕ್ಕ ಬಿದ್ದಿದ್ದೆ. ಕೂಸಿಗೆ ಆಕಿನ ಎಲ್ಲಾ ತಿಳಿಸ್ಯಾಳ. ಇಲ್ಲಿಗೆ ಕಳಿಸಿಕೊಟ್ಟಾಳೇನಪಾ.

ಮೂರ್ತಿ– ದಯಮಾಡಿ ಕ್ಷಮಾ ಮಾಡ್ರಿ. ನಾ ಬ್ಯಾಗನ ತಿಳಿದಿಲ್ಲ ನಿಮ್ಮನ್ನ. ಈ ಸುಡುಗಾಡಿನ್ಯಾಗ ನಿಂತೀನಲ್ಲ ದಿಕ್ಕ ತಿಳಿದಂಗಾಗೇತಿ ನನಗ. ಅಲ್ರಿ ಶಾಸ್ತ್ರಿಗಳ ಹಿಂದಕ್ಯಾವರ ಸುಡುಗಾಡಿನ್ಯಾಗ ಮದಿವ್ಯಾಗ್ಯಾವೇನ್ರಿ? ಯಾಕಂದ್ರ ನಾನು ಮೊದಲಿನವನಾಗಬಾರ್ದಂತ.

ಲಿಲ್ಲಿ– ರಗಡಾಗ್ಯಾವ ನೀ ಚಿಂತಿ ಬಿಡು. ಇದಕ್ಕಿಂತ ಪವಿತ್ರವಾದ ಜಗ ಮತ್ತೊಂದಿಲ್ಲೇನಪಾ. ಇಲ್ಲಿ ನಿಂತು ನೀ ಹಾಕೋ ತಾಳಿ ಗಂಟು, ಬ್ರಹ್ಮ ಗಂಟಾಗುತ್ತ.

ಮೂರ್ತಿ– ನಿಮಿಷ್ಟು ಧೈರ್ಯ ಕೊಟ್ಟವ್ಯಾಲ ಮಾತ್ಯಾಕ ತಡ. ಎಲ್ಲಿದಾಳ ಕರೀರಿ ಲಿಲ್ಲಿನ ಸಟ್ನ ಕಟ್ಟೇ ಬಿಡ್ತೀನಿ ತಾಳಿನ.

ಲಿಲ್ಲಿ– ಸ್ವಲ್ಪ ತಡಿ ತಮ್ಮ ನಾನಕಿನ ಇಲ್ಲೆ ದೇವಸ್ಥಾನದಾಗ ಕುಂದ್ರಿಸಿ ಬಂದೀನಿ. ಸಧ್ಯ ಕರ್ಕೊಂಡ್ಬಂದು ಮದಿವಿನೂ ಮಾಡ್ತೀನಿ. ಆದ್ರ, ನಾನು ಆ ಹುಡುಗಿಗೆ ತಂದಿದ್ದಂಗ. ಹಿಂಗಾಗಿ ನಮ್ಮ ಸಂಪ್ರದಾಯದ ಪ್ರಕಾರ ಮದಿವಿ ಮಾಡಿ ಕೊಡ್ತೀನಿ ಅದಕ್ಕ ನೀನು ಅಡ್ಡಿ ಮಾಡಬಾರದು.

ಮೂರ್ತಿ– ಸುಡುಗಾಡಿನ್ಯಾಗ ನಿಂತೀನಿ, ಸುಡುಗಾಡು ಸಂಪ್ರದಾಯದಾಗ ಮದಿವಿ ಮಾಡಿಕೊಡ್ರಿ. ನಾ ಕಣ್ಣು ಮುಚ್ಕೊಂಡು ತಾಳಿ ಕಟ್ತೀನಿ. ಮುದಲಕೀನ

ಲಿಲ್ಲಿ– ಅತ್ತ್ಯಂಗಾರ ಸಭ್ಯ ಕರ್ಕೊಂಡು ಬರ್ತೀನಿ.

ಮೂರ್ತಿ– ಅಂತೂ ನನ್ನ ಮದಿವಿ ಗಟ್ಯಾದಂಗಾತು. ಅದ್ರೂ ಲಿಲ್ಲಿ ಕೊರಳಿಗೆ ತಾಳಿ ಕಟ್ಟಿ. ಆ ರಂಗ್ಯಾನ ಮುಂದ ಮೀಸಿ ಮುರಿ ಮಾಡಿ ನಿಂತಾಗ ನನಗ ಸಮಾಧಾನ.

(ಲಿಲ್ಲಿ ಹೆಣ್ಣಿನ ವೇಷದಲ್ಲಿರುವ ರಂಗನನ್ನು ಕರೆತರುತ್ತಾ)

ಲಿಲ್ಲಿ– ಬಾ ತಂಗಿ ಬಾ. ಈಗ್ಲ ಇಷ್ಟ್ ನಾಚಿಕೊಂಡ್ರ ಹೆಂಗ.

ಮೂರ್ತಿ– ಹಾಯ್ ಲಿಲ್ಲಿ...

ಲಿಲ್ಲಿ- ಅಂ...ಅಃ... ಸಂಪ್ರದಾಯ. ಸಂಪ್ರದಾಯ ತಾಳಿ ಕಟ್ಟೋತನ ಇಬ್ರ್ನ ಮಾತಾಡಿಸಬಾರ್ದು. ನೋಡ್ಬ್ಯಾರ್ದು ತಿಳಿತಿಲ್ಲ?

ಮೂರ್ತಿ– ಹೌದ್ದು. ತಾಳಿ ತರ್ರಿಲ್ಲಿ

ಲಿಲ್ಲಿ– ಕೊಡ್ತೀನಿ ಯಾಕವಸರ ಮಾಡ್ತಿ? (ಹೂವಿನ ಹಾರ ಕೊಡುತ್ತಾ) ಮೊದ್ಲ ಹಾರ ಒಬ್ಬರಿಗೊಬ್ರು ಹಾಕ್ರಿ. (ಇಬ್ರೂ ಹಾರ ಬದಲಾಯಿಸುವರು) ತಾಳಿ ಹಿಡ್ಕೊಳ್ಳಿ ತಮ್ಮ (ಕೊಟ್ಟು) ನಾ ಮಂತ್ರ ಅಂತೀನಿ, ನೀನು ಕಣ್ಣು ಮುಚ್ಚಿಕೊಂಡು ತಾಳಿ ಕಟ್ಬೇಕು.

ಮೂರ್ತಿ– ಕಣ್ಣ ಮುಚ್ಚಿಕೊಂಡ?

ಲಿಲ್ಲಿ– ಸಂಪ್ರದಾಯ–ಸಂಪ್ರದಾಯ.

ಮೂರ್ತಿ– ಆತು. ದೌಡು ಮಂತ್ರ ಅನ್ರಿ. ಕಣ್ಣ. ಕಿವಿ ಎಲ್ಲಾ ಮುಚ್ಕೊಂಡೇ ತಾಳೀ ಕಟ್ತೀನಿ.

ಲಿಲ್ಲಿ– ಹಂಗಾರ ಶುರು ಮಾಡ್ಲಾ ?

ಮೂರ್ತಿ– ಇನ್ನೂ ಕೇಳ್ತಿರಲ್ಲ. ತಡ ಅದ್ರ. ನಾನ್ನ ಶುರು ಮಾಡ್ತೀನಿ ಮಂತ್ರ ಅನ್ನಾಕ.

ಲಿಲ್ಲಿ– ಬ್ಯಾಡ ನಾನಂತೀನಿ (ಮಂತ್ರ ಅನ್ನುವಳು, ಮೂರ್ತಿ ತಾಳಿ **ಕಟ್ಟುವನು**) ಅಡ್ಡಿ ಇಲ್ಲ ತಾಳಿ ಚಂದ ಕಟ್ಟಿ. ಸರ್ವೀಸ್ ಬಾಳಾಗಿರ್ಬೇಕು.

ಮೂರ್ತಿ– ಅಂದ್ರ. ಒಂದ್ಕೈದಾರ್ನೂರು ತಾಳಿ ಕಟ್ಟೀನಂತ ತಿಳಿದೀರೇನು?

ಲಿಲ್ಲಿ– ಹಂಗಲ್ಲ. ಮದವಿ ಮನಿ ಬಾಳಪ್ಪಾಡಿದಿ ಅಂದೆ.

ಮೂರ್ತಿ– ಆತು, ನಮಗ ಆಶೀರ್ವಾದ ಮಾಡಿ ಜಗಾ ಬಿಡ್ರಿ. ಲಿಲ್ಲಿ ಯಜಮಾನರ ಕಾಲಿಗೆ ಬೀಳು. (ಕಾಲಿಗೆ ಬೀಳುವರು)

ಲಿಲ್ಲಿ– ವರ್ಷ ತುಂಬೋದ್ರಾಗ ಅವಳಿ–ಜವಳಿ ಪ್ರಾಣಿಗಳಿಗೆ ಜೀವ ಕೊಡ್ರಿ.

ಮೂರ್ತಿ– ಪ್ರಾಣಿಗಳಿಗಾ...?

ಲಿಲ್ಲಿ– ಅದ್ರ ನಮ್ಮ ಸಂಪ್ರದಾಯದಾಗ...

ಮೂರ್ತಿ– ಸ್ಟಾಪ್. ನಿಮ್ಮ ಸಂಪ್ರದಾಯದ ಅವಧಿ ಮುಗಿತು. ಇನ್ನು ನನ್ನ ಸಂಪ್ರದಾಯ ಪ್ರಾರಂಭಾಗುತ್ತ. ನೀವು ಮನಿಗೆ ನಡಿರಿ. ಆಮ್ಯಾಲ ಬಂದು ದಕ್ಷಿಣೆ ಕೊಡ್ತೀನಿ.

ಲಿಲ್ಲಿ– ಹಂಗ ಮಾಡು ಯಾರು ಬ್ಯಾಡಂತಾರ. (ರಂಗನಿಗೆ) ತಂಗಿ ನಾ ನಡಿಲೇನವಾ? (ರಂಗ ತಲೆಯಾಡಿಸುವನು) ಹುಡಿಗಿ ಬಾಳ ನಾಚುತ್ತ. ನಾ ನಡಿತೇನಿ. ನಿನ್ನ ರಸ ಸನ್ನಿವೇಶ ಪ್ರಾರಂಭ ಮಾಡಿಕೊ. (ಹೋಗುವಳು)

ಮೂರ್ತಿ– ಲಿಲ್ಲಿ ಕೊನಿಗೂ ನೀ ನನ್ನ ಹೆಂಡ್ತಿ ಆದೆಲ್ಲ. ನಾನೇ ಪುಣ್ಯವಂತ. ಸಧ್ಯ ಈ ಮುಸುಕು ತೆಗೆದು ನಿನ್ನ ಮುದ್ದು ಮುಖ ತೋರ್ಸು. ಸಣ್ಣ ಮುತ್ತು ಕೊಡ್ತೀನಿ. ಅದ್ರ ಮತ್ತಿನಾಗ ಹನಿಮೂನಿಗೆ ಹೋಗೂನಂತ.

ರಂಗ– (ಮುಸುಕು ತೆಗೆದು) ನೋಡ್ಹಂಗಾರ ನನ್ನ ಮುಸುಡಿನ. ಕೊಡು ನಿನ್ನ ಮುತ್ತನ್ನ.

ಮೂರ್ತಿ– ರಂಗ್ಯಾ...ನೀನ್ಹ...? (ಓಡಿಹೋಗುವಾಗ ಹಿಡಿದು)

ರಂಗ– ಎಲ್ಲಿಗ್ಹೋಗುವೆ ಪ್ರಾಣಕಾಂತ ?

ಮೂರ್ತಿ– ಕೈ ಬಿಡಲೆ ರಂಗ, ನಿನ್ನ ಕಣ್ಣಿಗೆ ಕಾಣದಂಗ್ಹೋಕ್ಕೀನಿ.

ರಂಗ– ಇದೇನು ಪತಿದೇವಾ ? ಈಗ ತಾನೆ ಭೂತ. ಪ್ರೇತಗಳ ಸಾಕ್ಷಿಯಾಗಿ ತಾಳಿಕಟ್ಟಿ. ಈಗೊಮ್ಮಿಗೆ ಹೋಗ್ತಿನಿ ಅಂತಿರಲ್ಲ ? ಯಾಕೆ ನನ್ನ ರೂಪ ನಿಮಗೆ ಹಿಡಿಸಲಿಲ್ಲವೆ ? ನನ್ನ ಜೊತೆಗೆ ಹನಿಮೂನಿಗೆ ಬರುವುದಿಲ್ಲವೆ ?

ಮೂರ್ತಿ– (ಬಾಯಿ ಬಡಿದುಕೊಂಡು) ನಿನ್ಕೂಡ ಹನಿಮೂನ ? ಬ್ಯಾಡಲೆಯಪ್ಪಾ. ನನ್ನ ಕೈ ಬಿಟ್ಟುಬಿಡು.

ರಂಗ– ಹಾಗಂದ್ರೆ ಹೇಗೆ ಪ್ರಿಯ ? ನಾವಿಬ್ರೂ ಹನಿಮೂನಿಗೆ ಹೋಗ ಬೇಕು, ಗಂಡು ಮಗನ್ನ ಹಡದು, ನಿಮ್ಮ ವಂಶಜ್ಯೋತಿ ಬೆಳಗಿಸಬೇಕು.

ಮೂರ್ತಿ– ಶ್ರೀಹರಿ. ಪಾಂಡುರಂಗಾ. ಕೇಳಲಾರೆ... ಕೇಳಲಾರೆ.

ರಂಗ– ಪತಿದೇವ, ವಿರಹ ವೇದನೆ ನಾ.ತಾಳಲಾರೆ... ತಾಳಲಾರೆ.

ಮೂರ್ತಿ– ನಾನಿನ್ನ ಮುಖ ತೋರಿಸಲಾರೆ... ತೋರಿಸಲಾರೆ. (ಕೊಸರಿಕೊಂಡು ಓಡುವನು)

ರಂಗ– ಪತಿದೇವಾ... ಪ್ರಾಣಕಾಂತಾ... ನಾನೂ ಬರುತ್ತೇನೆ ತಡಿ ಪ್ರಿಯ. (ಹಿಂಬಾಲಿಸುವನು)

## ಹದಿನಾರನೆಯ ದೃಶ್ಯ

### ವಿಿಲ್ಲಿನ ಆವರಣ

(ವಿಶಾಲ, ವನಜಾ, ವಕೀಲ ಇರುವರು)

ವಕೀಲ– ನೋಡವ್ವಾ ವನಜ ಬಹಳ ಜಾಣ್ಮೆಯಿಂದ ಆ ಮೂವರ ಅಂತರಾತ್ಮದ ಗುಟ್ಟು ತಿಳಿಯಲು ಪ ಯತ್ನ ಪಡು. ದುಡುಕಬೇಡ. ಅಷ್ಟರಲ್ಲಿ ನಾನು ಪೋಲೀಸರನ್ನು ಕರೆದುಕೊಂಡು ಬರ್‍ತೀನಿ. ನೀನು ಅಷ್ಟೆ ವಿಶಾಲಮ್ಮ. ಅವರಿಂದ ವಂಚಿತಳಾಗಿದ್ದೇನೆಂದು, ಆವೇಶದಲ್ಲಿ ಅನಾಹುತ ಮಾಡಬೇಡ. ಅವ ರನ್ನು ಕಾನೂನಿಗೆ ಒಪ್ಪಿಸೋಣ. ಶಿಕ್ಷೆ ನಂತರ ತೀರ್ಮಾನವಾಗಲಿ.

ವಿಶಾಲ– ವಕೀಲ್ರೆ, ಸಧ್ಯ ನಾನು ಮನುಷ್ಯಳಾಗಿ ಉಳಿದಿಲ್ಲ. ಆದ್ರೂ ಕರ್ತವ್ಯ ಮರೆಯುವುದಿಲ್ಲ. ನೀವು ಹೋಗಿ ಬನ್ನಿ (ಒಳಗ್ಹೋಗುವಳು)

ವಕೀಲ– ವನಜಮ್ಮ. ಇವಳ ಮಾತು ಕೇಳಿದ್ರೆ, ನನಗೇಕೋ ಭಯ ವಾಗ್ತಿದೆ. ನೀ ಸ್ವಲ್ಪ ಹುಷಾರಿಯಿಂದಿರಮ್ಮ. ನಾ ತಕ್ಷಣ ಬಂದ್ಬಿಡ್ತೀನಿ.

ವನಜ– ನನ್ನ ಮನಸ್ಸು ಸ್ಥಿಮಿತದಲ್ಲಿಲ್ಲ ವಕೀಲ್ರೆ. ಆದೇನು ಮಾಡ್ತಿರೊ ನೀವೇ ಮಾಡ್ರಿ.

ವಕೀಲ– ನೀನೇನೂ ವಿಚಾರ ಮಾಡಬೇಡಮ್ಮ. ಆ ಮೂರ್ತಿ ಹಿಂಭಾಗದಲ್ಲಿ ಟೇಪ್‌ರಿಕಾರ್ಡರ್ ಆನ್ ಮಾಡಿಟ್ಟಿದ್ದೇನೆ. ಯಾಕಂದ್ರೆ ಕೋರ್ಟಿನಲ್ಲಿ ಇವರ ವಿರುದ್ಧ ಸಾಕ್ಷಿಗೆ ಅದೇ ಆಧಾರವಾಗುತ್ತದೆ. ಧೈರ್ಯವಾಗಿರಮ್ಮ ಬರ್‍ತೀನಿ. (ಹೋಗುವನು)

ಭೋಜರಾಜ– ವನಜಾ...

ವನಜ– ಬರಬೇಕು ಮಾವನವರು. ಯಾಕೆ. ಬಹಳ ಖಿನ್ನವಾಗಿದ್ದೀರಲ್ಲ?

ಭೋಜರಾಜ– ಇಲ್ಲ. ಆಸ್ತಿಯನ್ನು ಕಂಡವರ ಹೆಸರಿಗೆ ಬರೆದಿರುವ ನಿನ್ನ ಮುಂದೆ ಶಿರಬಾಗಿ ನಿಲ್ತೀನಿ.

ವನಜ– ನನ್ನ ಆಸ್ತಿಯನ್ನು ಕಂಡವರ ಹೆಸರಿಗೆ ಬರೆದಿಲ್ಲ ಮಾವ. ನನ್ನ ಜೀವದ ಗೆಳತಿಗೆ ತ್ಯಾಗ ಮಾಡಿದ್ದೇನೆ.

ವಿಕ್ರಂ– ಇದು ತ್ಯಾಗವಲ್ಲ. ನಿನ್ನ ಹುಚ್ಚುತನ ಅಂತಾ. ನಿನ್ನ ಜೀವದ ಗೆಳತಿಯಾಗಿದ್ದರೆ, ಅವಳ ಮೇಲೆ ಅಷ್ಟೊಂದು ಪ್ರೀತಿಯಿದ್ದರೆ. ಅವಳನ್ನು ಮನೆಯಲ್ಲೇ ಇಟ್ಟುಕೊಂಡು ಸಾಯೋವರ್ಗೂ ಹೊಟ್ಟೆ. ಬಟ್ಟೆಗೆ ಕೊರತೆಯಾಗದಂತೆ ನೋಡಿಕೊಳ್ಳಬೇಕಾಗಿತ್ತು. ಅದೆಲ್ಲ ಬಿಟ್ಟು ಇಡೀ ಆಸ್ತಿಯನ್ನು ತ್ಯಾಗದ ರೂಪದಲ್ಲಿ ಅವಳಿಗೊಪ್ಪಿಸಿರುವುದು. ನಿನ್ನ ದುಡುಕು ಬುದ್ಧಿಯ ಅತಿರೇಕತನ.

ವನಜ– ಆ ರೀತಿ ಭಾವಿಸಿದರೆ. ನನ್ನ ದುರ್ದೈವ. ಅದೃಷ್ಟ. ನನ್ನ ಗೆಳತಿಯ ಸಮಸ್ಯೆಯೊಂದನ್ನು ಬಗೆ ಹರಿಸುವುದಕ್ಕಾಗಿ ನಾನಿಂತ ತ್ಯಾಗ ಮಾಡ್ಲೇಬೇಕಾಯ್ತು.

ಭೋಜರಾಜ– ಏನದವಳ ಅಂಥಾ ಸಮಸ್ಯೆ?

ವನಜ– ಯಾರೋ ನೀಚನೊಬ್ಬ ನನ್ನ ಗೆಳತಿಯನ್ನು ಪ್ರೇಮಿಸಿ ಮದುವೆಯಾಗುವೆನೆಂದು ನಂಬಿಸಿ, ಮೈಕದ್ದು, ಈಗ ಕೈಕೊಟ್ಟಿದ್ದಾನೆ. ನನ್ನ ಗೆಳತಿ ಅವನನ್ನು ಮದುವೆಯಾಗೆಂದು ಒತ್ತಾಯಿಸಿದಾಗ. ನಿನ್ನನ್ನು ಪ್ರೀತಿಸಿದ್ದು, ಮೋಹಿಸಿದ್ದು ಮೋಜಿಗೇ ಹೊರತು. ಮದುವೆಯಾಗುವುದಕ್ಕಲ್ಲ ಅಂದನಂತೆ ಆ ವಂಚಕ. ನಿನ್ನನ್ನು ಮದುವೆಯಾದರೆ ನನಗೆ ಸಿಗುವ ಭಾಗ್ಯ

ಮೇಸು? ಬಯಸಿದನಿ ಬಂಗಾರ ತುಂಬಿಕೊಂಡು ಹೊಸ್ತಿಲು ದಾಟಿ ಬರುವ ಹೆಣ್ಣುಗಳು ಸಾಕಷ್ಟಿದ್ದಾರೆ ಎಂದು ಬಡಾಯಿ ಕೊಚ್ಚಿಕೊಂಡಿದ್ದಾನಂತೆ. ಅಂದಾಗ, ಅವನ ಅಂತಸ್ತು ಯಾವ ಮಟ್ಟದಲ್ಲಿರಬೇಕು ನೀವೇ ಹೇಳಿ ಮಾವ.

ಭೋಜರಾಜ– ಅವನನ್ನು ನೋಡಿದ್ದರಲ್ಲವೆ ಹೇಳುವುದು.

ವನಜ– ಅಂತವರು, ನಮ್ಮಂತವರಿಗೆ ಕಾಣುವುದೂ ಕಷ್ಟ ಮಾವ. ಯಾಕಂದ್ರೆ, ಅವರ ಅಂತಸ್ತು ಕುಬೇರನ ಪ್ರತಿರೂಪದಲ್ಲಿದೆಯೋ. ತಿರಿದು ತಿನ್ನುವ ತಿರುಕನಿಗಿಂತಲೂ ಕೀಳಾಗಿದೆಯೋ ಅನ್ನುವುದು ನಮಗೆ ತಕ್ಷಣ ಗೊತ್ತಾಗಿ ಬಿಡುತ್ತದೆ. ಆದ್ರೂ ಆ ನೀಚ ಯಾವ ಕೊರತೆಯನ್ನು ಕಂಡು ನನ್ನ ಗೆಳತಿಯನ್ನು ಕೈ ಬಿಟ್ಟಿದ್ದಾನೋ, ಆ ಕೊರತೆ ನೀಗಿದವಳೆಂದು ಅರಿತು, ಮತ್ತವಳ ಸ್ಥಿತಿ ಪತಿಯಲಿ ಎಂದು ನಾನೀ ಕೆಲಸ ಮಾಡಿದ್ದೇನೆ. ಇದನ್ನು ಒಪ್ಪುತ್ತೀರೋ, ತಪ್ಪು ಅಂತೀರೋ?

ಭೋಜರಾಜ– ತಪ್ಪೊ, ಒಪ್ಪೊ ಒಟ್ಟು ನೀನು ತಿಪ್ಪೆಯ ಪಾಲಾಗುವುದಂತು ನಿಜ. ನಿನ್ನ ಗೆಳತಿ ಕೊರಳಿಗೆ ತಾಳಿ ಕಟ್ಟುವವನ ಅಧೀನಕ್ಕೆ ಅಪಾತಿಯಾಗುವ ನಿನ್ನಾಸ್ತಿ, ಮತ್ತೆ ಬಯಸಿದರೆ ಸಿಗುವುದೆಂದು ಭಾವಿಸಿರುವಿಯೇನು?

ವನಜ– ಸಿಗಲಿ, ಬಿಡಲಿ. ನನಗಂತೂ ನೋವಿಲ್ಲ. ಜೀವದ ಗೆಳತಿಯ ಬಾಳು ಬಂಗಾರವಾಯ್ತೆನ್ನುವ ಸಂತೋಷವಾದ್ರೂ ಆಗುತ್ತೆ.

ಭೋಜರಾಜ– ನಿನ್ನ ಸಂತೋಷಕ್ಕೆ ಬೆಂಕಿ ಬಿತ್ತು. ಮುಂದಿನ ನಮ್ಮ ಬದುಕು. ನಿನ್ನ ಬದುಕಿನ ಬಗ್ಗೆ ವಿಚಾರ ಮಾಡಿರುವಿಯೇನು?

ವನಜ– ನನ್ನ ಬದುಕಿನ ಬಗ್ಗೆ ನಾ ವಿಚಾರ ಮಾಡಿದ್ದೇನೆ. ಆದ್ರೆ,ನಿಮ್ಮ ಬದುಕಿನ ಬಗ್ಗೆ ನಾನ್ಯಾಕ ವಿಚಾರ ಮಾಡ್ಲಿ? ನೀವು ನನ್ನಾಸ್ತಿಯನ್ನೇ ನಂಬಿ ಬದುಕುತ್ತಿಲ್ಲವಲ್ಲ? ತಂದೆ ತಾಯಿ ಕಳೆದುಕೊಂಡವಳೆಂದು ತಿಳಿದು, ನನ್ನನ್ನು, ನನ್ನಾಸ್ತಿಯನ್ನು ಸಂರಕ್ಷಿಸುವ ಹೊಣೆ ಹೊತ್ತಿದ್ದಿರಷ್ಟೆ. ಎಷ್ಟಾದ್ರೂ ನೀವು ನಿಸ್ವಾರ್ಥ ಜೀವಿಗಳು. ಮೇಲಾಗಿ ಮೀಸೆ ಹೊತ್ತ ಗಂಡಸರು. ನಿಮ್ಮ ಬದುಕನ್ನು, ನಿಮ್ಮ ಸ್ವಂತಿಕೆಯಲ್ಲಿ ರೂಪಿಸಿಕೊಳ್ಳುವ ಸ್ವಾಭಿಮಾನಿಗಳೇ ಹೊರತು, ಬಾಂಧವ್ಯ, ಸಂಬಂಧಗಳ ನೆಪದಲ್ಲಿ, ಕಂಡವರ ಆಸ್ತಿಯನ್ನು ಆಶಿಸುವ ಅಜ್ಞಾನಿಗಳಲ್ಲ ಅಂದಾಗ, ನಿಮ್ಮ ಬದುಕಿನ ಬಗ್ಗೆ ನಾನ್ಯಾಕ ವಿಚಾರ ಮಾಡ್ಲಿ? ಇನ್ನು

ನನ್ನ ಬದುಕಿನ ಬಗ್ಗೆ ನಾನೇನೂ ವಿಚಾರ ಮಾಡುವಂತಿಲ್ಲ. ಯಾಕಂದ್ರೆ ಅರವಿಂದರು ನನ್ನನ್ನು ಮದುವೆಯಾಗಿ, ನನ್ನ ಬದುಕಿಗೆ ಮಾರ್ಗದರ್ಶಕರಾಗ್ತಾರೆ. ಅಲ್ಲವೆ ಅರವಿಂದ?

ಅರವಿಂದ– ಈ ನಿನ್ನ ಹುಚ್ಚುತನದ ಮಾತಿಗೆ ನಗಬೇಕೋ. ಅಳಬೇಕೋ ಗೊತ್ತಾಗುತ್ತಿಲ್ಲ. ಜಿಪುಣನ ಹತ್ತಿರ ದಾನ ಕೇಳಿದಂತಾಯ್ತು ನಿನ್ನ ಪ್ರಶ್ನೆ.

ವನಜ– ಆದರೆ, ನೀವೇನು ಜಿಪುಣರಲ್ಲವಲ್ಲ?

ಅರವಿಂದ– ಜಿಪುಣನಲ್ಲ, ಅವನಿಗಿಂತ ನಿಪುಣ, ಜಿಪುಣ. ಪೈಸಕ್ಕೆ ಪೈಸಾ ಸೇರ್ಸಿ ಗಂಟು ಮಾಡ್ತಾನೆ, ನಿಪುಣ. ಕೂಡಿಟ್ಟ ಗಂಟನ್ನ ಲಪಟಾಯಿಸ್ತಾನೆ. ಅದರಂತೆ ನಾನಾದ್ರೂ ನಿನ್ನನ್ನು ಪ್ರೀತಿಸಿದ್ದು ಅಂದ ಚಂದ ನೋಡಿಯಲ್ಲ, ನಿನಗೆ ತಾಳಿ ಕಟ್ಟಿದರೆ ಸಿಗಬಹುದಾದ ಧನಕನಕಗಳ ಆಸೆಯಿಂದ.

ವನಜ– ಹಾಗಾದ್ರೆ ನಿಮ್ಮ ಪ್ರೀತಿ. ಪ್ರೇಮ. ಆದರ್ಶ ಎಲ್ಲಾ ಸುಳ್ಳೆ?

ಅರವಿಂದ– ಸುಳ್ಳಲ್ಲ ನಿಜವೆ! ಆದರೆ, ಮರಣ ಪರ್ಯಂತರ ಅಲ್ಲ, ಕಾರ್ಯ ಸಾಧಿಸುವತನಕ ಇದುವರೆಗೂ ನಿನ್ನಾಸ್ತಿಯನ್ನುವ ಸೂಜಿಗಲ್ಲು. ನನ್ನ ಮೆದುಳೆನ್ನುವ ಕಬ್ಬಿಣವನ್ನು ತನ್ನೆಡೆಗೆ ಸೆಳೆದುಕೋಡು ವಿಚಾರ ದೂರ ಹೋಗದಂತೆ ತಡೆ ಹಿಡಿದಿತ್ತು. ಯಾವಾಗ ನಿನ್ನಾಸ್ತಿ ಮತ್ತೊಬ್ಬರ ಸೊತ್ತಾಯಿತೋ ಆವಾಗಲೇ ಸೂಜಿಗಲ್ಲು, ಸಾಮಾನ್ಯ ಕಲ್ಲಾಗಿ ತನ್ನ ಆಕರ್ಷಣ ಶಕ್ತಿಯನ್ನು ಕಳೆದುಕೊಂಡು ವಿಚಾರ ಕವಲೊಡೆಯಲು ನನ್ನ ಮೆದುಳಿಗೆ ಪರ್ಮಿಷನ್ ಕೊಟ್ಟಂತಾಯಿತು. ಸಧ್ಯ ನನ್ನ ಮೆದುಳನ್ನು ನಿಯಂತ್ರಿಸುವ ಕೇಂದ್ರಬಿಂದು ಎಲ್ಲಿದೆಯೋ ನನಗೂ ತಿಳಿದಿಲ್ಲ.

ವನಜ– ಅರ್ಥವಾಯ್ತು ಡಾಕ್ಟ್ರೆ, ನಿಮ್ಮ ಒಳಗುಟ್ಟಿನ ಮರ್ಮ ಅದರಂತೆ ನನ್ನಂತರಾತ್ಮದ ಗುಟ್ಟೊಂದು ನಿಮಗೂ ಅರ್ಥವಾಗಬೇಕಲ್ಲ?

ಅರವಿಂದ– ಏನದು ನಿನ್ನ ಗುಟ್ಟು?

ವನಜ– ಅಂ... ಅ..., ಹೇಳ್ತೀನಿ. ಅದಕ್ಕಿಂತ ಮೊದ್ಲು, ನಿಮ್ಮ ನೀಚ

ಗುಣಗಳ ಪರಿಚಯವನ್ನು ನೀವಾಗೇ ನನಗೆ ಮಾಡಿ ಕೊಟ್ಟಿದ್ದಕ್ಕೆ ನನ್ನ ಧನ್ಯವಾದಗಳು. ಮಿ॥ ಭೋಜರಾಜ...

ಭೋಜರಾಜ– ವನಜ ಏನಿದು?

ವನಜ– ಯಾವುದು?

ಭೋಜರಾಜ– ನೀನು ನನ್ನನ್ನು ಭೋಜರಾಜ ಎಂದು ಕರೆಯುತ್ತಿರುವುದು.

ವನಜ– ನೀನು ಭೋಜರಾಜನಲ್ಲದೆ ಮತ್ತೇನು ತ್ಯಾಗರಾಜನೆ? ಎಲ್ಲಿಯವರೆಗೆ ನಿನ್ನ ಒಳಮುಖದ ಪರಿಚಯವಿರಲಿಲ್ಲವೋ, ಅಲ್ಲಿಯವರೆಗೂ ಮಾವನಾದರೂ ತಂದೆಯ ಸ್ಥಾನದಲ್ಲಿದ್ದೆ. ಈಗ ನಿನ್ನ ವ್ಯಾಘ್ರಮುಖ ಕಂಡ ನಂತರ ತಂದೆಯಾದರೂ ನನ್ನ ದೃಷ್ಟಿಯಲ್ಲಿ ಹಂದಿಯೇ ಹೋಗತ್ತು. ಮಹಾತ್ಮ ಗಾಂಧಿಯಾಗಲಾರೆ. ನೀವು ಮನುಷ್ಯರೂಪಕ್ಕೆ ಹೊರತಾದ ಪಶುಗಳು. ಹೆಂಡತಿ ಯಾರು? ತಾಯಿ ಯಾರು? ಮಗಳಿಗೂ ಇವರಿಗೂ ಇರುವ ವ್ಯತ್ಯಾಸವೇನು? ಯಾರೊಡನೆ ಯಾವ ರೀತಿ ವರ್ತಿಸಬೇಕೆನ್ನುವ ಪರಿಜ್ಞಾನವಿಲ್ಲದೆ, ಭಾರತ ಮಾತೆಯ ಪ್ರತಿರೂಪವಾದ ಹೆಣ್ಣಿನ ಶೀಲವನ್ನು ಹಂಚಿಕೊಂಡವರೇ.... ನೀವು ಸಾಮಾನ್ಯ ಕಾಮುಕರಲ್ಲ. ತಾಯಿಯ ಪಕ್ಕದಲ್ಲಿ ಮಲಗಿ ನಾಯಿಯಂತೆ ವರ್ತಿಸುವ ಶೌಯ್ಗ್ಯಂಡರು ನೀವು.

ವಿಕ್ರಂ– ವನಜಾ......?

ಭೋಜರಾಜ– ವಿಕ್ರಂ, ಯಾಕಪ್ಪಾ ಸುಮ್ಮನೆ ತ್ರಾಸು ತಗೊಂತಿಯ? ಪಾಪ, ಬಹಳ ದಿನದ ನಂತರ ನಮ್ಮ ದೊಡ್ಡಗುಣ ಅವಳಿಗೆ ಅರ್ಥವಾಗಿದೆಯಂಬಾಗ. ಆನಂದ ಹೆಚ್ಚಾಗಿ ಆತುರದಲ್ಲಿ ಸ್ವಲ್ಪ ಅಂಕೆ ತಪ್ಪಿ ಮಾತಾಡ್ತಿದ್ದಾಳೆ ಅಷ್ಟೆ. ಇದನ್ನೆಲ್ಲಾ ತಿಳಿದವರಾದ ನಾವು ಸೀರಿಯಸ್ಸಾಗಿ ತಗೋಬಾರ್ದು. ನಮಗವಳು ತಂದೆ ಅಂದ್ರೇನು? ಹಂದಿ ಅಂದ್ರೇನು? ನಾವಂತೂ ಈ ಸಮಾಜದಲ್ಲಿ ಜೂನಿಯರ್ ಗಾಂಧಿಗಳಾಗೇ ಇರ್ತೀವಿ. ಅಂದ ಹಾಗೆ, ವನಜಾ ದೇವಿ..., ಈ ಆಸ್ತಿಯ ಅಧಿಕಾರಿ, ಆ ನಿನ್ನ ಗೆಳತಿ ಎಲ್ಲಿದ್ದಾಳೆ ಹೇಳ್ತಿಯೋ ನಮ್ಮಾ?

(ವಿಶಾಲ ಒಳಗಿನಿಂದ ಬರುವಳು)

ವಿಶಾಲ– ನಾನಿಲ್ಲಿ ಇದ್ದೇನೆ ಭೋಜರಾಜ.

ಭೋಜರಾಜ– ಯಾರು, ವಿಶಾಲ...?

ವನಜ– ಹೌದು ವಿಶಾಲ. ನನ್ನಾಸ್ತಿಯನ್ನು ಇವಳಿಗೇ ತ್ಯಾಗ ಮಾಡಿರುವುದು ಯಾಕೆಗೊತ್ತೇನು? ಹಣ್ಣಿನಂತೆ, ಇವಳ ಶೀಲ ಹಂಚಿ ತಿಂದಿರುವ, ನಿಮ್ಮನ್ನು ಹುರುಪುಗೊಳಿಸುವುದಕ್ಕಾಗಿ. ಯಾಕಂದ್ರೆ. ಆಸ್ತಿ ದಕ್ಕುವುದೆಂದರೆ, ಒಂದು ಹೆಣ್ಣು ಕತ್ತೆಗೂ ತಾಳಿ ಕಟ್ಟಲು ಸಿದ್ಧರಿರುವ ದೊಡ್ಡಗುಣದವರಲ್ಲವೆ ನೀವು?

ಭೋಜರಾಜ– ವೆರಿಗುಡ್ ಚನ್ನಾಗರ್ಥ ಮಾಡಿಕೊಂಡಿರುವಿ ನಮ್ಮ ಗುಣಗಳನ್ನು. ಈ ಮೊದಲು ಆಸ್ತಿಯಿಲ್ಲದ ಇವಳನ್ನು ಕೇವಲ ನಮ್ಮ ಭೋಗದ ವಸ್ತುವಾಗಿ ಬಳಸಿಕೊಂಡೆವು. ವೇಶಿಯೆಂದು ಅಪಹಾಸ್ಯ ಮಾಡಿದವು ಆದರೆ ಸಧ್ಯ ಆಸ್ತಿಯ ಬಡತಿಯಾಗಿರುವ ಇವಳೀಗ ನಮಗೆ ಮಹಾ ಪತಿವ್ರತೆಯಾಗಿ ಕಾಣುತ್ತಿದ್ದಾಳೆ.

ವಿಕ್ರಂ– ಸಧ್ಯ ಅವಳೊಪ್ಪಿದ್ರೆ ಸಾಕು. ಭಾರತದ ಯಾವ ಹೆಣ್ಣಿಗೂ ದೊರೆಯದ ಭಾಗ್ಯವೆನ್ನುವಂತೆ ಮೂರು ತಾಳಿಗಳು ಅವಳ ಕೊರಳಿಗೇರಲು ಸಿದ್ಧ ಕಾರಣ ತಾಳಿ ಕಟ್ಟಿಸಿಕೊಳ್ಳುವವಳ ವಿಚಾರವೇನಿದೆ ಕೇಳು, ನಾವು ಕಟ್ಟುವ ಮೂರು ತಾಳಿಗಳಿಗಷ್ಟೇ ಕೊರಳು ನೀಡುತ್ತಾಳೊ ಅಥವಾ...

ಅರವಿಂದ– ಹೊಸ ಇತಿಹಾಸ ಸೃಷ್ಟಿಸುವುದಕ್ಕಾಗಿ, ಒಬ್ಬರಿಂದ ಎರಡರಂತೆ ಆರು ತಾಳಿಗಳನ್ನು ಕಟ್ಟಿಸಿಕೊಳ್ಳಲು ಬಯಸುತ್ತಾಳೋ?

ವನಜ– ಛೀ... (ವನಜ ಹೋಗುವಳು)

ವಿಶಾಲ– ಭಲೇ ಗಂಡಸರೇ ಭಲೇ ನಿಮ್ಮನ್ನು ಹೊತ್ತು ನಿಂತಿರುವ ಭೂದೇವಿ ಕೂಡ ಹೆಮ್ಮೆ ಪಡಬೇಕು. ನಿಮ್ಮ ದಯಾಳು ಮಾತು ಕೇಳಿ. ಒಂದೇ ತಾಳಿಯ ಬಾಗಕಾಗಿ ಹೆಣಗಿ ಹೆಣವಾಗುತಿರುವ ಹೆಣ್ಣುಗಳ ಸಾಲಿನಲಿ

ಆರು ತಾಳಿಗಳ ಭಾಗ್ಯ ಪಡೆದು ಬಂದಿರುವ ಪುಣ್ಯವಂತೆ ನಾನೆಂದರೆ ತಪ್ಪಾಗಲಾರದು. ಆದರೆ...

ವಿಕ್ರಂ– ಆದರೆ...?

ವಿಶಾಲ– ಆರು ತಾಳಿಗಳನ್ನು ಕಟ್ಟಲು ನೀವು ಸಿದ್ಧರಿದ್ದರೂ, ಕಟ್ಟಿಸಿಕೊಳ್ಳಲು, ಹಿಂದೂ ಸಂಸ್ಕೃತಿ ಆದರಿಸುವ ನನ್ನ ಮನಸೊಪ್ಪುತ್ತಿಲ್ಲ. ಕಾರಣ...

ಅರವಿಂದ– ಕಾರಣ...?

ವಿಶಾಲ– ನನ್ನ ಮೈ ಕದ್ದಿರುವ ಮೂವರಲ್ಲಿ ಯಾರಾದರೊಬ್ಬರು ನನಗೆ ಪತಿಯಾಗಬಹುದು. ಯಾರು ನನ್ನ ಕೊರಳಿಗೆ ತಾಳಿ ಕಟ್ಟುವರೋ ಅವರೇ ನನ್ನಾಸ್ತಿಗೆ ಒಡೆಯರಾಗುತ್ತಾರೆ. ಇದನ್ನು ಗಮನದಲ್ಲಿಟ್ಟುಕೊಂಡು. ವಿಚಾರಿಸಿ. ಯಾರು ನನ್ನ ಕೊರಳಿಗೆ ತಾಳಿ ಕಟ್ಟುವಿರೋ ಹೇಳಿ.

ಅರವಿಂದ– ಯಾರೇಕೆ? ನಾನು ನಿನ್ನ ಕೊರಳಿಗೆ ತಾಳಿ ಕಟ್ಟುತ್ತೇನೆ.

ವಿಕ್ರಂ– ಅದೆಂದಿಗೂ ಸಾಧ್ಯವಿಲ್ಲ. ಇವಳನ್ನು ಪ್ರೀತಿಸಿ, ಮದುವೆಯಾಗುತ್ತೇನೆಂದು ಮಾತು ಕೊಟ್ಟ ಮೊದಲಿಗ ನಾನು. ಅಂದಾಗ, ಇವಳನು ಮದುವೆಯಾಗುವ ಹಕ್ಕು ನನಗಲ್ಲದೆ ಮತ್ತಾರಿಗೂ ಇಲ್ಲ.

ಅರವಿಂದ– ಹಕ್ಕು? ಯಾವ್ದೋ ನಿನ್ನ ಹಕ್ಕು? ನೀನಿವಳನ್ನು ಪ್ರೀತಿಸಿರಬಹುದು, ಮದುವೆಯಾಗುತ್ತೇನೆಂದು ಮಾತೂ ಕೊಟ್ಟಿರಬಹುದು. ಅದ್ರದು, ಮುಗಿದ ಕಥೆ, ಕಾಣದ ಕೃತ್ಯ. ನಾನಿವಳನ್ನು ಭೋಗಿಸಿರುವುದನ್ನು ನೀವೇ ಸಿದ್ಧ ಮಾಡಿ ತೋರಿಸಿದ್ದೀರಿ. ಅಂದಾಗ ಇವಳನ್ನು ಮದುವೆಯಾಗುವ ಹಕ್ಕು ನನಗೆ ಮಾತ್ರ ಇರೋದು.

ವಿಕ್ರಂ– ನೆವ್ವರ್, ಇವಳನ್ನು ಮದುವೆಯಾಗುವವನು ನಾನು.

ಅರವಿಂದ– ನೀನಲ್ಲ, ನಾನು.

ವಿಕ್ರಂ– ಬೇಡ ಅರವಿಂದ, ಸುಮ್ಮನೆ ಹಟ ಮಾಡಬೇಡ.

ಅರವಿಂದ– ನೀನೂ ಅಷ್ಟೆ. ಇವಳಾಸೆ ಬಿಟ್ಟು ಇಲ್ಲಿಂದ ತೊಲಗು ಇಲ್ಲಾಂದ್ರೆ...

ವಿಕ್ರಂ– ಇಲ್ಲಾಂದ್ರೆ ? ಏನೋ ಮಾಡ್ತಿಯಾ?.

ಅರವಿಂದ– (ಪಿಸ್ತೂಲು ತೆಗೆಯುತ್ತ) ಏನ್ಮಾಡ್ತೀನಿ?...ನಿನ್ನ ಪ್ರಾಣ ತೆಗಿತಿನಿ. (ಭೋಜರಾಜ ಅರವಿಂದನಿಗೆ ಗುಂಡು ಹಾರಿಸುವನು. ಚೀರಿ ನೆಲಕ್ಕೆ ಕುಸಿಯುತ್ತಾ) ಭೋಜರಾಜ, ನನಗೆ ಮೋಸ ಮಾಡಿದ ನಿನ್ನನ್ನೂ... (ಗುಂಡು ಹಾರಿಸಲು ಪ್ರಯತ್ನಿಸುವಾಗ, ಭೋಜರಾಜ ಮತ್ತೆ ಗುಂಡು ಹಾರಿಸುವನು, ಅರವಿಂದ ಸಾಯುವನು)

ವಿಕ್ರಂ– ಫೆಂಟಾಸ್ಟಿಕ್ ಡ್ಯಾಡಿ ಫೆಂಟಾಸ್ಟಿಕ್. ಇವನ್ನ ಕೊಂದು ಒಳ್ಳೆ ಕೆಲ್ಸ ಮಾಡಿದ್ರಿ, ಇನ್ನಿವಳ ಕೊರಳಿಗೆ ನಾನು ಸುಲಭವಾಗಿ ತಾಳಿ ಕಟ್ಟಬಹುದು.

ವಿಶಾಲ– ಸ್ವಾರಿ ವಿಕ್ರಂ ನಾನು ನಿನ್ನನ್ನು ಮದುವೆಯಾಗಲು ಸಾಧ್ಯವಿಲ್ಲ.

ವಿಕ್ರಂ– ಕಾರಣ?

ವಿಶಾಲ– ತಂದೆ, ಮಗ ಇಬ್ಬರೂ ನನ್ನ ಮೈ ಕದ್ದಿದ್ದೀರಿ ಅಂದಾಗ ಮದುವೆಯಾಗಿ ನಿಮ್ಮಿಬ್ಬರ ಹೆಂಡತಿಯಾಗಿರಲು ಹೇಗೆ ಸಾಧ್ಯ? ಒಂದು ವೇಳೆ ಮಗನ ಹೆಂಡತಿಯೆಂದು. ಮಗಳಂತೆ ಕಾಣುವ ದೊಡ್ಡಗುಣ ಇವರು ಮಾಡಿದರೂ. ಸ್ತ್ರೀ ಸಹಜವಾದ ಸಂಕುಚಿತ ಭಾವನೆ ಇವರನ್ನು ತಂದೆಯೆಂದು ಒಪ್ಪಿಕೊಳ್ಳಲು ನನಗಡ್ಡಿ ಪಡಿಸುತ್ತದೆ, ಕಾರಣ?

ವಿಕ್ರಂ– ಕಾರಣ ?

ವಿಶಾಲ– ನಿಮ್ಮಿಬ್ಬರಲ್ಲಿ ಯಾರಾದರೊಬ್ಬರು...(ನಗುವಳು)

ವಿಕ್ರಂ– ಏನು ನಿನ್ನ ಮಾತಿನ ಅರ್ಥ

ಭೋಜರಾಜ– ಮಗನು ಅವಳಿಗೆ ಕೇಳುವದು ವ್ಯರ್ಥ. ಸಧ್ಯ ನಾನು ಮಾಡ್ತೀನಿ ಇತ್ಯರ್ಥ.

ವಿಕ್ರಂ– ಡ್ಯಾಡಿ ಇವಳೇನ್ಹೇಳ್ತಿದ್ದಾಳೆ ಅಂದ್ರೆ...

ಭೋಜರಾಜ– ನಮ್ಮಿಬ್ಬರಲ್ಲಿ ಯಾರಾದರೊಬ್ಬರು ಸಾಯ್ಬೇಕು, ಅಂತಿದ್ದಾಳೆ ಅಷ್ಟೇ. ಅದರಲ್ಲಿ ಆಶ್ಚರ್ಯ ಪಡುವಂತಾದ್ದೇನಿದೆ. ನನ್ನ ಡೂಪ್ಲಿಕೇಟ್ ಮಗನೆ?

ವಿಕ್ರಂ– ಡ್ಯಾಡಿ ಏನ್ಹೇಳ್ತಾಯಿದೀರಿ?

ಭೋಜರಾಜ– ಇದ್ದ ವಿಷಯಾನೆ ಹೇಳ್ತಿದ್ದೇನೆ. ನೀನು ನನ್ನ ಹೊಟ್ಟೆಯ ಮಗನಲ್ಲ ನನ್ನಿಚ್ಛೆ ಪೂರೈಕೆಗಾಗಿ ತಂದು ಸಾಕಿದ ಡೂಪ್ಲಿಕೇಟ್ ಮಗ.

ವಿಕ್ರಂ– ಅಂದ್ರೆ

ಭೋಜರಾಜ– ಅಂದ್ರೆ ನನ್ನ ಹೆಂಡತಿ ಗಂಡು ಮಗುವಿಗೆ ಜನ್ಮ ಕೊಟ್ಟು ತಾನೂ ಸತ್ತಳು, ಹುಟ್ಟಿದ ಮಗುವನ್ನೂ ಕರೆದೊಯ್ದಳು. ಆಗ ನಾನು ದುಃಖ ಪಡಲಿಲ್ಲ. ಮುಂದಾಲೋಚನೆಗೆ ಬುದ್ಧಿ ಖರ್ಚು ಮಾಡಿದೆ. ಅಪಾರ ಸಂಪತ್ತಿನ ಒಡತಿಯಾಗಿ ನನ್ನ ತಂಗಿ ಮುಂದೊಂದು ದಿನ ಹೆಣ್ಣು ಮಗುವಿಗಾಗಲೀ ಗಂಡು ಮಗುವಿಗಾಗಲೀ ಜನ್ಮವಿತ್ತಾಗ ನನಗೆ ಮಗಳಾಗಲೀ, ಮಗನಾಗಲೀ ಇದ್ದರಲ್ಲವೆ, ಸಂಬಂಧದ ನೆಪದಲ್ಲಿ ಆಸ್ತಿಯನ್ನು ಲಪಟಾಯಿಸಲು ಸಾಧ್ಯ? ಅದಕ್ಕಾಗಿ ಡಾಕ್ಟ್ರಿಗೆ ಹಣದಾಸೆ ತೋರಿಸಿ,ಸತ್ತ ನನ್ನ ಹೆಂಡತಿಯ ಪಕ್ಕದಲ್ಲಿದ್ದ ಸತ್ತ ಶಿಶುವಿನ ಸ್ಥಳದಲ್ಲಿ ಬೇರೊಂದು ಶಿಶುವನ್ನು ತರಿಸಿ ಹಾಕಿದೆ. ಆ ಶಿಶುವೇ ನೀನು

ವಿಕ್ರಂ– ಹಾಗಾದರೆ ನಾನು ನಿಮ್ಮ ಮಗನಲ್ಲವೆ? ನಾನು ಪರದೇಶಿಯೇ? ಡ್ಯಾಡಿ, ಇದುವರೆಗೂ ನನ್ನನ್ನು ಸಾಕಿ ಸಲುಹಿದ್ದಿರಿ, ವಿದ್ಯಾವಂತನನ್ನಾಗಿ ಮಾಡಿದ್ದೀರಿ. ಹೊಟ್ಟೆಯ ಮಗನಲ್ಲದಿದ್ದರೂ ನಿಮ್ಮ ಕೈಕೂಸಾಗಿ ಬೆಳೆದಿದ್ದೇನೆ. ತಂದೆ–ತಾಯಿ ಗೊತ್ತಿಲ್ಲದ ನನಗೆ ನೀವೇ ತಂದೆ–ತಾಯಿ ದಯಮಾಡಿ ಈ ಹೆಣ್ಣಿನ ಹೆಸರಿನಲ್ಲಿರುವ ಆಸ್ತಿಗಾಗಿ ನಮ್ಮಿಬ್ಬರ ಸಂಬಂಧ ಮಾತ್ರ ಕಡಿದು ಹಾಕಬೇಡಿ. ನಿಮ್ಮ ಕಾಲಿಗೆ ಬಿದ್ದು ಬೇಡಿಕೊಳ್ಳೀನಿ.

ಭೋಜರಾಜ– ಹುಚ್ಚಪ್ಪಾ, ಈ ಆಸ್ತಿಗಾಗಿ ನಾ ಪಟ್ಟಿರುವ ಕಷ್ಟ ಅಷ್ಟಿಷ್ಟಲ್ಲ. ಈಗವಳು ನಿನ್ನನ್ನು ಮದುವೆಯಾಗಲೊಪ್ಪಿ, ಆಸ್ತಿಯನ್ನು ನಿನ್ನ ಹೆಸರಿಗೆ ಬರೆಯುವಂತಾಗಿದ್ದರೆ, ಖಂಡಿತ ನಾನೀ ಗುಟ್ಟನ್ನು ಬಿಚ್ಚುತ್ತಿರಲಿಲ್ಲ. ನಿನ್ನನ್ನು ದೂರ ಮಾಡುತ್ತಿರಲಿಲ್ಲ. ಆದರೀಗ ಸಂದರ್ಭವೇ ಹಾಗೆ ಬಂದು ಬಿಟ್ಟಿದೆ. ನಮ್ಮಿಬ್ಬರಲ್ಲೊಬ್ಬರು ಇಲ್ಲವಾದಾಗ ಮಾತ್ರ. ಇವಳು ತಾಳಿ ಕಟ್ಟಿಸಿಕೊಳ್ಳುತ್ತಾಳೆ. ಈ ಆಸ್ತಿಗೆ ಅಧಿಕಾರಿ ಮಾಡುತ್ತಾಳೆ. ಕಾರಣ, ಅನಿವಾರ್ಯವಾಗಿ ನಿನೆದೆಗೆ ಗುಂಡಿಡುವ ಪ್ರಸಂಗ ಬಂದು ಬಿಟ್ಟಿದೆ.

ವಿಕ್ರಂ– ಡ್ಯಾಡಿ......

ಭೋಜರಾಜ– ಆಯ್ ಆ್ಯಮ್ ಸೊ ಸ್ವಾರಿ ಮೈ ಡೂಪ್ಲಿಕೇಟ್ ಸನ್. (ಗುರಿ)

ವಿಕ್ರಂ– ಬೇಡ ಡ್ಯಾಡಿ. ನನ್ನನ್ನು ಸಾಯಿಸ್ಬೇಡಿ.

ಭೋಜರಾಜ– ಸಾಯಿಸದೆ ಬೇರೆ ದಾರಿನೆ ಇಲ್ಲ. ದೇವರು ನಿನಗೆ ಒಳ್ಳೇದು ಮಾಡ್ಲಿ (ಗುಂಡು ಹಾರಿಸುವನು)

ವಿಕ್ರಂ– (ಚೀರಿ) ಎಂತಾ ಕೆಲ್ಸ ಮಾಡಿಬಿಟ್ರಿ ಡ್ಯಾಡಿ, ಎಂತಾ ಕೆಲ್ಸ... ಮಾಡಿಬಿಟ್ರಿ... (ಬಿದ್ದು ಸಾಯುವನು)

ವಿಶಾಲ– ಶಹಭಾಷ್ ಭೋಜರಾಜ...ಶಹಭಾಷ್, ಮೆಚ್ಚಿದೆ ನಿನ್ನ ದಿಟ್ಟತನವನ್ನು,

ಭೋಜರಾಜ– ಮೆಚ್ಚಿಕೆಯು ಹಾಗಿರಲಿ, ನಿನ್ನಿಚ್ಛೆಯ ಗಂಡನಾಗಲು ನಾನೀಗ ಸಿದ್ಧನಿದ್ದೇನೆ. ಹೇಳು ಯಾವಾಗ ನಮ್ಮ ಮದುವೆ?

ವಿಶಾಲ– ಎಲ್ಲಿ, ಯಾವಾಗ ಯಾಕೆ? ಇಲ್ಲೆ, ಈಗಲೇ ಈ ಸತ್ಪುರುಷ ಧರ್ಮಯ್ಯನವರ ಪ್ರತಿಮೆಯೆದುರೆ ಆಗುವುದು...

ಭೋಜರಾಜ– (ನಗು) ನಮ್ಮಿಬ್ಬರ ಮದುವೆ.

ವಿಶಾಲ– ಅಲ್ಲ, ನಿನ್ನ ಮಸಣ ಯಾತ್ರೆ (ಗುಂಡು ಹಾರಿಸುವಳು)

ಭೋಜರಾಜ– (ನರಳುತ್ತ) ಮೋಡಿಯ ಮಾತಾಡಿ. ನನ್ನ ಜೀವಕ್ಕೆ ಕುತ್ತು ತಂದೆಯಾ ಮೋಸಗಾತಿ.

ವಿಶಾಲ– ನಾನು ಮೋಸಗಾತಿಯಲ್ಲ, ಛಲಗಾತಿ. ನಾ ಮಾಡಿದ ಪ್ರತಿಜ್ಞೆ ನೆರವೇರಿತು. ಧರ್ಮಯ್ಯನವರ ಆತ್ಮಕ್ಕೆ ಶಾಂತಿ ಸಿಕ್ಕಿತು, ನನ್ನ ಛಲ ತೀರಿತು. ಸ್ತ್ರೀಕುಲಕ್ಕೆ ಬಲ ಬಂದಿತು (ನಗುವಾಗ, ಭೋಜರಾಜ ಗುಂಡು ಹಾರಿಸಿ, ಬಿದ್ದು ಸಾಯುವನು) ಅಮ್ಮಾ...

(ವನಜ, ವಕೀಲ, ಪೋಲಿಸರು, ರಂಗ, ಲಿಲ್ಲಿ ಬರುವರು)

ವನಜ– ವಿಶಾಲಕ್ಕ, ಇದೇನು ಅನ್ಯಾಯ ಮಾಡಿಕೊಂಡು ಬಿಟ್ಟೆ ?

ವಕೀಲ– ವಿಶಾಲಮ್ಮ, ದುಡಿಕಿ ಅನಾಹುತ ಮಾಡಿಕೊಂಡುಬಿಟ್ಟಿರುವಿಯಲ್ಲಮ್ಮ

ವಿಶಾಲ– ನಾನೆಲ್ಲ ಸರಿ ಮಾಡಿದ್ದೇನೆ ವಕೀಲ್ರೆ...ಎಲ್ಲರಿಗೂ ನನ್ನ ಕೊನೆಯ ನಮಸ್ಕಾರಗಳು...(ಸಾಯುವಳು)

–ಹಿನ್ನೆಲೆ–

**ಶುಭಂ**

# ನಮ್ಮ ಪ್ರಕಾಶನದ ಹೊಸ ನಾಟಕಗಳು

ಪ್ರೇಮ ಪಂಜರ" ಖ್ಯಾತ ನಾಟಕಕಾರ ವೀರಣ್ಣ

ಹೊಸಮನಿ ವಿರಚಿತ

## ಅಮರ ವೀರ

"ನಾಕ್ಷ್ಮವಳ್ಳಿ.. ನನ್ನ ಹಡೆದವರು" ಖ್ಯಾತಿಯ ಕೆ. ಎಸ್. ಮಹದೇವಯ್ಯ ವಿರಚಿತ ಹೊಸ ನಾಟಕ

## ಹೂವಾಗಿ ನಕ್ಕಿತು

## ಹಾವಾಗಿ ಕಚ್ಚಿತು

ಅರ್ಥಾತ್

## ಇದು ಹಿಂಗ್ಯಾಕಾತು ?

## ಯಾಕ ಹಿಂಗಾತು

ನಮ್ಮಲ್ಲಿ ದೊರೆಯುವ ಇತರ ಪುಸ್ತಕಗಳು

1) ಸತ್ಯ ಎಲ್ಲಿದೆ ಕೈಯೆತ್ತಿ ಹೇಳಿ
2) ರೈತ ನಗಲಿಲ್ಲ ಸರಕಾರ ಉಳಿಯಲಿಲ್ಲ
3) ಸೇಡು ಬಾಳಿಗೊಂದು ಕೇಡು
4) ಹುಚ್ಚರಿರುವರು ತಂಗಿ ಎಚ್ಚರಿಕೆ

---

**ಬೆಲೆ: 15-00**

ವಿಶಾಲ– (ದುಃಖಾವೇಶದಿಂದ) ಹಾಗಿದ್ದು ನನ್ನನ್ನೇಕೆ ಬಯಸಿದಿರಿ, ನನ್ನ ಬಾಳನ್ನೇಕೆ ಹಾಳ್ಮಾಡಿದ್ರಿ ?

ವಿಕ್ರಂ– ನಾ ಮಾಡಿದ ಛಾಲೇಂಜ್‌ಗಾಗಿ.

ವಿಶಾಲ– ಏನು...? ಛಾಲೇಂಜ್ ಮಾಡಿದ್ರ್ಯಾ ?

ವಿಕ್ರಂ– ಹೌದು. ನಮ್ಮ ಕಾಲೇಜ್‌ನಲ್ಲಿ ಸೌಂದರ್ಯರಾಣಿಯೆಂದು ಕರೆಸಿಕೊಳ್ಳುತ್ತಿದ್ದ ಹೆಣ್ಣು ನೀನು. ನಿನ್ನನ್ನು ಬಯಸಿ ಅಪಮಾನ ಹೊಂದಿದ ನನ್ನ ಗೆಳೆಯರು ನನಗೆ ಛಲ ಹುಟ್ಟಿಸಿ ನಿನ್ಮೇಲೆ ಛೂ ಬಿಟ್ರು. "ಆ ಹೆಣ್ಣಿಗೆ ಕಣ್ಣೊಡೆದು ಮಣ್ಮುಕ್ಕಿಸಿ ಬಂದು ನಮ್ಮೆದುರು ನಿಲ್ಲು" ಎಂದು ನನ್ನ ಗಂಡಸುತನಕ್ಕೆ ಸವಾಲ್ಹಾಕಿದರು. ಆ ಕಾರಣಕ್ಕಾಗಿ ನಿನ್ನನ್ನು ಪ್ರೀತಿಸಿ, ಮೋಹಿಸಿ ದೇಹ ಸುಖವನ್ನೂ ಸವಿದೆ. (ತಿರಸ್ಕಾರದಿಂದ) ಇದೆಲ್ಲಾ ನನ್ನ ಮೋಜಿನಾಟಕ್ಕೇ ಹೊರತು, ಮದುವೆ ಮಾಡಿಕೊಳ್ಳುವ ಮೂರ್ಖತನಕ್ಕಲ್ಲ ಮರಿ.

ವಿಶಾಲ– ನಿನ್ನ ಜೂಜು, ಮೋಜಿನಾಟದಲ್ಲಿ ನಾನು ಕಳೆದುಕೊಂಡಿರುವ ಶೀಲಕ್ಕೆ ನೀವೇ ಹೊಣೆಗಾರ.

ವಿಕ್ರಂ– ಅದನ್ನ ಕನಸಲ್ಲೂ ಭಾವಿಸಬೇಡ. ನಾನೊಬ್ಬ ಪ್ರಯಾಣಿಕ. ಕಂಡ ಬಸ್ಸಿಗೆ ಕೈ ತೋರಿಸ್ತೀನಿ, ನಿಂತ ಬಸ್ಸನ್ನು ಹತ್ತಿ ಮುಂದೆ ಸಾಗ್ತೀನಿ, ನಾನ್ಹೋಗೋ ದಾರಿ ಬಿಟ್ಟು ಬೇರೆ ದಾರಿ ಹಿಡಿದಾಗ ಇಳಿತೀನಿ, ಮತ್ತೊಂದು ಬಸ್ಸಿಗಾಗಿ ಕಾಯ್ತೀನಿ. ಇದು ನನ್ನ ಪ್ರಿನ್ಸಿಪಲ್ ಏನಂತಿಯಾ ?

ವಿಶಾಲ– ಅಯ್ಯೋ ಪಾಪಿ. ನನ್ನನ್ನು ಪ್ರಯಾಣಿಕರನ್ನು ಸಾಗಿಸುವ ಬಸ್ಸಿಗ್ಹೋಲಿಸಿ ಮಾತಾಡ್ತಿಯಾ ?

ವಿಕ್ರಂ– ಆರ... ಆ..., ಬಸ್ಸು ಅಂದ್ರೆ ನೀನು ಎಕ್ಸ್‌ಪ್ರೆಸ್ ಅಲ್ಲ. ಆರ್ಡಿನರಿ ಬಸ್ಸು. ಈ ಬಸ್ಸು ಯಾರೆಲ್ಲೇ ಕೈ ತೋರ್ಸಿದ್ರೂ ನಿಂತು ಮುಂದ್ಹೋಗುತ್ತದೆ. ಆದರೆ ಎಕ್ಸ್‌ಪ್ರೆಸ್ ಹಾಗಲ್ಲ. ತಾನೆಲ್ಲಿಂದ ಹೊರಟು, ಎಲ್ಲಿ ನಿಲ್ಲಬೇಕೆನ್ನುವುದನ್ನು ನಿಗದಿ ಪಡಿಸಿಕೊಂಡೇ ಹೊರಡುತ್ತದೆ. ಆ ರೀತಿ

ನೀನಾಗಲಿಲ್ಲ. ಕೈ ಮಾಡಿದಲ್ಲಿ ನಿಂತು, ಹತ್ತಿಸಿಕೊಂಡು ಹೋಗುವ ಆರ್ಡಿನರಿ ಬಸ್ಸಾದೆ.

ವಿಶಾಲ– ಬಾಯಿ ಬಿಗಿ ಹಿಡಿದು ಮಾತಾಡು ನೀಚ. ಪ್ರೀತಿಸುವವರೆಲ್ಲ ಹೆಣ್ಣಿನ ಪಾಲಿಗೆ ಪ್ರಯಾಣಿಕರಾಗಿದ್ದರೆ, ಹಿಂದೂ ಧರ್ಮದಲ್ಲಿ "ಗರತಿ" ಅನ್ನುವ ಶಬ್ದವೇ ಇರುತ್ತಿರಲಿಲ್ಲ. ಮಡದಿಯಾಗಬೇಕಾದವಳು ಮೈಮರೆತು ಅಪ್ಪಿಕೊಂಡರೆ, ನಿನ್ನ ದೃಷ್ಟಿಯಲ್ಲಿ ಆರ್ಡಿನರಿ ಬಸ್ಸಾಗುತ್ತಾಳಲ್ಲವೆ ? ಹಾಗಾದರೆ, ನಿನಗೆ ಜನ್ಮ ಕೊಟ್ಟವಳೂ ಆರ್ಡಿನರಿ ಬಸ್ಸೇ ಇರಬೇಕಲ್ಲ ?

ವಿಕ್ರಂ– ಏನಂದೇ...?

ವಿಶಾಲ– ಹಾಂ... ಶಾಂತವಾಗಿ ನೀನೇ ವಿಚಾರ ಮಾಡಿನೋಡು. ನಿಮ್ಮಾಯಿ ಒಂದ್ವೇಳೆ ಎಕ್ಸ್‌ಪ್ರೆಸ್ ಬಸ್ಸಾಗಿದ್ರೆ, ನಿನ್ನ ತಂದೆಗೆ ಹತ್ತಲು ಸಾಧ್ಯವಾಗುತ್ತಿದ್ದಿಲ್ಲ: ನೀನು ಈ ಭೂಮಿಯ ಬೆಳಕನ್ನೂ ಕಾಣುತ್ತಿದ್ದಿಲ್ಲ. ಅಂದಾಗ, ನಿಮ್ಮಾಯಿ ಕಂಡವರು ಕಂಡಲ್ಲಿ ಕೈ ಮಾಡಿ ಹತ್ತುವ ಆರ್ಡಿನರಿ ಬಸ್ಸೆನ್ನುವುದಕ್ಕೆ ಈ ಒಂದು ನಿದರ್ಶನ ಸಾಕಿಲ್ಲವೆ?

ವಿಕ್ರಂ– ಮುಚ್ಚು ಬಾಯಿ ಹೆಚ್ಚು ಮಾತಾಡಬೇಡ. ಉಚ್ಚರಿಸೋ ನಿನ್ನ ಪ್ರತಿಯೊಂದು ಶಬ್ದಕ್ಕೂ ನಂದೊಂದೇ ಉತ್ತರ ಈ ಜನ್ಮದಲ್ಲಿ ನೀ ನನ್ನ ಹೆಂಡತಿಯಾಗಲಾರೆಯೆಂದು.

ವಿಶಾಲ- ಹಾಗಾದ್ರೆ ನನ್ನೊಟ್ಟೆಯಲ್ಲಿ ಬೆಳೆಯುತ್ತಿರುವ ನಿನ್ನ ವಂಶದ ಕುಡಿಗೆ ಏನೆಂದು ಉತ್ತರಿಸುವಿ?

ವಿಕ್ರಂ- ಅದು ನನ್ನ ವಂಶದ ಕುಡಿಯೆಂದು ಸಾಧಿಸಲು ನಿನ್ನಲ್ಲಿ ಯಾವ ಸಾಕ್ಷಿಯಿದೆ, ಯಾವ ಆಧಾರವಿದೆ? ಅಯ್ಯೋ ಮಂಕುದಿಣ್ಣೆ,... ಇಂದಿನ ಸಮಾಜದಲ್ಲಿ ದುಡ್ಡಿದ್ದವನೇ ದೊಡ್ಡವನು. ಒಂದು ಹೆಣ್ಣಿನ ಅತ್ಯಾಚಾರ ಮಾಡಲಿ, ಒಬ್ಬ ವ್ಯಕ್ತಿಯ ಕೊಲೆ ಮಾಡಲಿ ದುಡ್ಡಿನ ದೊಡ್ಡತನ ಸಿಡ್ನೊ ನಿನು ಜಯಿಸಿ ಬಿಡುತ್ತದೆ. ಇಂಥಾ ಆಧುನಿಕ ವೈಜ್ಞಾನಿಕ ಯುಗದಲ್ಲಿ ಹುಟ್ಟಿದ

ನಿನಗೆ ಈ ಸಣ್ಣ ಗರ್ಭ ಕರಗಿಸಿಕೊಳ್ಳಲು ಸಾಧ್ಯವಿಲ್ಲವೇ? ವಿಚಾರ ಮಾಡ ಬೇಡ (ಹಣ ತೆಗೆದು) ಈ ಹಣ ಅಷ್ಟೋ ಜಾಣ ನಿನ್ನ ಕೈಯಲ್ಲಿದ್ರೆ, ನಿನ್ನ ಸಮಸ್ಯೆ ನಿನಗರಿವಿಲ್ಲದೆ ಖುಲಾಸೆಯಾಗಿಬಿಡುತ್ತದೆ. (ಒಗೆದು) ತಗೋ ಆ ಹಣವನ್ನು. ಇದು ನಿನ್ನಿಂದ ನಾ ಪಡೆದ ಸುಖ ಹಾಗೂ ಆ ಸುಖದ ಶಾಖ ದಿಂದ ಮತ್ತೊಂದು ಮುಖ ರೂಪಗೊಳ್ಳುತ್ತಿರುವುದನ್ನು ಕತ್ತರಿಸಿ ತೆಗೆಯು ದಕ್ಕಾಗಿ ಹಳೆಯದನ್ನು ಮರೆತು ಹೊಸ ಬದುಕಿನ ಕಡೆ ವಿಚಾರ ಹರಿಸು, ಬರ್ತೀನಿ ಗಾಡ್ ಬ್ಲೆಸ್ ಯು (ಹೋಗುವನು)

ವಿಶಾಲ- (ಚೀರಿ) ವಿಕ್ರಂ......???!

—ಹಿನ್ನೆಲೆ—

## ಮೂರನೆಯ ದೃಶ್ಯ

### ರಸ್ತೆ

(ಡಾಕ್ಟರ್ ಅರವಿಂದ ಬಂದು)

ಅರವಿಂದ— ದೇವರ ಸೃಷ್ಟಿ ಎಂತ ವಿಚಿತ್ರ! ಮನುಷ್ಯನಿಗೆ ಮತ್ತೆ ಮತ್ತೆ ತನ್ನ ಮಾಯೆಯ ಛಾಯೆಯಿಂದ ಆಸೆಗಳ ಮಿತಿಯನ್ನು ತಪ್ಪಿಸಿ ಅತಿಯಾಗು ವಂತೆ ಮಾಡುತ್ತಲೇ ಇರುತ್ತಾನೆ. ಅದಕ್ಕೆ ಉದಾಹರಣೆ ನಾನೇ. ವೃತ್ತಿಯಲ್ಲಿ ಡಾಕ್ಟರಾದ ನನಗೆ ಕುಳಿತುಂಡರೂ ಕರಗದಷ್ಟು ಧನಕನಕವಿದ್ದರೂ. ಆ ಮಿಲ್ಲಿನ ಒಡತಿ ವನಜಾಳ ಆಸ್ತಿಗೆ ಅಧಿಕಾರಿಯಾಗಬೇಕೆಂದು ನನ್ನ ಮನ ಬಯಸಿದೆ. ಈಗಾಗಲೇ ನನ್ನ ಪ್ರೇಮ ಪಂಜರದಲ್ಲಿ ಬಂಧಿಯಾಗಿರುವ ವನಜಾ. ವಾರಸು ದಾರರಿಲ್ಲದ ಆಸ್ತಿಯ ಒಡತಿ. ತಾಳಿ ಕಟ್ಟಿದವನ ಕೊರಳಿಗೆ ಹೂಮಾಲೆಯಾಗಿ ಸೇರೊ ಅವಳಾಸ್ತಿಯನ್ನು ಆಸೆ ಪಡದವರಾರು? ದಿನಕ್ಕೊಂದು ಹೆಣ್ಣಿನ ಜೊತೆಗೆ ಸರಸವಾಡುವ ನನಗೆ ಈಗ ಹೆಣ್ಣಿನ ಜೊತೆಗೆ ಹೊನ್ನಿನ ಕವಚವೂ ದಕ್ಕುವ ಸುಯೋಗ ಒದಗಿ ಬಂದಿದೆ. ಡೆಲ್ಲಿಗ್ಹೋಗಿರೋ ವನಜಾ ಊರಿಗೆ ಮರಳಿ ಬಂದ ತಕ್ಷಣ ಆದಷ್ಟು ಬೇಗ ಮದುವೆಯಾಗಲು ಒತ್ತಾಯಿಸಿ, ನನ್ನ

ಛಲ ಸಾಧಿಸಿಕೊಳ್ಳುತ್ತೇನೆ. ಆದರೆ ಸಧ್ಯದ ನನ್ನ ಕಾಮದಾಹ ತಣಿಸಲು ಯಾವ ಹೆಣ್ಣನ್ನು ಹಾರಿಸಿಕೊಂಡು ಬಂದಿದ್ದಾನೋ ಆ ಕಂಪೌಂಡು ಜಗ್ಗು, ನೋಡ್ಬೇಕು. (ಭೋಜರಾಜ, ಮೂರ್ತಿ ಎದುರಾಗುವರು)

ಭೋಜರಾಜ– ಏನ್ ಡಾಕ್ಟ್ರೆ, ಯಾವ್ದೊ ಗಹನವಾದ ವಿಚಾರ ನಡಿಸಿ ರಲ್ಲ ರಸ್ತೆಮ್ಯಾಲೆ ?

ಅರವಿಂದ– ಅಂತಾ ಗಹನವಾದ ವಿಚಾರವೇನಿಲ್ಲ ಬಿಡ್ರಿ. ಈಗ ತಾನೆ ಒಂದು ಅಪ್ರೇಷನ್ ಮುಗಿಸಿ ಬಂದೆ. ಆದ್ರೆ ಪೇಷಂಟ್ ಬಹಳ ವೀಕು. ಹೀಗಾಗಿ...

ಮೂರ್ತಿ– ಆ ಪೇಷಂಟ್ ಬದುಕುತ್ತೊ, ಇಲ್ಲೋ ಅಂತ ವಿಚಾರಕ್ಕ ಬಿದ್ದಿರೇನು ?

ಅರವಿಂದ– ಏನಂತ ಮಾತಾಡ್ತಿಯೋ ಮೂರ್ತಿ. ನನ್ನ ಕೈಯಿಂದ ಆಪ್ರೇಷನ್ ಆದವರು ಇದುವರೆಗು ಯಾರೂ ಸತ್ತಿಲ್ಲ.

ಮೂರ್ತಿ– ಸತ್ತಿಲ್ಲ. ಇದ್ದು ಸತ್ತವರ್ಗತಿ ಬದುಕ್ಯಾರ.

ಭೋಜರಾಜ– ಏನ್ಲೆ ಹಂಗ್ಯಾಕ್ತಾಡಿದ್ರೆ ?

ಮೂರ್ತಿ– ಇದ್ದದ್ದಕ್ಕೇಕತ್ತ ಮಾತಾಡೇನ್ರಿ. ಖರೆ ಹೇಳ್ಬೆಕಂದ್ರ ಇತ್ತಿತ್ಲಾ ಗಂತು ದವಾಖಾನಿ, ಡಾಕ್ಟ್ರು ಅಂದ್ರ ಸಾಕು ನನಗ ನಡುಗ ಶುರುವಾಗುತ್ತ.

ಅರವಿಂದ– ಯಾಕಪಾ, ದವಾಖಾನಿ ಅಂದ್ರ ನಿನ್ನ ಪಾಲಿಗೆ...?

ಮೂರ್ತಿ– ನರಕ ಲೋಕ.

ಭೋಜರಾಜ– ಡಾಕ್ಟ್ರಂದ್ರ ?

ಮೂರ್ತಿ– ಯಮ... ಯಮ ಇದ್ದಂಗ.

ಅರವಿಂದ– ಅಂದ್ರೇನಪಾ, ಡಾಕ್ಟ್ರೆಲ್ಲಾ ಸೇರಿ ನಿನ್ನ ಜೀವ ತಗಿಯಾಕ ನಿಂತಾರಂತ ತಿಳದಿಯೇನು ?

ಮೂರ್ತಿ– ಎಲ್ಲಾ ಡಾಕ್ಟ್ರಗೂ ಹಂಗಂದ್ರ, ನನ್ನ್ಹಿಡಿದು ಸಾದ್ಯಾರು. ಕೆಲ-ಕೆಲ ಡಾಕ್ಟ್ರಿಂದ ಇತ್ತಿತ್ಲಾಗಾಗೇವಲ್ರಿ ಆಪ್ರೇಷನ್ ಮರ್ಡರ್ ಪ್ರಕರಣ ಗಳು. ಇವು ನನಗ ಭಯೋತ್ಪಾದನೆ ಮಾಡಿಬಿಟ್ಟಾವ. ನಿಮಗೊತ್ತಿಲ್ಲ್ಯಾ ?

ಮನ್ನೆ ಮನ್ನೆರ ಪೇಪರ್ನ್ಯಾಗ ಒಂದು ಪ್ರಕರಣ ಫೋಟೋದ ಸಮೇತ ಬಂದಿತ್ತಲ್ರಿ.

ಭೋಜರಾಜ– ಯಾವ ಪ್ರಕರ್ಣಾಲೇ ಅದು ?

ಮೂರ್ತಿ– ಒಂದೆಂಟ್ಹತ್ತು ವರ್ಷದ ಸಣ್ಣ ಹುಡುಗಿರ್ಬೇಕ್ರಿ ಪಾಪ. ಎಡಗಡೆ ಚಪ್ಪಿಮ್ಯಾಲ ಕುರು ಆಗೇತಿ. ನಾನಾ ನಮೂನಿ ಔಷಧಿ ಹಾಕಿದ್ರೂ ವಾಸ್ಯಾಗಿಲ್ಲ. ಹೆಪ್ಪಗಟ್ಟಿ ಗಡ್ಡಿ ಹಂಗ್ಹ ಉಳುದು ಬಿಟ್ಟೈತಿ. ಕಡಿಕ ಆ ಹುಡುಗನಪ್ಪ ದವಾಖಾನಿಗೆ ಕರ್ಕೊಂಡ್ಬಂದು ಡಾಕ್ಟ್ರಿಗೆ ತೋರ್ಸಿದ. ಆ ಡಾಕ್ಟ್ರ ನೋಡಿದವನ ಇದನ್ನ ಆಪ್ರೇಷನ್ ಮಾಡೇ ಗಡ್ಡಿ ತಗಿಬೇಕಂತ ಹೇಳಿಬಿಟ್ಟಾನ. ಪಾಪ ಅವನರ ಬಡವ. ಆದ್ರೂ ಮಗನ ಕುರು ವಾಸ್ಯಾದ್ರ ಸಾಕಂತ ಕೂಲಿನಾಲಿ ಮಾಡಿ ಕೂಡ್ಸಿಟ್ಟ ರೊಕ್ಕ ತಂದವನ ಆ ಡಾಕ್ಟ್ರಿಣಕ್ಕ ಬಡ್ದು ಮಗನ್ನವರ ಕೈಗೊಪ್ಪಿಸಿದ, ಆ ಡಾಕ್ಟಪ್ಪಾ ಆಪ್ರೇಷನ್ನೂ ಮಾಡಿದ.

ಭೋಜರಾಜ– ಕುರ ವಾಸ್ಯಾಗಿರ್ಬೇಕು ?

ಮೂರ್ತಿ– ವಾಸ್ಯಾಗ್ಲಿಲ್ಲ, ಮತ್ತಷ್ಟು ಘಾಸಾತು.

ಭೋಜರಾಜ– ಘಾಸ್ಯಾತು ?! ಯಾಕಲೇ ?

ಮೂರ್ತಿ– ಆ ಹುಡುಗ್ಗ ಕುರ ಆಗಿದ್ದು ಯಾವ ಭಾಗದಾಗ ?

ಭೋಜರಾಜ– ಎಡಗಡೆ ಚಪ್ಪಿಮ್ಯಾಗ.

ಮೂರ್ತಿ– ಆದ್ರೀ, ಡಾಕ್ಟ್ರ ಆಪ್ರೇಷನ್ ಮಾಡಿದ್ದು ಬಲಗಡೆ ಚಪ್ಪಿಮ್ಯಾಗ.

ಅರವಿಂದ– ಅವಿವೇಕಿ. ಕುರ ಆದ ಜಗಾ ಬಿಟ್ಟು ಬೇರೆ ಜಗದಾಗ ಹೆಂಗ ಆಪ್ರೇಷನ್ ಮಾಡ್ತಾರೋ ?

ಮೂರ್ತಿ– ಹೆಂಗ ? ಕಂಠಪ್ಪೂರ್ತಿ ಕುಡುದ್ಬಂದು ಆಪ್ರೇಷನ್ನಿಗೆ ನಿಂತ. ಎಡಕ್ಕಿದ್ದ ಕುರ ಬಲಕ್ಕ್ಹಂಗಾತು, ಪುಣ್ಯಾತ್ಮ ಛಲೋ ಚರ್ಮಾನ ಎಳ್ದು ಕೊಯ್ದು ಬಿಟ್ಟಾನ.

ಅರವಿಂದ– ಅವನ್ಯಾರೋ ಒಬ್ಬ ಯೋಗ್ಯ ಹಂಗ್ಮಾಡಿದ ಅಂದ್ರ, ಎಲ್ರೂ ಹಂಗ್ಹ ಮಾಡ್ತಾರೇನು ?

ಮೂರ್ತಿ– ಎಲ್ಲಾರ ಸುದ್ದಿ ನಾ ಎಲ್ಲಿ ಹೇಳೇನ್ರಿ ? ಇದ್ರಾಗೆಲ್ಲ ಇಂತಾ ಕುಡುಕ ಡಾಕ್ಟ್ರು, ಈ ಮಕ್ಳ ಹಕೀಕ್ಹತ್ತೇಳಿದೆ. ಒಂದ್ಮಾತ್ಹೇಳ್ಬೇಕಂದ್ರ, ರೋಗ ಬಡುಕೊಂಡವರು ದವಾಖಾನೆಗೆ ಹೋದ್ರ. ಮೊದಲು ಡಾಕ್ಟರ್ನ ಚಕ್ ಮಾಡಿ ಮನುಷ್ಯ ಆರಾಮದಾಸಿಲ್ಲೋ ಅನ್ನೋದು ಖಾತ್ರಿ ಮಾಡ್ಕೊಂಡು. ಆಮ್ಯಾಲ ತಾವು ಚಕ್ ಮಾಡಿಸ್ಕೋಬೇಕು. ಇದು ನನ್ನ ಸಣ್ಣ ಸಲಹೆ.

ಅರವಿಂದ– ಅಂತೂ ನಮ್ಮನ್ನ ಯಮನ ಸ್ನೇಹಿತನ್ನ ಮಾಡ್ಬಿಟ್ಟಿಲ್ಲಪ್ಪ

ಮೂರ್ತಿ– ನಾನ್ಯಾಕ್ರಿ ಒಬ್ಬ ಸಂಸ್ಕೃತ ಕವಿ. "ನಮೋ ಎಂಬೆ ಎಲೇ ವೈದ್ಯರಾಜನೆ, ಯಮರಾಜನ ಹಿರಿ ಸೋದರನೇ, ಯಮನು ಹೀರಿದರೆ ಪ್ರಾಣ ಮಾತ್ರವನು. ನೀ ಸೆಳೆಯುವೆ ಕಾಂಚಾಣವನೂ ಅಂತ್ಹೇಳ್ಯಾನ.

ಭೋಜರಾಜ– ಆ ಕವಿ ಹೇಳಿದ, ಈ ಕಪಿ ಒದರಿದ. ಸಾಕು ಸುಮ್ಮ ನಿರಲೆ.

ಅರವಿಂದ– ಪರವಾಗಿಲ್ಲ ಬಿಡಿ ಸಾರ್ ನಮ್ಮ ನಡೆ ಹೇಗಿರುತ್ತೋ, ಹೆಸರು ಹಾಗಿರುತ್ತೆ. ಅದಕ್ಕುದಾಹರಣೆ ನೀವೆ. ತಾಲ್ಲೂಕು, ಜಿಲ್ಲಾ ಅಷ್ಟೆ ಯಾಕ? ರಾಜ್ಯಮಟ್ಟದಲ್ಲಿ ಸೈತ ನಿಮ್ಮ ವರ್ಚಸ್ಸು ಪ್ರಭಾವ ಬೀರಿದೆ.

ಭೋಜರಾಜ– ಇದೆಲ್ಲಾ ಜನಾನುರಾಗ ಡಾಕ್ಟ್ರೆ. ನಾ ಹುಟ್ಟಿರೋದೆ ಸಮಾಜ ಕಲ್ಯಾಣಕ್ಕಾಗಿ, ಸ್ತ್ರೀ ಕುಲದ ಉದ್ಧಾರಕ್ಕಾಗಿ.

ಮೂರ್ತಿ– ಕಣ್ಣಿಗ್ಬಿದ್ದ ಯಾವ ಹೆಣ್ಣೂ ಸರಳ ಮನಿ ಸೇರಿಲ್ಲ.

ಅರವಿಂದ– ತಾವು ದೊಡ್ಡವರು ತಮ್ಮನುಕಂಪ ಸದಾ ಈ ಬಡವನ್ಮ್ಯಾ ಲಿದ್ರ ಸಾಕು, ಬರ್ತೀನ್ರಿ. (ಹೋಗುವನು)

ಮೂರ್ತಿ– ಇವನ್ಮ್ಯಾಲಿ ಸರಿಯಿದ್ದಂಗ ಕಾಣುದಿಲ್ಲ.

ಭೋಜರಾಜ– ಯಾಕಂತಿ?

ಮೂರ್ತಿ– ಹೋಗಿ ಹೋಗಿ ನಿಮ್ಮನುಕಂಪ ಬೇಡಿದ್ನಲ್ಲಾ ಅದಕ್ಕೆ. ಯಾಕಂದ್ರ, ನಿಮ್ಮನುಕಂಪ ಭೂಕಂಪಿದ್ದಂಗ. ಇದೀ ನುಗ್ಗಾ ಗೊತ್ತೇ ಇಲ್ಲ.

ಭೋಜರಾಜ– ನನ್ನನ್ನ ಪೂಜಿಸಿದವರ ಪಾಲಿಗೆ ನನ್ನನುಕಂಪ, ತಂಪು ಕೊಡೋ ಮರ ಇದ್ದಂಗಲೆ. ಆದ್ರ, ನನಗೆದುರಾಗಿ ಘರ್ಜಿಸಿದವರ ಪಾಲಿಗೆ

ಅದ್ದು ಅನುಕಂಪ ಭೂಕಂಪವಾಗಿ ಬಿಡುತ್ತದೆ. ಸಧ್ಯ. ಆ ಡ್ರೈವರ್ ರಂಗನ್ನ ನನ್ನ ಭೂಕಂಪಕ್ಕೆ ಬಲಿಪಶು ಮಾಡಬೇಕು ಅಂತೀನಿ...

ಮೂರ್ತಿ– ದಮ್ಮಿಲ್ಲಂತ ಸುಮ್ನದೀರಿ.

ಭೋಜರಾಜ– ದಮ್ಮ್ಯಾಕಿಲ್ಲ, ಅವರಪ್ಪನಷ್ಟೈತಿ.

ಮೂರ್ತಿ- ಸಾಧ್ಯನೇ ಇಲ್ರಿ ಅವರಪ್ಪ ನಿಮಗಿಂತಾನು ಬಾಳಿತ್ತಂತ್ರಿ ದಮ್ಮು. ಕೊನಿಗೆ ಅದ ದಮ್ಮಿನ್ಯಾಗ ಕೆಮ್ಮಿ ಕೆಮ್ಮಿ ಉಸುರು ಸಿಕ್ಕು ಸತ್ನಂತ್ರಿ

ಭೋಜರಾಜ- ಮೂರ್ತಿ, ಸಧ್ಯ ನೀನೀಗ ಯಾವ ದಮ್ಮಿನ ವಿಷಯ ಹೇಳಿದೆಪ?

ಮೂರ್ತಿ- ಅದ ಗೂರ್ಕಿತ್ತಿದ ದಮ್ರಿ (ಕೆಮ್ಮಿ ತೋರಿಸುವನು)

ಭೋಜರಾಜ– ನನ,ಗನೇ. ನಾ ಹೇಳಿದ್ದು ಆ ದಮ್ಮಲ್ಲ, ತಾಕತ್ತಿನ ದಮು

ಮೂರ್ತಿ- ಯಾಕ ಮಾತಾಡ್ತೀರ್ರಿ? ಆ ರಂಗ್ಯಾನ ಕತಿ ಮುಗುಸ್ತೀನಿ ಮುಗುಸ್ತೀನಂತ ಅಂತೀರೆ ಹೊರ್ತು, ಅರಿವದೊಂದು ಕೂದ್ಲ ಅಲ್ಲಾಡ್ಯಾಕ ಸಾಧ್ಯಾಗಿಲ್ಲ ನಿಮಗ. ನಿಮ್ಮ ಜಾಗದಾಗೇನರ ನಾನಿದ್ದಿದ್ರೆ, ಅವನ್ನ ತಿಗಣಿ ವರದಂಗ ವರದ್ಬಿಡ್ತಿದ್ದೆ.

ಭೋಜರಾಜ– ಆ ಕೆಲ್ಸ ಅಷ್ಟು ಸುಲಭಲ್ಲಲೇ ಮೂರ್ತಿ. ಯಾಕಂದ್ರ, ನಮ್ಮ ವನಜಾಳ ಬಲಗೈ ಈ ಮಗ. ಇವನ ಮಾತು ಅವಳಿಗೆ ವೇದವಾಕ್ಯ

ಮೂರ್ತಿ- ಈ ಮಗಾ ಅವರಿಗೆ ಮಾಟ ಮಾಡ್ಸಿರ್ಬೇಕ್ರಿ. ಯಾಕಂದ್ರ ನಿಂಬಿಹಣ್ಣಿನ ಮಾರ್ಕೆಟ್ಟಿನ್ಯಾಗಿ ಬಾಳಿರ್ತಾನವನು. ಅದರಾಗದ್ರಾಗ, ಅವನ ಮಾರ್ಯಾಗ ಒಂದು ನಮೂನಿ ಅಟ್ರ್ಯಾಕ್ಷನ್ ಪವರ್ ಐತ್ರಿ. ಅಲ್ರಿ, ಆ ಟೈಪಿಸ್ಟ್ ಲಿಲ್ಲಿ ನನ್ನೊಡ ಎಷ್ಟು ಚಂದ ನಕ್ಕೊಂತ ಮಾತಾಡ್ತಿರ್ತಾಳೆ. ಇವ ನೌನು ಬಂದು ಮಾರಿ ತೋರ್ಸೂದ ತಡ, ನನ್ನ ಕತ್ತಿಗಿಂತ ಕಡಿ ಮಾಡ್ತಾಳ, ಅವನ ಬೆನ್ಹತ್ತಾಳ. ಅಲ್ಲಾ ನೀವ ವಿಚಾರ ಮಾಡ್ರಿ. ಯಾಕಂದ್ರ ಮನ್ನೆ ನಿಮಗೂ ಅನುಭವಾಗೇತಿ,

ಭೋಜರಾಜ– ಮೂರ್ತಿ, ಬಾಯ್ಮುಚ್ಕೊಂಡು ಮನಿಗೆ ನಡಿ ಮಗನ. (ಹೋಗುವಾಗ, ಟೆಲಿಗ್ರಾಂ ಹಿಡಿದು ಧರ್ಮಯ್ಯ ಬರುವನು)

ಧರ್ಮಯ್ಯ– ಯಜಮಾನ್ರೆ ನಿಮ್ಮಗ ವಿಕ್ರಂನಿಂದ ಟೆಲಿಗ್ರಾಂ ಬಂದಿದೆ.

ಭೋಜರಾಜ– (ಗಾಬರಿಯಾಗಿ) ಯಾಕೆ...! ಏನಾಗಿದೆಯಂತೆ?

ಧರ್ಮಯ್ಯ– ಗಾಬರಿಯಾಗ್ಬೇಡ್ರಿ ಅವರಿಗೇನೂ ಆಗಿಲ್ಲ. ಪರೀಕ್ಷೆ ಮುಗಿತು, ನಾಳೆ ಬರ್ತೀನಂತ ಟೆಲಿಗ್ರಾಂ ಕೊಟ್ಟಿದ್ದಾರಷ್ಟೆ.

ಭೋಜರಾಜ– ಹೌದ...? ಸರಿ ಬಿಡು ಡೆಲ್ಲಿಯಿಂದ ಪನಜಾಳ ವಿಷಯಮೇನಾದ್ರೂ ಬಂದಿದೆಯೇನು?

ಧರ್ಮಯ್ಯ– ಇಲ್ರಿ, ಯಾವ ವಿಷಯಾನು ಬಂದಿಲ್ಲ.

ಭೋಜರಾಜ– ನೋಡು, ಅವಳು ಬರೋ ವಿಷಯ ನಿನಗ ತಿಳಿದ ತಕ್ಷಣ, ಬಂದು ನನಗ ತಿಳಿಸ್ಬೇಕು.

ಧರ್ಮಯ್ಯ– ಆಯ್ತು, ಬರ್ತೀನ್ರಿ. (ಹೋಗುವಾಗ)

ಮೂರ್ತಿ– ಅಲ್ಲಾ, ಧರ್ಮಯ್ಯನವರ ಆ ಟೈಪಿಸ್ಟ್ ಲಿಲ್ಲಿ ಬಗ್ಗೆ ಏನರ ವಿಚಾರ ಮಾಡಿರೇನು?

ಧರ್ಮಯ್ಯ– ವಿಚಾರ......!!?

ಲಿಲ್ಲಿ ಧ್ವನಿ– ಹೌದು ಸಾರ್ ಆ ಸಮಯಕ್ಕೆ ಸರಿಯಾಗಿ ಡ್ರೈವರ್ ರಂಗ ಬರದಿದ್ರೆ, ನನ್ನ ಜೀವನಾನೆ ಹಾಳು ಮಾಡ್ಬಿಡ್ತಿದ್ದ ಆ ಚಂಡಾಲ. ಸಾರ್, ಖರೆ ಹೇಳ್ಬೇಕಂದ್ರೆ ಆ ಭೋಜರಾಜ ಮನುಷ್ಯನಲ್ಲ, ಪಶು ಯಜಮಾನ್ರೆ ಪಶು.

ಧರ್ಮಯ್ಯ– (ಆವೇಶದಿಂದ) ಹೌದಮ್ಮಾ ಇವರು ಮನುಷ್ಯರಲ್ಲ, ಪಶುಗಳು.

ಭೋಜರಾಜ– ಯಾರು ಪಶುಗಳು?

ಧರ್ಮಯ್ಯ– ಅಸಹಾಯಕ ಹೆಣ್ಣಿನ ಜೀವನಾನ ಹಾಳ್ಮಾಡಿದವರು. ಸುವಾಸನೆ ಕೊಡೋ ಹೂವೊಂದು ಗಿಡದಲ್ಲಿ ಅರಳಿದ್ರೆ ನೋಡೋರ ಭಾವನೆ

ಹಲವಾರು ತರವಿರುತ್ತೆ. ವಿಚಾರವಾದಿಯೊಬ್ಬ ಆ ಹೂವನ್ನು ಗಿಡದಲ್ಲೇ ನೋಡಿ ಕಣ್ಣುಗಳಿಗೆ ತೃಪ್ತಿ ಪಡಿಸಿದ್ರೆ ಬುದ್ಧಿವಂತನೊಬ್ಬ ಅರಳಿರೋ ಹೂವು ನೆಲಕ್ಕೆ ಬೀಳ್ಬಾರ್ದು, ಅದರ ಸೌಂದರ್ಯ ಸದುಪಯೋಗವಾಗ್ಲಿ ಅಂತ. ದೇವರಡಿಗೋ ಇಲ್ಲಾ ತನ್ನ ಅತಿ ಪ್ರೀತಿಯ (ಹೆಣ್ಣಿನ) ಮುಡಿಗೋ ಸೇರಿಸಿ ಸಂತೋಷಪಡ್ತಾನೆ. ಇಂಥಾ ಗುಣವಿದ್ದವರ ಕಣ್ಣಿಗೆ ಬಿದ್ರಾಗ ಮಾತ್ರ ಆ ಹೂವು ತನ್ನ ಬೆಲೆಯನ್ನು ಉಳಿಸಿಕೊಂಡು, ಅವರ ಪ್ರೀತಿಯ ಒಲೆಯಲ್ಲಿ ನೆಲೆಯಾಗುತ್ತದೆ. ಆದರೆ, ಕುದುರೆಯಂತೆ ಕಾಣುವ ಕತ್ತೆಯನ್ನೇ ಬಳಸಿಕೊಂಡು ಸವಾರಿ ಮಾಡುವ ಕೆಲ ಅಯೋಗ್ಯರ ಹಾವಳಿ ಇವತ್ತಿನ ಸಮಾಜದಲ್ಲಿ ಅತಿಯಾಗಿಬಿಟ್ಟಿದೆ. ಇವ್ರಿಗೆ ಕುದುರೆಯಾದ್ರೇನು, ಕತ್ತೆಯಾದ್ರೇನು ಒಟ್ನಲ್ಲಿ ಸವಾರಿ ಮಾಡ್ಬೇಕನ್ನೋ ಹುಚ್ಚು ತುಂಬಿರುತ್ತದೆ. ಇಂಥಾ ಬುದ್ಧಿಗೇಡಿಗಳ ಕಣ್ಣಿಗೇನಾದ್ರೂ ಆ ಸುಂದರವಾದ ಹೂ ಕಂಡ್ರೆ, ಅದರ ಕಥೆ ಮುಗಿದಂತೆಯೇ ಸರಿ. ಸ್ವಲ್ಪವೂ ಕನಿಕರವಿಲ್ಲದೆ. ಒಂದೊಂದೇ ಪಕಳೆಗಳನ್ನು ಕಿತ್ತು ನೆಲಕ್ಕೆ ಚೆಲ್ಲಿ ಬಿಡ್ತಾರೆ. ಅದರ ಅಂದವನ್ನು ಕಣ್ಣಲ್ಲಿ ಸೆರೆ ಹಿಡಿಯೋ ಬುದ್ಧಿಯಾಗಲೀ, ಸುವಾಸನೆ ಸವಿಯೋ ವಿಚಾರವಾಗಲೀ ಈ ಮೂರ್ಖರಿಗೆ ಬರೋದಿಲ್ಲ. ಇಂಥವರನ್ನು ಬಗ್ಗು ಬಡಿಯಲು ಸಮಯ ಕೂಡಿ ಬರ್ಬೇಕು. ಅಲ್ಲೀವರಿಗೂ ಯಾರಪ್ಪನಿಗೂ ಈ ಮುಂಡೇ ಮಕ್ಳು ಬಗ್ಗೋದಿಲ. ಬರೀನಿ.

(ಹೋಗುವನು)

ಮೂರ್ತಿ— ಹೊಗ್ಗೊ ಇವನೌನು. ದುಡ್ಕೊಟ್ಟು ಗುದ್ದಿಸಿಕೊಂಡಂಗಾತು ನಮ್ಮ ಬಾಳೇವು. ಯಾರಾಯ ಮಾತಿಗೆ ನಿಂತವನು ನಮಗಸ್ಯೆತ ಮಾತಾಡಾಕ ಗ್ಯಾಪ್ ಕೊಡ್ಲಿಲ್ಲ. ಹಂಗ ಮಾತಾಡಿದ. ಮತ್ತದ್ರಾಗ, "ಯಾರಪ್ಪಗ್ಲಿ ಬಗ್ಗಾದಿಲ್ಲ ಮುಂಡೇ ಮಕ್ಳು" ಅನ್ನೋ ಸಸ್ಪೆನ್ಸಿಟ್ಟು, ನಿದ್ದಿಗಣ್ಣಾಗ ಸೈತ ಮುಟ್ಟಿ ನೋಡಿಕೊಂಡಿರ್ಬೇಕು ಅಂತ ಗೂಟನ ಜಡ್ದು ಹೋದ, ಇಷ್ಟೇನು ರಂಗ್ಯಾಗಂದ್ನೋ? ನಿಮಗಂದ್ನೋ?... ನಿಮ್ಮಿಬ್ರನ್ನೂ ಬಿಟ್ಟು ನನಗ ಅಂದ್ನೋದ್ನೋ? ಒಟ್ನು ತಿಳಿದಂಗಾತಿದು. (ಭೋಜರಾಜನಿಗೆ) ಅಲ್ಲಾ ನಿಮಗೇನರ ಈ ಸಸ್ಪೆನ್ಸಿನ ಅರ್ಥ ತಿಳಿತೇನು?

ಭೋಜರಾಜ— ಮೂರ್ತಿಣ್ಣಾ ನೀ ನನಗ ಕಾರಕೂನನಾಗಿರೋದಷ್ಟು

ವಿಚಾರ ಮಾಡು. ಆದ್ರ ಒಮ್ಮಿಗೆ ನಮ್ಮ ರಹಸ್ಯದ ಮೂಲ ಬೇರಿಗೆ ಕೈ ಹಾಕಾಕ ಹೋಗ್ಬೇಡ. ತಿಳಿತಿಲ್ಲೋ? ನಡಿ ಮನಿಗೆ (ಹೋಗುವನು)

ಮೂರ್ತಿ– ಹುಚ್ಚರ ಸಂತ್ಯಾಗ್ನಿಂತು ಹೊಯ್ಕೊಳ್ಳುವ್ಹಂಗಾತಿದು. ಆ ಧರ್ಮಯ್ಯ ಒಂದ ನಮೂನಿ ಮಾತಾಡಿ ಸಸ್ಪೆನ್ಸ್ ಗೂಟ ಜಡದಿದ್ದ. ಈಗಿವ ನೊಂದು ನಮೂನಿ ಮಾತಾಡಿ ದೊಡ್ಡ ಗೂಟನ ಜಡ್ದು ಹೋದ. ಇನ್ನು ಮನಿ ಮುಟ್ಟೋದ್ರಾಗ ಯಾರ್ಯಾರು ಏಸೇಸು ಗೂಟ ಬಡಿತಾರೋ ಯಾರಿ ಗ್ಗೊತ್ತು. (ಹೋಗುವಾಗ ನಿಂತು) ಬಂದ್ಲಲ್ಲಾ ನನ್ನ ಕನಸಿನರಾಣಿ ಟೈಪಿಸ್ಟ್ ಲಿಲ್ಲಿ. (ಲಿಲ್ಲಿ ಬರುವಳು) ಬಾ ಹೃದಯೇಶ್ವರಿ, ಎಲ್ಲವೂ ಕುಶಲವೆ?

ಲಿಲ್ಲಿ– ಹಂದಿಗಳಿದ್ದ ಹಾಳೂರೆ ಬಿಟು ಬಂದ್ಮೇಲೆ ಕುಶಲವಾಗಿದ್ದೇನೆ ಮುಷ್ಕೇಶ್ವರ.

ಮೂರ್ತಿ– ತಗಾ. ಇಕಿನೂ ನನಗ ಜಡದ್ಲು. ಅಂದ್ರ.... ನಾನು ಹಂದಿ ಜಾತಿಯವನ?

ಲಿಲ್ಲಿ– ಅದಕ್ಕಿಂತ ಕಡಿ, ಆ ಹಂದಿಗೆ ಜೀವಿದ್ರೂ ಬೆಲಿ ಐತಿ, ಸತ್ರೂ ಬೆಲಿ ಐತಿ. ಅದರ್ಮ್ಯಾಂದ ನಿನ್ನ ಗ್ರೇಡ್ ಪೂರಾ ಡೌನ್.

ಮೂರ್ತಿ– ನನ್ನೆದಕ್ಕರ ಹೋಲ್ಸೋ ಏಚಾರ್ಯತಿ ನಿನಗ?

ಲಿಲ್ಲಿ– ಇನ್ನೆದಕ್ಕ ಹಂದಿ ತಿನ್ನುತ್ತಲ್ಲ...

ಮೂರ್ತಿ– ಸ್ಟಾಪ್, ಮುಂದಿಂದು ನೀಯೇನು ಬಿಡಿಸಿ ಹೇಳ್ಬ್ಯಾಡ. ನಾ ಶ್ಯಾಣ್ಯ ಅದೇನಿ. ತಿಳ್ಕೋತೀನಿ.

ಲಿಲ್ಲಿ– ತಿಳ್ಕೊಂಡಿಲ್ಲೊ, ದಾರಿ ಬಿಡಂಗಾರ

ಮೂರ್ತಿ– ಹೋಗುವಂತಿ ತಡಿ. ಯಾಕಪ್ಪರ ಮಾಡ್ತಿ. ನಿನ್ನ ಸಲುವಾಗಿ ತಲಿ ಕೆಡಿಸಿಕೊಂಡಿರೋ ಈ ಪ್ರಿಯಕರನ ಮುಂದೆ, ನಿನ್ನ ಮಾತಿನ ಮುತ್ತು ಸುರಿಸಿ ಹೋಗಬಾರದೆ ಪ್ರಿಯೆ ?

ಲಿಲ್ಲಿ– ನನ್ನ ಸಲುವಾಗಿ ತಲಿ ಕೆಡಿಸಿಕೊಳ್ಳಾಕ ನಿನಗ್ಯಾರ್ಹೇಳಿದ್ರು.

ಮೂರ್ತಿ– ವಯಸ್ಸು

ಲಿಲ್ಲಿ– ಯಾರಿಗೂ ಇಲ್ಲದ ವಯಸ್ಸು ನಿನಗ ಐತೇನು ?

ಮೂರ್ತಿ– ಮತ್ತೊಬ್ಬರ ವಯಸ್ಸು ತಗೊಂಡು ನಾಯೇನ್ಮಾಡ್ಲಿ

ಸಧ್ಯ ನಾ ವಯಸ್ಸಿಗೆ ಬಂದೇನಿ. ನನ್ನ ವಯಸ್ಸಿನ ರೂಲ್ಸ್ ಪ್ರಕಾರ ಹ್ವಂಟೇನಿ. ತೀರಾ ಒತ್ರ್ಯಕ್ಕ ಬಂದ ಮನುಷಾ ನಾನು. ಆದ್ರೂ ಕಂಟ್ರೋಲ್ ಕೆಪ್ಯಾಸಿಟಿ ಐತಿ ಅಂತ ಇಲ್ಲೀತನ ತಡಕೊಂಡೀನಿ. ನಿನ್ನ ನೆನಪಾದ್ರ ಸಾಕು, ಹಾಡ್ಹಗಲ ಸೈತ ಕಣ್ಣು ಕಾಣುದಿಲ್ಲ ನನಗ. ಮುಸ್ಸೆರ ಮುಳ್ಳ ಕಂಟ್ಯಾಗ ಬಿದ್ದು ಮೂರ್ಾಸು ಗುದ್ಯಾಡಿ ಹೊರಗ್ಬಂದೀನಿ ಗೊತ್ತೈನು ? ಅದನ್ನ ನೆನಸ್ಕೊಂಡ್ರೆ ಇಲ್ಲೇ ನಿನ್ನ ಗಲ್ಲಕ್ಕೊಂದು ಮುತ್ತು ಕೊಡಬೇಕು ಅನಿಸುತ್ತ.

ಲಿಲ್ಲಿ– ಭಪ್ಪರೆ ಗಂಡ್ಸ. ನನ್ನ ಗಲ್ಲಕ್ಕ ಮುತ್ತು ಕೊಡ್ತಿಯಾ?

ಮೂರ್ತಿ– ಕೊಡಬೇಕಂತ ವಿಚಾರಿಟ್ಟೇನಿ.

ಲಿಲ್ಲಿ– ಆ ದಮ್ಮೈತೆನು ? ಇದ್ರ ಬಾರಲೆ. ಅದ್ಹೆಂಗ ಮುತ್ತು ಕೊಡ್ತಿ ನೋಡೇ ಬಿಡ್ತೇನಿ. (ಬಳೆ ಏರಿಸುವಳು)

ಮೂರ್ತಿ– ಆ... ಬಳಿ ಯಾಕೇರಸ್ತಿ ನೀನು ?

ಲಿಲ್ಲಿ– ಮುತ್ತು ಕೊಡಾಕ ಅನುಕೂಲಾಗ್ಲಿ ಅಂತ.

ಮೂರ್ತಿ– ಅಂದ್ರೆ ನಾ ಕೈಯಿಗೆ ಮುತ್ತು ಕೊಡ್ತೇನಂತ ತಿಳದಿ ಯೇನು ?

ಲಿಲ್ಲಿ– ಹಂಗಲ್ಲ ರಾಜಾ. ನೀ ನನಗ ಮುತ್ತು ಕೊಡ್ತಿ ಅಂದಾಗ ನಾನು ನಿನಗ...

ಮೂರ್ತಿ– ಮುತ್ತು ಕೊಡ್ತಿ ಅಂದಂಗಾತು. ಮತ್ಯಾಕ ತಡ. ಬಾ ಹಂಗಾರ ಮುತ್ತಿನ ಮಳೆ ಸುರ್ಸೋನ (ಲಿಲ್ಲಿಯನ್ನು ಹಿಡಿಯಲು ಹೋದಾಗ ಕಪಾಳಕ್ಕೆ ಹೊಡೆಯುವಳು) ಯೇನಾತೆ ನಿನಗ. ಮುತ್ತು ಕೊಡು ಅಂತ ಕರೆದು, ಕತ್ತಿಗ್ಹೊಡದಂಗ ಹೊಡಿತಿಯಲ್ಲ.

ಲಿಲ್ಲಿ– ಮತ್ತೇನರ ಮೈಮುಟ್ಟಾಕ ಬಂದ್ರ, ಹಂದಿಗೆ ಬಡ್ದಂಗ ಬಡೀತಿನಿ. ಏನಂತ ತಿಳದಿ ನನ್ನ ?

ಮೂರ್ತಿ– ಶ್ರೀದೇವಿ ಅಂತ ತಿಳದೇನಿ. ಹಂಗ ನೀನೂ ನನ್ನ ಜಿತೇಂದ್ರ ಅಂತ ತಿಳಿ. ಇಬ್ರೂ ಕೂಡಿ ಬ್ರೇಕ್ ಡ್ಯಾನ್ಸ್ ಮಾಡಾನ,

ಲಿಲ್ಲಿ– ನೀ ಜಿತೇಂದ್ರಿದ್ದಂಗದಿಯಾ? ಒಮ್ಮೆರ ನಿನ್ನ ಅಪರೂಪದ ಮುಸುಡಿ ನೋಡ್ಕೊಂಡಿಯೇನು?

ಮೂರ್ತಿ– ರಗಡ ಸಲ ನೋಡ್ಕೊಂಡೀನಿ. ಜಿತೇಂದ್ರನ ತದ್ರೂಪನೆ ಐತಿ ನನ್ನ ಫಿಗರ್. ಮತ್ತ ನಿನಗೇನರ ರಾಜ್‌ಕುಮಾರ ಇಲ್ಲಾ ಕಮಲಹಾಸನ್ ಕಂಡಂಗ ಕಾಣ್ತೇವೇನು ?

ಲಿಲ್ಲಿ– ಇಲ್ಲ ನಮ್ಮಪ್ಪನಪ್ಪ ಅಂದ್ರ ನಮ್ಮಜ್ಜನಂಗ ಕಾಣ್ತಿ.

ಮೂರ್ತಿ– ನಿಮ್ಮಜ್ಜನಂಗ?... ಕಳ್ಳಿ, ನಕಲಿ ಮಾಡ್ತಿಯೇನು? ಪ್ರೀತಿ ಉಕ್ಕಿ ಬಂದಾಗ. ಪ್ರೀತಿ ವಸ್ತುವಿನ ಗತಿ ಇದ ಅನ್ನಾದು ನನಗೊತ್ತು. ಬಾ ಬಾ ಲೈಲಾ ಮಜನೂ ಪಾರ್ಕಿನ್ಯಾಗ ಐಸ್‌ಕ್ರೀಂ ತಿನಕೊಂತ ಮಾತಾಡಾನ.

ಲಿಲ್ಲಿ– ಖಬರ್ದಾರ್. ದೂರ್ನಿಂತು ಮಾತಾಡು. ನಿನಕೂಡ ಐಸ್‌ಕ್ರೀಂ ತಿನಕೊಂತ ಮಾತಾಡಾಕ ನಾನಿನ್ನ ಪ್ರೇಯಸಿಯಲ್ಲ, ನೀ ನನ್ನ ಪ್ರಿಯತಮನೂ ಅಲ್ಲ. ನನ್ನ ನಿನ್ನ ನಡುವೆ ಯಾವ ಸಂಬಂಧನೂ ಇಲ್ಲ. ಆದ್ರೂ, ನಮ್ಮಜ್ಜ ನಂಗ ಕಾಣ್ತೀಯಲ್ಲ ಅಂತ ಮರ್ಯಾದಿ ಕೊಟ್ಟೇನಿ, ಸರಳ ದಾರಿ ಬಿಡು.

ಮೂರ್ತಿ– ಬಿಡದಿಲ್ಲ. ಏನೇ ಮಾಡ್ತಿ? ನನ್ನೀ ಫಿಗರ್ ನೋಡಿ ರಗಡು ಹುಡುಗೇರು ತಲಿ ಕೆಡಿಸಿಕೊಂಡು ಕಂಡ ಕಂಡಲ್ಲಿ ತೆಕ್ಕಿ ಬಡಿಯಾಕ ಬರ್ತಾರ. ಅಂಥಾ ಈ ಮಸ್ತಕಥನ ಮಾರಿ ನಿನಗ ನಿಮ್ಮಜ್ಜನಂಗ ಕಾಣುತ್ತ? ಅಲ್ಲ ನೀನ್ಯಾ ಕ್ಯಿಂಗ ಮಾತಾಡ್ತಿಯಂತ ನನಗೊತ್ತೈತಿ. ಆ ನನ್ನ ಮಗಾ ರಂಗ್ಯಾ ನಿನ್ನ ತಲಿ ಕೆಡಿಸಿಬಿಟ್ಟಾನ. ಅದಕ ನೀನವನ ಬೆನ್ಹತ್ತಿ ತಿರುಗ್ತೀದಿ. ನೋಡು, ಅವನು ಬಾಳ ಡೆಂಜರ್ ಮನುಷ್ಯಾ ಅದಾನ. ಹೆಣ್ಣು ಸಿಕ್ರ ಹಣ್ಣು ತಿಂದಂಗ ತಿಂದು ಒಗದು ಬಿಡ್ತಾನ. ಸುಮ್ಮನ ಅವನ ಸಲುವಾಗಿ ತಲಿಕೆಡಿಸಿಕೋ ಬ್ಯಾಡ.

ಲಿಲ್ಲಿ– ನಾ ಕೆಡಿಸಿಕೊಂತೀನಿ.

ಮೂರ್ತಿ– ಬ್ಯಾಡೆ ಲಿಲ್ಲಿ.

ಲಿಲ್ಲಿ– ನನಗ್ಬೇಕೋ ಯಜ್ಜಾ

ಮೂರ್ತಿ– ನಿನ್ನೌನು, ಅಜ್ಜ ಅನಬ್ಯಾಡ, ಜೀತೇಂದ್ರ ರಾಜಾ ಅನು

ಲಿಲ್ಲಿ– (ಬಳೆ, ಸೀರಿ ಏರಿಸುತ್ತಾ) ಬಾ ಹಂಗಾರ, ರಾಜಾ ಮಹಾರಾಜಾ

ಮೂರ್ತಿ— ಬ್ಯಾಡ ನೀ ಬಳಿ ಏರ್ಸ್ಬ್ಯಾದು, ಸೀರಿ ಏರ್ಸ್ಬ್ಯಾದು ಮಾಡ್ತಿ ಯಂದಾಗ ನೀನಿಲ್ಲೆ ನಿಂತಿರು, ನಾನು ಮಸಿಗ್ಬ್ಯೋದವನ ಎಣ್ಣೆ ಹಚ್ಚಿಕೊಂಡು ಹೊಳ್ಳಿ ಬರ್ತೀನಿ. (ಹೋಗುವನು)

ಲಿಲ್ಲಿ— ಬಾರೋ ನನ್ನ ಮನ್ಮಥರಾಜಾ, ನೆನಪಿನ ಕಾಣಿಕೆ ಕೊಟ್ಟು ಕಳಿಸ್ತೀನಿ. ಅಯ್ಯೋ ನೀಚ, ನಿನ್ನಯೋಗ್ಯತೆ ನನಗೊತ್ತಿಲ್ಲೇನೋ? ಈ ಊರಿಗೆ ಟೀಚರಾಗಿ ಬಂದಿದ್ದ ನನ್ನ ಗೆಳತಿಗೆ ಮದಿವ್ಯಾಗ್ತಿನಂತ ನಂಬ್ಸಿ, ಶೀಲ ಹಾಳ್ಮಾಡಿ, ಹೊಟ್ಟೆಲಾದಾಗ ಕೈ ಕೊಟ್ಟೆ. ಅಕಿ, ಮಾನಕ್ಕಂಜಿ ಹೊಳಿಗೆ ಬಿದ್ದು ಸತ್ಲು. ಈಗ ನನ್ನ ಬೆನ್ನು ಬಿದ್ದೀದಿ ಅಂದಾಗ. ನಿನಗೊಂದು ಗತಿ ಕಾಣಸದಿದ್ರ ಸತ್ತು ಸ್ವರ್ಗ ಸೇರಿರೊ ನನ್ನ ಗೆಳತಿ ಆತ್ಮಕ್ಕ ಶಾಂತೆರ ಸಿಕ್ಕಿತೇನು? ಹೌದು, ಇವತ್ತು ನನ್ನ ಮನದಿನಿಯನ ದರ್ಶನವೇ ಆಗ್ಲಿಲ್ವಲ್ಲಾ ಮಾತಾಡ್ಸಿದ್ರ ಸಿಡ್ದು ಬೀಳ್ತಾನ. ಅದಕ ನೋಡೆರ ತೃಪ್ತಿ ಪಡಬೇಕಾಗೇತಿ ರಂಗು, ಆಯ್ ಲವ್ ಯು, ಆಯ್ ಲವ್ ಯು ಟು ಮಚ್!!

(ಹೋಗುವಳು, ವಿಶಾಲ ಬರುವಳು)

ವಿಶಾಲ— ಹೆತ್ತವರ ಹೆಸರಿಗೆ ಕಳಂಕದ ಕಳಸವಿಟ್ಟ ಕುಲಹೀನೆ ನಾನು. ನನಗಾದ ಅನ್ಯಾಯವನ್ನು ಕೇಳಿ, ನನ್ನ ತಂದೆ ಎದೆಒಡೆದು ಸತ್ತ. ನಾ ಮಾಡಿದ ಪಾಪ. ನಿರಪರಾಧಿ ನನ್ನ ತಂದೆಗೆ ಶಾಪವಾಯಿತು. ಮದುವೆಗೆ ಮುಂಚೇನೆ ಗರ್ಭ ಹೊತ್ತಿರುವ ನಾನು, ತಂದೆಯ ಸಾವಿನ ನೋವನ್ನು ಸಹಿಸಿಕೊಳ್ಳಲೇ? ಮುಂದಿನ ಭವಿಷ್ಯದ ಬಗ್ಗೆ ಆಲೋಚಿಸಲೇ? ಇಲ್ಲಾ, ಮಾನಕ್ಕಂಜಿ ಆತ್ಮಹತ್ಯೆ ಮಾಡಿಕೊಳ್ಳಲೆ? (ವಿಚಾರಿಸಿ) ಛೇ ಛೇ, ಕಳಂಕದ ಅಪವಾದ ಹೊತ್ತು ಸಾಯುವುದಕ್ಕಿಂತ, ಶೀಲ ಹಾಳು ಮಾಡಿದವನ ಕಾಲು ಹಿಡಿದಾದರೂ ಬಾಳು ಕೊಡೆಂದು ಕೇಳುವುದು ಲೇಸು, ಹೌದು, ಈಗದೇ ನನಗುಳಿದಿರುವ ಮಾರ್ಗ.

(ಹೋಗುವಳು)

## ನಾಲ್ಕನೆಯ ದೃಶ್ಯ

## ವನಜಾಳ ಭವ್ಯ ಬಂಗಲೆ

(ರಂಗ ಹೊರಗಿನಿಂದ ಪ್ರವೇಶ ಮಾಡಿ, ಒಳಗಡೆ ಹೋಗಿ ಬಂದು)

ರಂಗ– ಥತ್ ಹಲ್ಕಾ ನನ್ನ ಮಕ್ಳು, ವನಜಮ್ಮ ಊರಲ್ಲಿಲ್ಲ. ಜವಾಬ್ದಾರಿ ಮನುಷ್ಯಾರು ಇನ್ನೂ ಬೇಜವಾಬ್ದಾರಿ ಸಿದ್ಧಿ ಮಾಡ್ತಾದಾರ. ಅವ್ವಾವ್ರ ಫೋನ್ ನಂಬರ್ ತಿಳದಿದ್ರ ಇವರ ಹಕೀಕ್ಕತ್ತರ ತಿಳ್ಸಾಕ ಬರ್ತಿತ್ತು. (ಕುಳಿತು ಫೋನ್ ಕೈಗೆತ್ತಿಕೊಳ್ಳುವನು) ಡಾರ್ಲಿಂಗ್ ಆರಾಮಾದಿಯಾ? ಅಂದಂಗ ಆ ಡಿಸ್ಕೋಶಾಂತಿ, ಅನುರಾಧಾ. ನಿನ್ನಮ್ಯಾಲೆ ಬಟ್ಟೆ ಅಂಗಡಿಯವರು ಕೇಸ್ ಹಾಕಿದ್ರಂತಲ್ಲ ಏನಾತದು?. ಆ...ಆಆ... ಹೌದಾ? ಹಂಗಾರೆ, ನಾಳೆ ನೀವು ಮೂವರೂ ನನ್ನಾಫೀಸಿಗೆ ಬರ್ರಿ. ಒಂದು ಗುಡ್ ನ್ಯೂಸ್ ಹೇಳ್ತೀನಿ.

ಭೋಜರಾಜ– (ಒಳಗಿನಿಂದ ನೈಟ್ ಡ್ರೆಸ್ನಲ್ಲಿ ಬಂದು) ರಂಗಾ...

ರಂಗ– ಯಾರವನು? ಸಧ್ಯ ನನಗ ಪುರುಸೊತ್ತಿಲ್ಲ. ಒಂದು ವಾರ ತಡದು ಬರ್ರಿ ಮಗನ. ನಿನಗಲ್ಲ ಡಾರ್ಲಿಂಗ್ ನಾ ಅಂದಿದ್ದು. ಇಲ್ಯಾವನೋ ಬೇವರ್ಸಿ ನನ ಮಗ ಬಂದಿದ್ದ ಅವನಿಗಂದೆ. ಏನು...? ಗುಡ್‌ನ್ಯೂಸಿನ ವಿಷಯಾನ? ಅಂದ್ರ, ಸಧ್ಯ ನಾನೊಂದು ರೆಡಿಮೇಡ್ ಬಟ್ಟಿ ಅಂಗಡಿ ತಗಿಯೋ ವಿಚಾರ ಮಾಡೇನಿ. ಅದರಾಗ ನಿಮ್ಮಳತಿ ಡ್ರೆಸ್ ಸ್ಪೆತ ರೆಡಿ ಇಟ್ಟಿರ್ತೀನಿ.

ಭೋಜರಾಜ– ಲೇ ರಂಗಾ...

ರಂಗ– ಸುಮ್ನ ನಿಂದರ್ರಿ ಯಾಕ ಕಾಡ್ತೀರಿ? ಹಲೋ... ಏನಂದಿ? ಅಳತೆ ಕಳಿಸ್ತಿಯಾ? ಯಾತ್ಯಾಕ ಅಳತೆ ಕಳಿಸ್ತಿರಿ ನಿಮ್ಮೆಲ್ಲರ ಅಳತಿನೂ ನನಗ ಪಕ್ಕಾ ಗೊತ್ತೈತಿ. ಸಧ್ಯ ನ್ಯೂ ಟೈಪ್ ಮೂರು ಚಡ್ಡಿ ಕಳಿಸ್ತೀನಿ ಹಾಕ್ಕೊಂಡು ನೋಡ್ರಿ. ರಿಕ್ ಅಂತ ಕುಂತ್ರ ಹೌದು ಅನ್ರಿ ಮತ್ತೇನು?

ಭೋಜರಾಜ– ಈ ಮಗ ಬಾಳ ದೂರದ ವಿಚಾರದಾಗದಾನ. ಅಪ್ಪಾ ಮಹಾನುಭಾವ ರಂಗಸ್ವಾಮಿ...

ರಂಗ– ಇನ್ನ ಮಾರಿ ಕೆತ್ತ್ರವಂಗ ಬಡಿಸಿಕೊಂತಿ ತಮ್ಮ(ಸುಮ್ನಸಿಂದ್ರು) ಹಲೋ ಛಿಛೀ ನಿನಗಲ್ಲ ಪ್ರಿಯೆ. ಇಲ್ಲಿ ನನಗೊಬ್ಬಾಂವ ಶನಿಯಾಗಿ ಬೆನ್ನ ಹತ್ಯಾನ ಅವ್ನಿಗೆ. ಹಲೋ... ಚಡ್ಡಿ ಯಾವ ಸಮೂನಿ ಅದಾವಂದೇನು? ಏರ್‌ಕೂಲ್ಡ್ ಚಡ್ಡಿ ಡಾರ್ಲಿಂಗ್ ಎಷ್ಟು ಕುಣುದ್ರೂ ಒಟ್ಟ ಕಾವಾಗದಿಲ್ಲ. ಗಾಳಿ ಧಾರಾಳವಾಗಿ ನುಗ್ಗುತ್ತ.

ಭೋಜರಾಜ– ಭಪ್ಪರೆ ಮಗನೆ ಏರ್‌ಕೂಲ್ಡ್ ಚಡ್ಡಿ, ಗಾಳಿ ಧಾರಾಳ ವಾಗಿ ನುಗ್ಗುತ್ತಂತ. ಅಂದ್ರ ಸೊಳ್ಳಿ ಪರ್‍ಡಾದಾಗ ಹೊಲಸ್ತಾನೇನಿ ಚಡ್ಡೀನ? (ಡುಬ್ಬ ಚಪ್ಪರಿಸಿ) ಅವಿವೇಕಿ ಏಳೊ ಮೇಲೆ.

ರಂಗ– ಥೋ ಎಲ್ಲಿಯವನು ಗಂಟು ಬಿದ್ನಪಾ ಅಂತೀನಿ. ಯಾರ್ರೆ ನೀನು?

ಭೋಜರಾಜ– ನಿಮ್ಮಪ್ಪ.

ರಂಗ– ನಮ್ಮಪ್ಪ ಸತ್ತಾನ, ನೀನ್ಯಾರೋ ಬೆಪ್ಪ ? (ತಿರುಗಿ ನೋಡಿ) ನೀ... ನೀವೇನು ?

ಭೋಜರಾಜ– ಮಗನ್ನ, ಜಯಮಾಲಿನಿ ನಿನಗ ಫೋನ್ ಮಾಡಿದ್ಲಾ ? ಡಿಸ್ಕೊಶಾಂತಿ. ಅನುರಾಧಾಗೆ ಏರ್‌ಕೂಲ್ಡ್ ಚಡ್ಡಿ ಹೊಲ್ದು ಕೊಡ್ತಿಯಾ ?

ರಂಗ– ಊನ್ರಿ. ಬೇಕಂದ್ರ ನಿಮಗೂ ಹೊಲ್ದು ಕೊಡ್ತೀನ್ರಿ ಏರ್ ಕಂಡೀಷನ್ ಕಾಚಾನ: ಹೆಂಗೂ ನಿಮ್ಮಳತಿನೂ ನನಗ ಪಕ್ಕಾ ಗೊತ್ತಾಗೇತಿ.

ಭೋಜರಾಜ– ಮುಚ್ಚಾಯಿ. ಎರಡು ದಿವದಾಗ ಬರ್ತೀನಂತ ಊರಿ ಗೋದವನು, ನಾಕದಿನಕ್ಕ ಬಂದಿಯಲ್ಲ, ಸಂಬ್ಳೇನು ಪುಗ್ಸಟ್ಟೆ ಬರ್ತೇನು ?

ರಂಗ– ನಾ ದೌಡ್ಡ ಹ್ವಂಟಿದ್ರಿ.

ಭೋಜರಾಜ– ಯಾರರ ಸತ್ರೇನು ?

ರಂಗ– ಊನ್ರಿ.

ಭೋಜರಾಜ– ಯಾರ ನಿಮ್ಮಜ್ಜಿನ ?

ರಂಗ– ಅಲ್ರಿ. ನಮ್ಮೂರ ಗೌಡ್ರ ಮನಿ ಕ್ವಾಣ.

ಭೋಜರಾಜ– ಗಾಡ್ರ ಮನಿ ಕ್ವಾಣ ಸತ್ರ ನಿಂದೇನಲೆ ಕೆಲಸ ?

ರಂಗ– ವಿಚಾರಿಲ್ಲದಂಗ ಮಾತಾಡ್ತೀರಲ್ಲ ನೀವು. ನಮ್ಮೂರಾಗಿದ್ದದ್ದು ಅದ ಒಂದ ಕ್ವಾಣ. ಸುತ್ತ ಹಳ್ಳ್ಯಾಗ ಮತ್ತೊಂದಿಲ್ಲ. ಅಂದಾಗ ಆ ಕ್ವಾಣ ಸತ್ತಿಂವ ಮುಂದ ನಮ್ಮೂರ ಎಮ್ಮಿಗಳ ಗತಿ ಏನಾಗಿರಬ್ಯಾಡ. ನೀವ ವಿಚಾರ ಮಾಡ್ರಿ.

ಭೋಜರಾಜ– ಎಷ್ಟು ದೂರ ವಿಚಾರ ಮಾಡಿಯಲ್ಲಲೇ ಮಗನ ?

ರಂಗ– ಹೌದ್ರಿ. ಮನುಷ್ಯಾರಾದ್ರ ನಮಗಿಂತಾದು ಹರಕ್ಹತ್ತ್ಯಾಗೇತಂತ ಬಾಯ್ಬಿಟ್ಟು ಹೇಳ್ತಾರ. ಪಾಪ! ಮೂಕ ಪ್ರಾಣಿಗಳು ನಮಗಿಂತ ತ್ರಾಸಾಗೇತಂತ ಹೆಂಗ್ಹೇಳ್ತಾವ್ರಿ

ಭೋಜರಾಜ– ಒಟ್ಟೇಗ ಕ್ವಾಣನ ವ್ಯವಸ್ಥೆ ಮಾಡೀ ಬಂದಿ ?

ರಂಗ– ಊನ್ರಿ. ಮತ್ತ ನಿಮಗೇನರ ಬೇಕಾಗೇತೇನ್ರಿ ಕ್ವಾಣ ?

ಭೋಜರಾಜ– ನನಗೆದಕೋಲೆ ?

ರಂಗ– ಅದೂ ಖರೇನ. ನೀವ್ನ ಒಂದ ಕ್ವಾಣದಂಗದೀರಿ.

ಭೋಜರಾಜ– ಏನಂದೀ... ?

ರಂಗ– ಆ ಟೈಪಿಸ್ಟ ಲಿಲ್ಲಿಗೇನೋ ಮಾಡಾಕ ಹೋಗಿದ್ರಲ್ಲಾ ಅಂದೆ.

ಭೋಜರಾಜ– ರಂಗಣ್ಣಾ, ಈ ತಿಂಗ್ಳು ನೂರು ರೂಪಾಯಿ ಜಾಸ್ತಿ ಹಾಕ್ತೀನಿ ನಿನ್ನ ಸಂಬ್ಳಾನ. ಆದ್ರೀ ವಿಷಯ ಮಾತ್ರ ಎಲ್ಲೂ ಬಾಯ್ಬಿಡ್ಬೇಡ. ಅಂತೂವಿಕ್ಕ ಬಾಯ್ಬಿಟ್ಟೀ, ನಿನ್ನ ಜೀವಂತ ಸುಡುಸಿ ಬಿಡ್ತೀನಿ.

(ಒಳಗಿನಿಂದ ನೈಟ್ ಡ್ರೆಸ್‌ನಲ್ಲಿ ವಿಕ್ರಂ ಬರುವನು)

ವಿಕ್ರಂ– ಗುಡ್ ಮಾರ್ನಿಂಗ್ ಡ್ಯಾಡಿ!

ಭೋಜರಾಜ– ವೆರಿ ಗುಡ್ ಮಾರ್ನಿಂಗ್ ಮೈ ಸನ್!! ನಿದ್ದಿ ಆರಾಮ ಹತ್ತಿತ್ತಾ?

ರಂಗ– ಅಗ್ದಿ ಏನ್ಕೇಳ್ತೀರ್ರಿ? ಇವರೇನು ನಿಮ್ಮಂಗ ವಯಸ್ಸು ಹೋದ ಹಳೇ?

ವಿಕ್ರಂ– ನಮ್ಮ ಡ್ಯಾಡಿಗೇನು ಮಹಾ ವಯಸಾಗಿದೆಯೋ? ವ್ಯವಹಾರದ ಒತ್ತಡ ಜಾಸ್ತಿಯಾಗಿ ಹಂಗ ಕಾಣ್ತಾರಷ್ಟೆ. ಇನ್ನೂ ಇಪ್ಪತ್ತು ವರ್ಷ ವಯಸ್ಸಿನ ಹುಡುಗ್ರಿಗೆ ಛಾಲೇಂಜ್ ಮಾಡ್ತಾರೆ, ನಮ್ಮ ಡ್ಯಾಡಿ.

ಭೋಜರಾಜ– ಈ ಮಗನಿಗೇನು ಗೊತ್ತು. ನನ್ನ ದೇಹದಲ್ಲಿನ್ನೂ [illegible] ರಕ್ತ ಹರದಾಡ್ತಿದೆ ಅಂತ.

ರಂಗ– ಯಾಕ ಗೊತ್ತಿಲ್ರಿ, ಎಲ್ಲಾ ಗೊತ್ತೈತಿ. ಅದಾಳಲ್ಲ ಆ ರಂಡ ಮುಂಡಿ ಬಸಜ್ಜಿ, ನಿಮು ಹರೇವಷ್ಟೈತಿ ಅನ್ನಾದಲ್ಲ ನನ್ಮುಂದ ಹೇಳ್ತಾಳ.

ಭೋಜರಾಜ– ಅಪ್ಪಾ ಮಹಾನುಭಾವ. ಮೊದಲಿಲ್ಲಿಂದ ದಯಮಾಡ್ಸು.

ರಂಗ– ಹೋಕ್ಕಾನಿ ಬಿಡ್ರಿ; ನೀವೆಷ್ಟು ಸಿಟ್ಟಿಗ್ಬರ್ತೀರಿ. (ಹೋಗುವನು)

ಭೋಜರಾಜ– ಬಾ ವಿಕ್ರಂ ಮೊದಲು ಸ್ವಲ್ಪ ಡ್ರಿಂಕ್ಸ್ ಮಾಡೋಣ, ನಂತರ ಮುಂದಿನ ವಿಚಾರ.

ವಿಕ್ರಂ– ಕಮಾನ್ ಡ್ಯಾಡಿ. ನಿಮ್ಮ ಕಂಪನಿ ಇಲ್ದೆ ಬಹಳ ದಿವಸವಾಯ್ತು. ಆದ್ರೆ...

ಭೋಜರಾಜ– ಆದ್ರೇನೋ?

ವಿಕ್ರಂ– ವನಜಾ ಊರಲ್ಲಿಲ್ಲ. ಅವಳು ಬಂದ್ರೆ ನಮ್ಮೆಲ್ಲಾ ಚಟಕ್ಕೂ ಕತ್ರಿ ಹಾಕ್ತಾಳೆ ಕಾರಣ, ಇವತ್ತೊಂದಿನಾ

ಭೋಜರಾಜ– ವಿಕ್ರಂ. ನಾವು ನಿಮ್ಮಪ್ಪ. ನಿನ್ನವಶ್ಯಕತೆ ಏನನ್ನೋದು ನನಗೊತ್ತಿದೆ. ಬಾ ಕೂತ್ಕೋ...ವೀಣಾ..., ಕಮಾನ್ ಕ್ವಿಕ್! (ಇಬ್ಬರೂ ಕುಡಿಯುತ್ತಿರುವಾಗ ಡ್ಯಾನ್ಸ್ ನಡೆಯುವುದು, ನಂತರ) ಡಿಯರ್ ಸನ್, ನೀನು ನನ್ಮಗ. ಆದ್ರೂ ಸ್ನೇಹಿತನಿದ್ದಂತೆ. ನನ್ನ ಹತ್ರ ಯಾವ ಸಂಕೋಚನೂ ಇಟ್ಕೋಬೇಡ.

ವಿಕ್ರಂ– ನಾನ್ಯಾಕ ಸಂಕೋಚ ಪಡ್ತೀನಿ ಡ್ಯಾಡಿ? ನೀವೇ ನನಗೆ ಉಪದೇಶ ಮಾಡಿಲ್ವೆ? ನಾವಿಬ್ರೂ ತಂದೆ ಮಗನಾದ್ರೂ, ಮನಸ್ಸಿಗೆ ಹಿತ, ದೇಹಕ್ಕೆ ಸುಖ ಕೊಡೋ ವಸ್ತುವನ್ನು, ಸ್ನೇಹಿತರಂತೆ ಹಂಚಿಕೊಂಡು ಖುಷಿ ಪಡೋಣ

ಅಂತ. ಮಾಡಿದ ಉಪದೇಶದಂತೆ, ಅಂದು ನಾನು ಧರ್ಮಯ್ಯನ ಮಗಳನ್ನು ಬಲತ್ಕಾರ ಮಾಡಿದಾಗ, ನೀವೂ ಒತ್ತಾಯಿಸಿ ಸುಖ ಪಡಲಿಲ್ಲವೆ?

ಭೋಜರಾಜ– ನಿಜ ವಿಕ್ರಂ. ಆ ಹೆಣ್ಣಿನ ಸಹವಾಸ ಅದೆಷ್ಟು ಸುಖ, ಅದೆಷ್ಟು ಹಿತವಿತ್ತು. ಮತ್ತೊಮ್ಮೆ ಅನುಭವಿಸಬೇಕೆನ್ನುವುದ್ರಲ್ಲಿ ಪ್ಯಾನಕ್ಕಂಜಿ ಪ್ರಾಣ ಬಿಟ್ಟು ಬಿಟ್ಲು ಪಾಪ.

"ವಿಕ್ರಂ– ಆ ವಿಚಾರ ಹೋಗ್ಲಿ ಬಿಡಿ. ಬಹಳ ದಿನದಿಂದ ನಿಮಗೊಂದು ಪ್ರಶ್ನೆ ಕೇಳ್ಬೇಕೂ ಅಂತಿದ್ದೆ. ಇವತ್ತು ಕೇಳ್ತೀನಿ ಉತ್ತರ ಕೊಡ್ತೀರಾ ಡ್ಯಾಡಿ?

ಭೋಜರಾಜ– ಯಾವ ಪ್ರಶ್ನೆ ಕೇಳು ಇವತ್ತೆಲ್ಲಾ ಹೇಳ್ಬಿಡ್ತೀನಿ.

ವಿಕ್ರಂ– ನೀವು ಅತ್ತೆ, ಮಾವನನ್ನು ಕೊಲೆ ಮಾಡಿದ್ದು ಈ ಸಮಸ್ತ ಆಸ್ತಿಯನ್ನು ದಕ್ಕಿಸಿಕೊಳ್ಳುವುದಕ್ಕಲ್ಲವೇ?

ಭೋಜರಾಜ– ಯಸ್ ಮೈ ಸನ್, ಯಸ್!

ವಿಕ್ರಂ– ಆದರೆ, ಈ ಆಸ್ತಿಯೆಲ್ಲ ವನಜಾಳ ಹೆಸರಿಗಿದೆಯಲ್ಲ ಡ್ಯಾಡಿ?

ಭೋಜರಾಜ– ಸರಿಯಾದ ಪ್ರಶ್ನೇನೆ ಕೇಳಿದೆ. ನೋಡು ವಿಕ್ರಂ, ನಾನೇ ಬುದ್ಧಿವಂತ ಅಂದ್ರೆ, ವನಜಾಳ ತಂದೆ ನನಗಿಂತಲೂ ಮಹಾ ಬುದ್ಧಿವಂತ. "ನನ್ನ ಮಗಳು ಮೆಜಾರ್ಟಿಗೆ ಬಂದ ನಂತರ ಈ ಆಸ್ತಿಯನ್ನು ತನ್ನಿಚ್ಛೆ ಬಂದಂತೆ ಬಳಸಬಹುದು. ವಿಧಿವಶಾತ್ ಮೆಜಾರ್ಟಿಗೆ ಬರುವ ಮುಂಚೆ, ಅಥವಾ ಮದುವೆಗಿಂತ ಮುಂಚೇನೆ ಸತ್ತರೆ, ಈ ಆಸ್ತಿಯಲ್ಲಾ ಮಿಲ್ಲಿನ ಕಾರ್ಮಿಕರಿಗೆ ಹಂಚಿ ಹೋಗತಕ್ಕದ್ದು" ಅಂತ ವಿಲ್ ಬರೆದಿಟ್ಟಿದ್ದಾನೆ. ಈ ವಿಚಾರ ತಿಳಿಯದೆ ಅಂದು ವನಜಾಳನ್ನು ಕೊಂದುಬಿಟ್ಟಿದ್ರೆ, ಈ ಬೆಟ್ಟದಂತಾ ಆಸ್ತಿ, ಯಾರ್ದೊ ಸೊತ್ತಾಗಿರ್ತಿತ್ತು. ನಾವು ಭಿಕ್ಷೆ ಬೇಡಿ ತಿನ್ಬೇಕಾಗಿರ್ತಿತ್ತು. ಕಾರಣ, ಅವಳ ಕೂದಲೆಳೆಗೂ ಕೊಂಕಾಗದಂತೆ, ಇದುವರೆಗೂ ನಾವೇ ಕಾಪಾಡಿಕೊಂಡು ಬಂದಿದ್ದೇನೆ.

ವಿಕ್ರಂ– ಭಲೇ ಡ್ಯಾಡಿ, ನಿಮ್ಮ ಬುದ್ಧಿವಂತಿಕೆಯನ್ನು ಮೆಚ್ಚಬೇಕು.

ಭೋಜರಾಜ– ನನ್ನ ಬುದ್ಧಿವಂತಿಕೆಯನ್ನು ಮೆಚ್ಚುವುದಕ್ಕಿಂತ ಸಧ್ಯ ನಿನ್ನ ಬುದ್ಧಿವಂತಿಕೆಯ ಪ್ರದರ್ಶನವಾಗಬೇಕಾಗಿದೆ.

ವಿಕ್ರಂ– ಅಂದ್ರೆ?

ಭೋಜರಾಜ– ವಿಶಾಲಾ ಹರಯದ ಹುಡುಗ್ಯಾ, ದೇವರಾಣ್ಯ ಪುರುಷನ ಕಡೆಗೆ ಹರಿಯುದಂತೆ, ನಿನ್ನ ಮೋಡಿಯ ಪ್ರೀತಿ ನೀರ ಓಡಿಯಬೇಕ. ನಿನ್ನ ಕೈಯಿಂದ ತಾಳಿ ಕಟ್ಟಿಸಿಕೊಂಡ್ರೆ ಸಾಕು. ಈ ಸರ್ವ ಸಂಪತ್ತಿಗೆ ನಾವೇ ಅಧಿಪತಿಗಳಾಗ್ತೀವಿ.

ವಿಕ್ರಂ– ಅವಳ ವಿಷಯ ನನಗ್ಯಾಕ. ಊರಿಗೊಂದು ಬರ್ಲಿ. ಹೆಚ್ಚ ಕಿತ್ತಿಡುವುದಕ್ಕೂ ನನ್ನಾಕ್ಷಿಗೆ ಎದುರು ಹೋಡ್ಬೇಕು. ಹಾಗ್ಮಾಡ್ತೀನಿ.

ಭೋಜರಾಜ– (ನಗುತ್ತಾ ಭುಜ ತಟ್ಟಿ) ಎಷ್ಟೇ ಆಗಲಿ ನೀನು ನನ್ನ ಮಗನಲ್ಲವೆ?

ವಿಕ್ರಂ– ರಕ್ತದ ಗುಣವೂ ಒಂದೇ ಅಲ್ಲವೇ?

(ಇಬ್ಬರೂ ನಗುತ್ತಿರುವಾಗ ವಿಶಾಲ ಬರುವಳು)

ವಿಶಾಲ– ವಿಕ್ರಂ...

ವಿಕ್ರಂ– ಯಾರು?... ನೀನಾ? ಮತ್ಯಾಕಿಲ್ಲಿಗ್ಬಂದೆ? ಅವತ್ತೇ ನಿನ್ಲೆಕ್ಕ ಚುಕ್ತ ಮಾಡಿ ಬಂದಿದ್ದೇನಲ್ಲ?

ವಿಶಾಲ– ನನಗ ತಾಳಿ ಕಟ್ಟುವತನಕ ಲೆಕ್ಕ ಚುಕ್ತವಾಗುವುದಿಲ್ಲ ವಿಕ್ರಂ.

ವಿಕ್ರಂ– ತಾಳಿ ಕಟ್ಟಿಸಿಕೊಳ್ಳುವ ಹುಚ್ಚು ನಿನಗಿನ್ನೂ ಬಿಟ್ಟಿಲ್ಲವೇ?

ವಿಶಾಲ– ಶೀಲ ಕಳೆದುಕೊಂಡ ಹೆಣ್ಣು, ತಾಳಿ ಕಟ್ಟಿಸಿಕೊಳ್ಳಲು ಬಯಸೋದು ಹುಚ್ಚಲ್ಲ ವಿಕ್ರಂ, ಗರತಿಯಾಗಿ ಬಾಳ್ಬೇಕೆನ್ನುವ ಕೆಚ್ಚು.

ವಿಕ್ರಂ– ನಿನ್ನೀ ಹುಚ್ಚು ಕೆಚ್ಚು ನನ್ನನ್ನು ರೊಚ್ಚಿಗೆಬ್ಬಿಸುತ್ತಿದೆ ನೋಡು ಮಾಗಿದ ಹಣ್ಣು ರುಚಿಯಿದೆಯೆಂದು ಅದರ ರಸ ಕೈಗಂಟುವತನಕ ತಿನ್ನುವ ಮೂರ್ಖತನ ಮಾಡುವವನಲ್ಲ ನಾನು. ರುಚಿ ತಿಳಿಯುವುದಕ್ಕೆಷ್ಟು ಬೇಕೋ ಅಷ್ಟು ಮಾತ್ರ ತಿಂದು ಮಿಕ್ಕಿದ್ದನ್ನ ಬಿಸಾಕಿ ಬಿಡ್ತೀನಿ. ಮತ್ತೆಂದೂ ನಾನದನ್ನು ಬಯಸುವುದಿಲ್ಲ. ಇದು ನನ್ನ ಸ್ಪೆಷಾಲಿಟಿ.

ವಿಶಾಲ– ಇದು ನಿಮ್ಮ ಸ್ಪೆಷಾಲಿಟಿ ಇರಬಹುದು. ಆದ್ರೆ, ಬಿದ್ದ ಜಾಗದಲ್ಲಿ ಬಿದ್ದು ಕೊಳೆಯಲು ನಾನು ಮಾರ್ಕೆಟ್‌ನಲ್ಲಿ ಮಾರುವ ಹಣ್ಣಲ್ಲ. ಮೈಮನಸ ಕದ್ದವನ ಮಡದಿಯಾಗಿ ಬಾಳಬೇಕೆಂದು ಬಂದಿರುವ ಮಾನವಂತ ಹೆಣ್ಣು.

ವಿಕ್ರಂ– ಮಾನವಂತ ಹೆಣ್ಣು? (ನಗು) ಮದುವೆಗೆ ಮುಂಚೆನೇ ಮಗು ಹೆತ್ತು ಕೊಟ್ಟಿರುವ ನೀನು, ಮಾನವಂತ ಹೆಣ್ಣೆ?

ವಿಶಾಲ– ಅದು ನಿನ್ನ ಪ್ರೀತಿಯ ಫಲ.

ವಿಕ್ರಂ– ನೆವ್ವರ್! ನನ್ನ ಪ್ರೀತಿಯ ಫಲವಲ್ಲ, ನಿನ್ನ ಅನೀತಿಯ ಫಲ! ಹುಚ್ಚು ಯೌವನ ಗಂಡಸಿನ ಸಂಪರ್ಕ ಬಯಸ್ತು. ನಿನ್ನ ಹೆಣ್ತನವನ್ನೇ ಮರೆತು ನನಗೆ ಮೈ ಅರ್ಪಿಸಿದೆ, ಈ ಪಾಪದ ಫಲ ಪಡೆದೆ. ನಿನ್ನೀ ಪಾಪದ ಫಲಕ್ಕೆ ಕರುಣೆ ತೋರಿ ಕೈಲಾದಷ್ಟು ಸಹಾಯ ಮಾಡ್ತೀನೆ ಹೊರತು, ತಾಳಿ ಕಟ್ಟಿ ಬಾಳು ಕೊಡಲಾರೆ.

ವಿಶಾಲ– ದಯವಿಟ್ಟು ಹಾಗನ್ಬೇಡಿ ವಿಕ್ರಂ. ಮೈ ಕದ್ದ ನೀವು ಮಡದಿ ಸ್ಥಾನ ಕೊಡದಿದ್ದರೆ ಖಂಡಿತ ನಾನು ಆತ್ಮಹತ್ಯೆ ಮಾಡಿಕೊಳ್ತೀನಿ.

ಭೋಜರಾಜ– ಮಹಾ ಅನ್ಯಾಯವಿದು. ಮೆಚ್ಚಿದವನನ್ನು ಮದುವೆಯಾಗಲು ಬಂದು, ಆತ್ಮಹತ್ಯೆ ಮಾಡಿಕೊಳ್ಳಲು ನಾನವಕಾಶ ಕೊಡುವುದಿಲ್ಲ.

ವಿಶಾಲ– ನೀವೂ...?

ಭೋಜರಾಜ– ನಿನ್ನ ಪ್ರಿಯಕರನನ್ನು ಈ ಭೂಮಿಗೆ ಪರಿಚಯಿಸಿ ಕೊಟ್ಟವನು. ಅಂದ್ರೆ ಇವನ ತಂದೆ. ಸಧ್ಯ ನಿನ್ನ ಮಾವ.

ವಿಶಾಲ– ಸಾರ್, ನಿಮ್ಮ ಮಗನ ಹೆಂಡತಿಯಾಗಿ ಬಾಳೋ ಅವಕಾಶ ಮಾಡಿಕೊಟ್ಟು, ನನಗೆ ನ್ಯಾಯ ದೊರಕಿಸಿಕೊಡಿ, ನಿಮ್ಮ ಕಾಲಿಗೆ ಬೀಳ್ತೀನಿ. (ಕಾಲಿಗೆ ಬೀಳುವಳು. ಭೋಜರಾಜ ಎಬ್ಬಿಸುತ್ತಾ)

ಭೋಜರಾಜ– ಹುಚ್ಚಿ! ಏಳಮ್ಮಾ ಏಳು, ನಾನು ನಿಮ್ಮಪ್ಪ. ನಿನಗನ್ಯಾಯವಾದ್ರೆ ಸುಮ್ಮನಿರ್ತೀನೇನಮ್ಮಾ?

ವಿಕ್ರಂ– ಡ್ಯಾಡಿ ನೀವೂ...?!

ಭೋಜರಾಜ– ಮುಚ್ಚು ಬಾಯಿ (ಪಕ್ಕಕ್ಕೆ ಸರಿದು) ಅವಿವೇಕಿ. ಈ ಕೆಂಪು ಗುಲಾಬಿಯಂತ ಹೆಣ್ಣನ್ನು ನನಗೆ ಪರಿಚಯ ಮಾಡಿ ಕೊಡದೆ. ನಿನೊಬ್ಬನೇ ಬಯಕೆ ತೀರಿಸಿಕೊಂಡಿರುವಿಯಲ್ಲಾ. ಬುದ್ಧಿ ಇದೆಯೇನೋ? ಅದೃಷ್ಟ ವಶಾತ್ ಇವಳು. ತಾನಾಗಿ [illegible]ಗೆ ಬಿದಿದ್ದಾಳೆಯೆಂದಾಗ ಮಾವ ಅಂ [illegible]

ಕೊಳ್ಳೋ ನಾನು ಮಾನವೀಯತೆ ತೋರಿಸ್ಬಿದ್ರೆ ತಪ್ಪಾಗೋದಿಲ್ಲೇನೊ?... ನೋಡಮ್ಮಾ ನನ್ಮಗ ಮಾಡಿರೋ ತಪ್ಪಿಗೆ ನಾನು ಕ್ಷಮೆ ಕೇಳ್ತೀನಿ.

ವಿಶಾಲ– ಅಂತಾ ದೊಡ್ಮಾತೇಕೆ ಸಾರ್. ನಿಮ್ಮಗ ನನಗ ಬಾಳು ಕೊಟ್ರೆ ಸಾಕು.

ಭೋಜರಾಜ– ಲೋ... ವಿಕ್ರಂ

ವಿಕ್ರಂ– ವಾಟ್ ಡ್ಯಾಡಿ ?

ಭೋಜರಾಜ– ಈ ಹೆಣ್ಣು ನನ್ನ ಸೊಸೆಯಾಗ್ಬೇಕಾದ್ರೆ, ನೀನೇನು ಮಾಡ್ಬೇಕು ಗೊತ್ತೇನು ?

ವಿಕ್ರಂ– ಗೊತ್ತು, ತಾಳಿ ಕಟ್ಟ, ಬಾಳು ಕೊಡ್ಬೇಕು.

ಭೋಜರಾಜ– ಗುಡ್! ಹಾಗಾದ್ರೆ ತಾಳಿ ಕಟ್ತೀನಿ, ಬಾಳು ಕೊಡ್ತೀನಿ ಅಂತ ಈ ಹೆಣ್ಣಿಗೆ ಸ್ಪಷ್ಟವಾಗಿ ಹೇಳಪ್ಪ.

ವಿಕ್ರಂ– ವಿಶಾಲ, ನಾನು ನಿನಗ ದ್ರೋಹ ಮಾಡ್ಬಿಟ್ಟೆ, ದಯವಿಟ್ಟು ಕ್ಷಮಿಸು. ಖಂಡಿತ ನಿನ್ನ ಬಯಕೆಯ ಬಾಳು ಕೊಡಲು ನಾನೀಗ ಸಿದ್ಧನಾಗಿದ್ದೇನೆ.

ವಿಶಾಲ– ನೀವ್ಹೇಳ್ತಿರೋದು ಸತ್ಯ ತಾನೆ ?

ಭೋಜರಾಜ– ಈ ಸತ್ಯವಂತನ ಮಗ ಅವನು. ಅಸತ್ಯವಾಡಿದ್ರೆ ನಾನೊಪ್ತಿನಾ ?

ವಿಶಾಲ– ಸಾರ್, ನನಗೆ ನ್ಯಾಯ ದೊರಕಿಸಿ, ಗರತಿತನ ಉಳಿಯುವಂತೆ ಮಾಡಿದ ದೇವರು ನೀವು.

ಭೋಜರಾಜ– ಅಂದಾಂಗ, ನನಗ ಸಾರ್ ಅನ್ನುವದನ್ನು ಬಿಟ್ಟು, ಮಾವ ಅನಬಾರ್ದೇನಮ್ಮಾ ?

ವಿಶಾಲ– ಮಾವ...

ಭೋಜರಾಜ– ಆಹಾ! ಎಷ್ಟು ಹಿತವಾಗಿ ಕರ್ದೆಯಮ್ಮಾ ಮನಸ್ಸಿಗೆ ಮತ್ತು ಬಂದಂತಾಯ್ತು. ಅಂ, ಇಲ್ಲಿ ನಡಿಯಮ್ಮಾ. ನೀನು ಬಳಲಿ ಬಂದಿದಿಯಾ. ಒಳಗ್ಹೋಗಿ ಮುಖ ತೊಳ್ಕೊಂಡು ಬಾ. ಇವತ್ತು ಮೂವರೂ

ಕೂಡೇ ಊಟ ಮಾಡಿ. ಆಮ್ಯಾಲ ಮುಂದಿನ ವಿಚಾರ ಮಾಡ್ಯೋಣ, ಸರಿಯೇನಮ್ಮಾ ?

ವಿಶಾಲ– ಆಗ್ಲಿ ಮಾವಾ (ಒಳಗಡೆ ಹೋಗುವಳು)

ಭೋಜರಾಜ– ಮೈ ಡಿಯರ್ ಸನ್

ವಿಕ್ರಂ– ಡ್ಯಾಡಿ...

ಭೋಜರಾಜ– ಇದು..., ನೀನು ಕಚ್ಚಿದ ಹಣ್ಣಲ್ಲವ ?

ವಿಕ್ರಂ– ಯಸ್ ಡ್ಯಾಡಿ.

ಭೋಜರಾಜ– ಹಣ್ಣು ಸಿಹಿಯೋ, ಕಹಿಯೋ ?

ವಿಕ್ರಂ– ಎರಡೂ ಅಲ್ಲ.

ಭೋಜರಾಜ– ಮತ್ತೆ

ವಿಕ್ರಂ– ಅಮೃತ, ಅಮೃತ ಡ್ಯಾಡಿ.

ಭೋಜರಾಜ– ಹಾಗಾದ್ರೆ..., ನಾನೂ ಸ್ವಲ್ಪ ಅಮೃತ ಕುಡ್ದು ಬರ್ಲೇನು ?

ವಿಕ್ರಂ ವೈ ನಾಟ್ ? ಧಾರಾಳವಾಗಿ ಕುಡುದ್ಬನ್ನಿ. ಅಲ್ಲೀವರಗೂ ನಾನೇ ಅಮೃತ ಕುಡಿತಿರ್ತೀನಿ.

ಭೋಜರಾಜ– ಕುಡಿ, ತೃಪ್ತಿಯಾಗುವಷ್ಟು ಕುಡಿ. ಆದರೆ, ನಾನು ಬರುವತನಕ ಎಚ್ಚರಿಕೆಯಿಂದಿರು. (ಹೋಗುವನು)

ವಿಕ್ರಂ– (ನಗುತ್ತ) ಬಾಳು ಕೇಳಲು ಬಂದ ಹೆಣ್ಣು, ಮತ್ತಷ್ಟು ಧೂಳು ಮುತ್ತಿಸಿಕೊಳ್ತು ತೀರ್ತು. (ಕುಳಿತು ಕುಡಿಯುವಾಗ ಹಿನ್ನೆಲೆ)

ವಿಶಾಲ– (ಒಳಗಿನಿಂದ) ಮಾವ, ಏನೀ ವರ್ತನೆ ? ಬಿಡ ನನ್ನ

ಭೋಜರಾಜ– ನನ್ನಾಸೆ ತೀರಿದ್ಮೇಲೆ ಖಂಡಿತ ಬಿಡ್ತೀನಿ.

ವಿಶಾಲ– ಅಮ್ಮಾ... (ಚೀರುವಳು)

(–ಹಿನ್ನೆಲೆ ಪಾಟ–)

(ಭೋಜರಾಜ, ವಿಕ್ರಂ ಕುಡಿಯುತ್ತಾ ನಿಂತಾಗ, ಕದಲು ಕೆದರಿದ ವಿಶಾಲ ಒಳಗಿನಿಂದ ಬರುವಳು)

ವಿಕ್ರಂ– ವಿಶಾಲ..., ತಾಳಿಕಟ್ಟು, ತಾಳಿಕಟ್ಟು ಅಂತ ಪೀಡಿಸ್ತಿದ್ದೆಯಲ್ಲ, ಈಗ್ಯಾರಿಗೆ ಪೀಡಿಸ್ತಿಯಾ ? ನನಗೋ, ನನ್ನ ತಂದೆಗೋ ? ಈಗ ನಿನಗ ತಾಳೀನ ನಾ ಕಟ್ಟೇಕೋ ? ನನ್ನ ತಂದೆ ಕಟ್ಟೇಕೊ ?

ಭೋಜರಾಜ– ಪಾಪ! ತಾಳಿ ಕಟ್ಟಿಸಿಕೊಳ್ಳೋ ಕನವರಿಗೆ ಬಹಳ ಇದೆ ಇವಳಿಗೆ. ಇಬ್ರೂ ಕೂಡಿ ಎರಡು ತಾಳಿ ಕಟ್ಟೋಣ. ಏನಂತಿಯಾ ?

(ನಗುವರು. ಧರ್ಮಯ್ಯ ಬಂದು ನೋಡಿ ಮರೆಯಾಗುವನು)

ವಿಶಾಲ– ಪಾಪಿಗಳೆ, ನನ್ನಾಳು ಹಾಳ್ಮಾಡಿ, ನಗತೀರಾ ? ನಗರಿ, ಚನ್ನಾಗಿ ನಗರಿ. ಹಿಂದೂ ಸಂಸ್ಕೃತಿಯಲ್ಲಿ ಹೆಣ್ಣಿಗಿರೋ ಸ್ಥಾನ, ಮಾನ, ಮರ್ಯಾದೆಗಳನ್ನು ಮಣ್ಣಾಲ್ಲಿ ಮುಚ್ಚಿ, ಆ ಹೆಣ್ಣನ್ನು ಮನ ಬಂದಂತೆ ಬಳಸಿದ ಭಂಡರೇ, ಘನಕಾರ್ಯ ಸಾಧಿಸಿದವರಂತೆ ಕೇಕೆ ಹಾಕಿ ನಗರಿ. ಅನಾದಿ ಕಾಲ ದಿಂದ ದೇವಾನು ದೇವತೆಗಳು, ಋಷಿ ಮಹಾಋಷಿಗಳು "ದೇವತೆ" ಎಂದು ಹಾಡಿ-ಹರಸಿದ ಹೆಣ್ಣನ್ನು ಪಶುವಿನಂತೆ ಹಂಚಿ ತಿಂದ, ಮೂರೂ ಬಿಟ್ಟವರೆ. ಅಬಲೆ ಹೆಣ್ಣಿನ ಮಿಂಡರು ನಾವೆಂದು ಗುಂಡಿಗೆ ಬಡಿ-ಬಡಿದುಕೊಂಡು ನಗರಿ. ನೀವು ನಕ್ಕಷ್ಟೂ ನನ್ನ ರಕ್ತ ನೀರಿಗೆ ಬಿದ್ದ ಸುಣ್ಣದಂತೆ ಕುದಿಯುತ್ತಿದೆ. ಮನುಷ್ಯ ರೂಪವಿದ್ದರೂ ಪಶು ಬುದ್ಧಿ ಬೆಳೆದಿರುವ ನಿಮ್ಮ ತಲೆಗಳನ್ನು ಕತ್ತ ರಿಸದೆ ಬಿಡಲಾರೆ. ಚನ್ನಾಗಿ ನೆನಪಿಟ್ಟುಕೊಳ್ಳಿ. ನಾ ವೇಶ್ಯೆಯಾಗಿ ಬದುಕಿದರೂ ಚಿಂತೆಯಿಲ್ಲ. ನಿಮ್ಮನ್ನು ನಾಶಮಾಡದೆ ಮಾತ್ರ ಸಾಯಲಾರೆ.

ಭೋಜರಾಜ– ಏನಂದೆ, ನೀನು ನಮ್ಮನ್ನು ನಾಶ ಮಾಡ್ತಿಯಾ ? ಅಯ್ಯೋ ಹುಚ್ಚಿ, ದುಡ್ಡಿನ ಕವಚ ನಮಗಿರುವ ತನಕ, ನಮ್ಮನ್ನು ನಾಶ ಮಾಡುವದಕ್ಕೆ ಆ ಈಶನೇ ಬಂದರೂ ಪಾಪಾಸಾಗಿಬಿಡುತ್ತಾನೆ. ಅಂದಾಗ, ಸಾಮಾನ್ಯ ಹೆಣ್ಣಾದ ನೀನೇನು ಮಾಡಲು ಸಾಧ್ಯ ? ನಮ್ಮ ದುಡ್ಡಿನ ದರ್ಪಕ್ಕೆ ನಿನ್ನಂತ ಹೆಣ್ಣು ಸರ್ಪಗಳು ಹಲ್ಲು ಕಳೆದುಕೊಂಡು ನಮ್ಮ ಕಾಲಡಿಯ ಕಸ ವಾಗಲೇ ಬೇಕು.

ವಿಶಾಲ– ಆ ನಿಮ್ಮ ದುಡ್ಡಿನ ಕವಚ ಮಾಡಿದ ಪಾಪಗಳನ್ನು ಮರೆ ಮಾಚಿದರೂ, ಪ್ರಾಣ ಉಳಿಸಲು ಸಾಧ್ಯವಿಲ್ಲ. ದುಡ್ಡಿನ ದರ್ಪದಲ್ಲಿ ಅತ್ಯಾ ಚಾರ ಮಾಡಿದರೂ, ಘೋರ ಶಾಪಕ್ಕೆ ತುತ್ತಾಗಿ ಭೂಗತವಾಗುವ ಗ್ರಹಚಾರ

ತಪ್ಪಿದ್ದಲ್ಲ. ದುಡ್ಡು, ದುಡ್ಡೆಂದು ದುಡ್ಡಿನ ಜಿಡ್ಡಂಟಿಸಿಕೊಂಡು ಸಡ್ಗೊಡ ಯುವ ನಿಮ್ಮಂಥಾ ರಾಕ್ಷಸರನ್ನು ಬೆತ್ತಲೆ ಮಾಡಿ ಛೀ, ಥೂ ಎಂದು ಉಗಿ ಯುವ ಕಾಲವೂ ದೂರಿಲ್ಲ. ತನ್ನ ಹೆಂಡತಿಯನ್ನು ತಂದೆ ಭೋಗಿಸುವುದನ್ನು ಕಂಡರೂ, ತೆಪ್ಪಗಿರುವ ಈ ನಿಮ್ಮ ಮಗ, ತನಗೆ ಜನ್ಮ ಕೊಟ್ಟವಳನ್ನುವ ಪರಿಜ್ಞಾನವಿಲ್ಲದೆ ನಿನ್ನ ಹೆಂಡತಿಯನ್ನು ಭೋಗಿಸಿರಬೇಕು.

ಭೋಜರಾಜ– ಬಾಯಿ ಬಿಗಿ ಹಿಡಿದು ಮಾತಾಡು ನೀಚ ಹೆಣ್ಣೇ.

ವಿಶಾಲ– ಮೊದಲು ನಿಮ್ಮ ಬುದ್ಧಿಯನ್ನು ಶುದ್ಧ ಮಾಡಿಕೊಳ್ಳಿ, ಭಂಡ ಗಂಡಸರೆ. ತನ್ನ ಹೊಟ್ಟೆಯಿಂದ ಹುಟ್ಟಿದ (ಕರುಳ ಕುಡಿ) ಕರುವಿನಿಂದಲೇ ಗರ್ಭ ಹೊರುವ ಹಸುವಿನ ಸ್ಥಿತಿ ನಿಮ್ಮ ಹೆಂಡತಿಗೂ ಬಂದಿದ್ದರೆ ಆಶ್ಚರ್ಯ ವೇನಿಲ್ಲ. ಯಾಕಂದ್ರೆ ಪಶುವಿಗಿಂತಲೂ ಮಿಗಿಲಾದ ಹಸಿದ ನಾಯಿಗಳು ನೀವು. ಹೇಸಿಗೆ ತಿಂದು, ಹೊಲಸಿನಲ್ಲಿ ಬಿದ್ದು ಒದ್ದಾಡುವ ಹಂದಿಗೂ ನಿಮಗೂ ವ್ಯತ್ಯಾಸವೇನಿದೆ ?

ವಿಕ್ರಂ– ಈ ಹುಚ್ಚು ಮಾತು ಬಿಟ್ಟು, ನಿನ್ನ ದೇಹ ಸ್ವಚ್ಛ ಮಾಡಿ ಕೊಳ್ಳೋ ಮಾರ್ಗ ಹುಡುಕೋಗೆ.

ವಿಶಾಲ– ಈಗ್ಹೋಗ್ತೀನಿ, ನಿಮ್ಮನ್ನು ಭಕ್ಷಿಸಲು ರಾಕ್ಷಸಿಯಾಗಿ ಮತ್ತೆ ಬರ್ತೀನಿ. (ಹೋಗುವಾಗ ಧರ್ಮಯ್ಯ ಎದುರಾಗುವನು)

ಧರ್ಮಯ್ಯ– ಯಾರವಮ್ಮಾ ನೀನು ?

ವಿಶಾಲ– ಮನುಷ್ಯರಂತೆ ಕಾಣುವ ನರ ರಾಕ್ಷಸಿ. (ಹೋಗುವಳು)

ಭೋಜರಾಜ– ಅವಳ್ಯಾರಾದ್ರೂ ಆಗ್ಲಿ, ನೀನ್ಯಾಕ ತಲೆ ಕೆಡಿ ಸ್ಕೊಳ್ತಿಯಾ ?

ವಿಕ್ರಂ– ಹುಚ್ಚಿ ಇರ್ಬೇಕವಳು. ಒಳಗ್ಬಂದು ರಾದ್ಧಾಂತ ಮಾಡಿದ್ಲು. ಅದಕ್ಕ ಹೊರಗ್ ದಬ್ಬಿದ್ವಿ.

ಧರ್ಮಯ್ಯ– ನನಗೆದುರಾಗಿ ಬಂದ ಅವಳ ಮುಖ ನೋಡಿದಾಗಲೇ ಗೊತ್ತಾಯ್ತು ವಿಕ್ರಂ ಸಾಹೇಬ್ರೆ. ಅವಳಿಗೆ ಹುಚ್ಚು ಹಿಡಿದಿದೆಯಂತ. ಇಂದಿನ ಸಮಾಜದಲ್ಲಿ ಇಂಥಾ ಮುಗ್ಧ ಹೆಣ್ಣುಗಳ ಸಂಖ್ಯೆ ಲೆಕ್ಕವಿಲ್ಲದಂತೆ ಬೆಳೆದಿದೆ,

ಬೆಳೆಯುತ್ತಲೇ ಇದೆ. ಇಂಥವರ ಮನದಲ್ಲಿ ಮೋಹ ಅಂಕುರಿಸುವ ಬೀಜ ಬಿತ್ತಿ ಮೊಳಕೆಯಾಗಿ, ಗಿಡವಾಗಿ, ಫಲವಾಗುವ ತನಕ ಕಪಟ ಪ್ರೀತಿಯ ನೀರುಣಿಸುವ ಕೆಲ ಹೈಬ್ರಿಡ್ ಕಾಮುಕರೂ ಇದ್ದಾರೆ ಈ ಸಮಾಜದಲ್ಲಿ. ತಿಂದು ತೃಪ್ತಿ ಪಡುವವರಿಗೆ ತ್ಯಾಗ ಮಾಡುವ ದೊಡ್ಡ ಗುಣ ಈ ನೀಚರಿಗಿರುವದಿಲ್ಲ. ಬಾಯಿ ಚಪಲಕ್ಕಾಗಿ ಆ ಫಲವನ್ನು ಕಚ್ಚಿ, ತಿಪ್ಪೆಗೆ ಚಲ್ಲಿಬಿಡುತ್ತಾರೆ. ಪಾಪ! ತೃಪ್ತಿ ಪಡುವವರ ಪಾಲಾಗದೆ, ತೃಪ್ತಿಪಡಿಸುವ ಶಕ್ತಿಯೂ ಇಲ್ಲದೆ ಎಂಜಲಾದ ಆ ಫಲ ಕೊಳೆತು ಮಣ್ಣುಪಾಲಾಗಿಬಿಡುತ್ತದೆ.

ಭೋಜರಾಜ– ಎಂಜಲಾದ ಫಲವನ್ನೂ ತಿಂದು ತೃಪ್ತಿ ಪಡುವವರಿದ್ದಾರಪ್ಪ ಈ ಸಮಾಜದಲ್ಲಿ.

ಧರ್ಮಯ್ಯ– ಇರಬಹುದು. ಆದರೆ ಅವರು ತೃಪ್ತಿಪಡುವವರಲ್ಲ. ಬರಗೆಟ್ಟವರು, ಹಸಿದ ನಾಯಿಗಳು. ಮಾಂಸವನ್ನು ಹರಿದು ತಿನ್ನುವ ಮೃಗಗಳಂತೆ ಹೆಣ್ಣನ್ನು ಹಂಚಿಕೊಂಡು ಭೋಗಿಸಿರುವ ತಂದೆ–ಮಕ್ಕಳ ಉದಾಹರಣೆ ಸಾಕಷ್ಟಿವೆ ಈ ಸಮಾಜದಲ್ಲಿ.

ಭೋಜರಾಜ– ಅಪ್ಪಾ ಧರ್ಮಯ್ಯ, ಆ ವಿಷಯಾ ಬಿಟ್ಟು ನೀ ಬಂದ ಕಾರಣ ಬೊಗಳು.

ಧರ್ಮಯ್ಯ– ಡೆಲ್ಲಿಯಿಂದ ನಾಳೆ ಹೊರಡ್ತೀನಿ ಅಂತ ವನಜಮ್ಮ ಟ್ರಂಕಾಲ್ ಮಾಡಿದ್ದಾರೆ. ಕಾರಣ ಅವರ ಸ್ವಾಗತ (ಆಮಂತ್ರಣ) ಸಮಾರಂಭದ ಸಿದ್ಧತೆಯನ್ನು ಮಿಲ್‌ನಲ್ಲಿ ಮಾಡ್ಬೇಕೋ, ಮನೆಯಲ್ಲಿ ಮಾಡ್ಬೇಕೋ ಅಂತ ನಿಮ್ಮನ್ನು ವಿಚಾರಿಸಲು ಬಂದೆ.

ವಿಕ್ರಂ– ರೀ ಧರ್ಮಯ್ಯ, ನಿಮ್ಗ ಬುದ್ಧಿಯಿದೆಯೇನ್ರಿ ? ಕೋಟ್ಯಾಧೀಶ್ವರಳ ಸ್ವಾಗತ ಸಮಾರಂಭಕ್ಕೆ ಈ ಸಣ್ಣ ಮನೆ ಸಾಲುತ್ತೇನ್ರಿ ?

ಧರ್ಮಯ್ಯ– ಹಾಗಾದ್ರೆ ಮಿಲ್‌ನಲ್ಲೇ ವ್ಯವಸ್ಥೆ ಮಾಡ್ತೀನ್ರಿ

ಭೋಜರಾಜ– ಇನ್ನೂ ಕೇಳ್ತಾ ನಿಂತಿದ್ದಿಯಲ್ಲ, ಮೊದ್ಲು ಆ ಕೆಲ್ಸ ಮಾಡ್ಹೋಗು.

ಧರ್ಮಯ್ಯ– ಸರಿ ಬರ್ತೀನಿ. (ಹೋಗುವನು)

ವಿಕ್ರಂ– ಡ್ಯಾಡಿ, ಇವನ್ಮಾತುಗಳು ನಮ್ಮನ್ನೇ ಇರಿಯುತ್ತಿವೆಯಲ್ಲ.

ಭೋಜರಾಜ– ಅದರ ಬಗ್ಗೆ ನೀನೇನೂ ತಲೆ ಕೆಡಿಸಿಕೊಳ್ಳಬೇಡ. ಇವನ ತಲೆಯಲ್ಲಿ ಈಗತಾನೆ ಸಂಶಯದ ಸುಳಿ ಮೊಳಕೆ ಹಾಯ್ದಂತಿದೆ. ಸ್ವಲ್ಪ ದಿನ ಕಾದು ನೋಡೋಣ. ಆ ಮೊಳಕೆ ನೆರಳು ಕೊಡೋ ಮರವಾಗುತ್ತೊ, ಕಾಲಿಗೆ ಚುಚ್ಚುವ ಮುಳ್ಳಿನ ಕಂಟಿಯಾಗುತ್ತೊ ಅಂತ. ನೆರಳು ಕೊಡೋ ಮರ ವಾದರೆ ಅದರಡಿಯಲ್ಲಿ ಮಲಗಿ ಹಾಯಾಗಿ ನಿದ್ದೆ ಮಾಡೋಣ. ರಕ್ತ ಹೀರುವ ಮುಳ್ಳಿನ ಕಂಠಿಯಾದರೆ ಬೇರು ಸಮೇತ ಕಿತ್ತು, ಸುಟ್ಟು ಬೂದಿ ಮಾಡೋಣ. ಆ ವಿಚಾರ ಬಿಡು. ಸಧ್ಯ ನಾಯಕಿ ಬರ‍್ತಾಯಿದ್ದಾಳೆನ್ನುವ ಪ್ರಜ್ಞೆಯಲ್ಲಿರು.

ವಿಕ್ರಂ– ಆ ಪ್ರಜ್ಞೆ ನನಗಿದೆ ಡ್ಯಾಡಿ. ಈ ನಾಯಕನೂ ಅವಳು ಬರುವು ದನ್ನೇ ಎದುರು ನೋಡ್ತಾಯಿದ್ದಾನೆ.

ಭೋಜರಾಜ– ಹಾಗಾದರೆ ಈ ನಿರ್ದೇಶಕ ಕಥೆ ಹೆಣೆಯಲು ಸಿದ್ಧ ನಾಗಿದ್ದಾನೆ. ಬಾ ವಿಕ್ರಂ. ಮನೆಯಲ್ಲಿ ಸಿಗುವ ಈ ಮೋಜು, ವನಜಾ ಬಂದ್ಮೇಲೆ ಸಿಗಲಾರದು. ಇನ್ನೊಂದೆರಡು ಪೆಗ್ ಹಾಕೋಣ.

ವಿಕ್ರಂ– ನಾನು ರೆಡಿ ಡ್ಯಾಡಿ. (ನಗುತ್ತಾ ಹೋಗುವರು)

## ಐದನೆಯ ದೃಶ್ಯ

### ರಸ್ತೆ

(ರಂಗ ಬರುವನು)

ರಂಗ– ಅಂತೂ ವನಜಮ್ಮಾರು ಡೆಲ್ಲಿಯಿಂದ ಊರಿಗ್ಬಂದ್ರು. ಅಬಾಬಬ ಏನ ಕೂಡಿತ್ರಿ ಜನ ? ಅವತ್ತು ಹಡೆದ ಬಾಣಂತಿಯಿಂದ ಹಿಡ್ಕೊಂಡು, ಇವತ್ತೊ ಸಾಯುವಂತ ರೋಗ ಬಡುಕೊಂಡವರು ಸೈತ ಜಮಾಯ್ಸಿದ್ರು. ಅದೂ ಸಿಜಾನೆ. ವಯಸ್ನಲ್ಲಿ ಚಿಕ್ಕವರಾದ್ರೂ, ದಯಾಗುಣದಲ್ಲಿ ದೊಡ್ಡವ ರದಾರಂತನ ಜನಾನುರಾಗ ಜಾಸ್ತಿ ಐತಿ.

(ಲಿಲ್ಲಿ ಬರುವಳು)

ಲಿಲ್ಲಿ– ಹಾಯ್ ರಂಗು!

ರಂಗ– ಬಂದೆಯಾ ವಿಧಿ ರಾಣಿ. ನಾನಿದೇ ದಾರ್‍ಯಾಗ್ಬರ್‍ತೀನಂತ ನಿನಗೇನರ ಕನಸು ಬಿದ್ದಿರುತ್ತೇನು ?

ಲಿಲ್ಲಿ– ಹೌದು ರಾಜಾ.

ರಂಗ– ಮತ್ತೇನು ಹೌದು ಅಂತಿ ಚಂಡ್ಗೇಡಿ. ನಿನ್ಸಲುವಾಗಿ ಸಾಕಾತು ನನಗ. ಯಾವ ನಮೂನಿ ಕಾಡುದದು ? ನಾ ಎಲ್ಲೆರ ಕಾಣ್ಲಿ ಜನ ಅದಾ ರನ್ನೋ ಖಬರಿಲ್ದಂಗ "ಐ ಲವ್ ಯು ರಂಗು" ಅಂತ ಒಮ್ಮಿಗೆ ತೆಕ್ಕಿ ಬಡಿ ಯಾಕ ಬರ್‍ತಿಯಲ್ಲ. ಮೊದಲ್ಲು ಪುಕ್ಕ ಮನುಷ್ಯಾ ನಾನು. ಏನ್ಕೇನರ ಆದ್ರ ಗತಿ ಏನು ?

ಲಿಲ್ಲಿ– ಮನಮೋಹನ, ಯಾಕ್ಹಿಂಗ ಮಾತಾಡ್ತಿ ? ನನ್ನ ತ್ರಾಸು ನಿನಗೇನು ಗೊತ್ತು ? ರಾತ್ರಿ ನಾ ಮಲಗಿರ್‍ತೀನಿ. ಕನಸಿನ್ಯಾಗ ನೀ ಬರ್‍ತಿ. ಬಂದವನ ನನ್ನ ಗುಲಾಬಿ ಗಲ್ಲಕ್ಕ ಮುತ್ತು ಕೊಡ್ತಿ.

ರಂಗ– ಓಂನಮಃಶಿವಾಯ. ಹೆಣ್ಣೆ.ನಾನು ಆಜನ್ಮ ಬ್ರಹ್ಮಚಾರಿ. ಯಾವ ಹೆಣ್ಣಿನ ಕನಸಿಗೂ ನಾ ಹೋಗೋಲ್ಲ. ಹೋಗಾಕ ನನಗ ಪುರ್‍ಸೊತ್ತೂ ಇರಲ್ಲ.

ಲಿಲ್ಲಿ– ಸುಳ್ಳ್ಯಾಕ್ಹೇಳ್ತಿ ? ನಿದ್ದಿ ಮಾಡಾಕ ಬಿಡ್ದಂಗ, ಕನಸ್ನ್ಯಾಗ ಬಂದು, ಗುದ್ದಿ ಗುದ್ದಿ ಎಬ್ಬಿಸ್ತಿ. ರಾತ್ರೆಲ್ಲಾ ನಿದ್ದಿಗೆಟ್ಟು ನನ್ನ ಮಾರಿ ಹೆಂಗಾ ಗೇತಿ ನೋಡಿಲ್ಲಿ ?

ರಂಗ– ನಿನ್ನ ಮಾರಿ ನೋಡಿದ್ರ ನನ್ನೇನು ಸರಳ ಕೈ ಬಿಡಂಗ ಕಾಣು ದಿಲ್ಲ. ಸಧ್ಯ ನೀನು ಪೂರಾ ಹಸ್ದಂಗ ಕಾಣ್ತಿ. ನಾನರ ಒಬ್ಬವನ ಅದೀನಿ. ಒಮ್ಮಿಗೆ ನೀ ಜಿಗದು ಬಂದು ಬಲಾತ್ಕಾರ ಮಾಡಿದ್ರ, ನನ್ನ ಶೀಲದ ಗತಿ ಏನು ?

ಲಿಲ್ಲಿ– ಏನಂದಿ! ನಿನ್ನ ಶೀಲ್ಹೋಗುತ್ತ ? ಬುದ್ದು. ನೀ ಗಂಡ್ಸದಿ.

ರಂಗ– ಗಂಡ್ಸಾದ್ರ, ಶೀಲ ಇರುದಿಲ್ಲೇನು ?

ಲಿಲ್ಲಿ– ಇದ್ರ ತೋರ್‍ಸು ನೋಡ್ತೇನಿ, ಶೀಲಾನ.

ರಂಗ– ಅಂದ್ರ, ಶೀಲಾನ ಬೀಲ್ದಾಗ ತಂದೀನಂತ ತಿಳದಿಯೇನು, ತಗದ ತೋರ್ಸಾಕ. ಗಂಡಸಿನ ಶೀಲ ಯಾವ್ದಂತ ತಿಳದಿ ?

ಲಿಲ್ಲಿ– ಗೊತ್ತಿಲ್ಲ. ಹೇಳು ಇಲ್ಲಾ ತೋರ್ಸು.

ರಂಗ– ತಾಯಿ ಪಕ್ರೇಶ್ವರಿ ತೋರ್ಸುದಲ್ಲದು, ಹೇಳುದು. ಸುಮ್ಕನ ನಿಂತ್ಕೇಳು. ಗಂಡ್ಸಿನ ಶೀಲ ಪರಹೆಣ್ಣಿನ್ನಾ ಅಕ್ಕ–ತಂಗಿ ಅಂತ ಕರೆಯೋ ಅವನ ನಾಲಿಗ್ಯಾಗಿರ್ತೇತಿ. ಅವನ ಸುತ್ತಲಿರೊ ಪರಿಸರಕ್ಕ ಕೆಟ್ಟಾಗದಂಗ, ಚಟಕ್ಕ ಬಲಿ ಯಾಗದಂಗ ಬದುಕೋದ್ರಾಗಿರ್ತೇತಿ. ಕಟ್ಕೊಂಡ ಹೇಣ್ತಿನ ಕೊರಗಿಸ್ದಂಗ ಸಂಸಾರ ಮಾಡೋದ್ರಾಗಿರ್ತೇತಿ. ಮತ್ತ...

ಲಿಲ್ಲಿ– ಸಾಕು. ಪೊದ್ಲು ನಿನ್ನ ಮಾರಿಮ್ಯಾಲ ಮೂಡಿರೋ ಮೀಸಿ, ಒರ್ಜಿನಲ್ಲೋ, ಡೂಪ್ಲಿಕೇಟೋ ಹೇಳು.

ರಂಗ– ಯಾಕ, ಒಮ್ಮೆಗೆ ನನ್ನ ಮೀಸಿ ಸುದ್ದಿ ತೆಗೆದಲ್ಲ ?

ಲಿಲ್ಲಿ– ಡೂಪ್ಲಿಕೇಟ ಆಗಿದ್ರ ಆ ಜಾಗ ಬಿಡ್ಸೋದು ವಾಸಿ ಅಂತ. ನಿನ-ನಿನ ಬುದ್ಧಿ ಎಲ್ಲಿಟ್ಟಿದಿ ? ವಯುಸ್ಸಿಗ್ಬಂದ ಹೆಣ್ಣು, ಬಯುಸಿ ನಿಸ್ಕಂದ ನಿಂತಾಗ, ಪ್ರೇಮಗೀತೆ ಹಾಡಿ ಕುಣ್ಸೋದ್ಬಿಟ್ಟು, ಜೋಗುಳ ಪದ ಹಾಡಿ ಮಲಗ್ಸಾಕ ನೋಡ್ತಿಯಲ್ಲ.

ರಂಗ– ನಾನೇನೋ ಕುಣಸ್ತಿದ್ದೆ ಆದ್ರ ನಾನಿನ್ನೂ ಆ ವಯುಸ್ಸಿಗೇ ಬಂದಿಲ್ಲಲ್ಲ.

ಲಿಲ್ಲಿ– ವಯುಸ್ಸಿಗ್ಬಂದಿಲ್ಲ ?... ನಿನ್ನ ವಯುಸ್ಸರ ಎಷ್ಟೀಗ ?

ರಂಗ– ಇಪ್ಪತ್ತೆಂಟು.

ಲಿಲ್ಲಿ– ವಯುಸ್ಸಿಗೆ ಬರಾಕ ಇನ್ನೆಷ್ಟು ವರ್ಷ ಬೇಕು ?

ರಂಗ– ಇದರ ಮ್ಯಾಲ ಇಪ್ಪತ್ತೆಂಟು.

ಲಿಲ್ಲಿ– ಅಂದ್ರ, ಐವತ್ತಾರಕ್ಕೇರುತ್ತೇನು ನಿನ್ನ ಹರೇವು ?

ರಂಗ– ಹೌದು. ಅಲ್ಲೀತನ ನಿಮಗೇನು ಪವರ್ ಸ್ಯಾಂಕ್ಷನ್ ಆಗುಂದಿಲ್ಲ.

ಲಿಲ್ಲಿ– ಒಂದ್ಸಲ ನನ್ನ ತಬ್ಬಿಕೊ. ಹುಚ್ಚೆದ್ದು ಕುಣಿವಂತ ಪವರ್ ಬರ್ತದ.

ರಂಗ– ಅಂದ್ರ, ನಿನ್ನ ಬಾಡ್ಯಾಗ ಕರೆಂಟ್ ಸ್ಪಾರ್ಕ್ ಐತೇನು ?

ಲಿಲ್ಲಿ– ಮುಟ್ಟಿ ನೋಡು ನಿನಗ ಗೊತ್ತಾಗುತ್ತ ?

ರಂಗ– ಹಂಗಾರ ಗಟ್ಟಿ ನಿಂದ್ರು ಟ್ರೈ ಮಾಡ್ತೀನಿ. (ಮುಟ್ಟಲು ಹೋಗಿ ಹಿಂದೆ ಸರಿದು) ಬ್ಯಾಡಬಿಡು ಮಾರಾಯಳ ಶಾಕ್ ಹೊಡದೀತು.

ಲಿಲ್ಲಿ– ಅಪರೂಪದ ಗಂಡು ಸಿಕ್ಕೀ ನೋಡು ನನಗ. ಗಂಡಸ್ತನನ ಇದ್ದಂಗ ಕಾಣುದಿಲ್ಲ ನಿನಗ.

ರಂಗ– ಯಾಕಿಲ್ಲ ಐತಿ. ಆದ್ರ ನಿನ್ಮ್ಯಾದ ಬರುವಲ್ಲದು.

ಲಿಲ್ಲಿ– ಇದ್ರ ನನ್ನ ಮುಟ್ಟು ಬಾರೋ ಮದನ (ಕೈ ಹಿಡಿದು ಎಳೆಯುವಳು)

–ಪದ–

(ಪದ ಮುಗಿಯುವಾಗ ರಂಗ ಕುಸಿದು ಬೀಳುವನು)

ರಂಗ– (ತಡವರಿಸುತ್ತ) ಲಿಲ್ಲಿ, ನಾನೀಗೆಲ್ಲದೇನಿ ?

ಲಿಲ್ಲಿ– ಕಣ್ಬಿಟ್ಟು ನೋಡಲ್ಲ.

ರಂಗ– ಕಣ್ಣೂ ಬಿಡಾಕ ಬರ್ದಂಗಾಗೇತೀಗ. ಲಿಲ್ಲಿ, ಮೈಯಾಗ್ಯಾಕೋ ಜುಂ ಅನ್ನಾಕ ಶುರುವಾತಲ್ಲ ?

ಲಿಲ್ಲಿ– ಗಂಡಸ್ತನದ ಸಂಕೇತದು, ಮೈಯಾಗೀಗ ಕಾವಾಗೇತಿಲ್ಲೊ ?

ರಂಗ– ಕಾವೆಲ್ಲಿದು, ಎಲ್ಲಾ ತಣ್ಣಗಾಗಿ, ಥಂಡಿ ಶುರುವಾಗೇತಿ. ಕೈಕಾಲು ಸೈತ ಸರ್ದಾಡುವಲ್ಲವು.

ಲಿಲ್ಲಿ– ನಿಂದೆಂಥಾ ಪ್ರಕೃತಿನೋ ಮಾರಾಯ. ಈಗರ ಕುಣಿಯಾಕ ಶುರು ಮಾಡಿ, ಒಮ್ಮಿಗೆ ನೆಲ ಹಿಡಿದೆಲ್ಲ. ಈಗ್ಲೆ ಇಷ್ಟು ಡೌನಾದ್ರ ಮುಂದೆಂಗಂತ ?

ರಂಗ– ಅಗದಿ ಬ್ಯಾಲೆನ್ಸಿನ ಮನುಷಾ ನಾನು. ನಡದಾಡಿದ್ರೂ ಜೋಲಿ ಹೊಡಿತೀನಿ. ಇನ್ನು ಕುಣದಾಡಿದ್ರ ಗತಿ ಏನಾಗ್‌ಬೇಡ ? ಆದರಾಗದ್ರಾಗ ಎಂದೂ ಬರದ ಹುರುಪು ಇವತ್ತು ಬರ್ಬೇಕ್ಲ ನನಗ! ಕತ್ತಿ

ಕುಣದಂಗ್ ಕುಣುದು, ದವ್ಯಾತ್ರಿ ನೆಲಕ್ ಬಿದ್ದೆ. (ಏಳಲು ಹೋಗಿ ಬಿದ್ದು) ಹೊಗನಿನ, ಏಳಾಕ್ಕ ಬರ್ದಂಗಾಗೇತಿ.

ಲಿಲ್ಲಿ– ನಾನೆಬ್ಬಸ್ಲೇನಾ ?

ರಂಗ– ಬ್ಯಾಡ. ನಿನಗ ಕೈ ಮುಗೀತಿನಿ ದೂರ ನಿಂದ್ರು. ಒಮ್ಮೆ ಮುಟ್ಟಿ ನೆಲಕ್ಕೆಡವಿದಿ. ಮತ್ತೇನರ ಮುಟ್ಟಿದಿ, ಖಾಯಂ ಮಲಗ್ತೀನಿ.

(ಮೂರ್ತಿ ಬರುವನು)

ಮೂರ್ತಿ– ದಾರಿಮ್ಯಾಲೇನ ನಡಸ್ಯಾರಲ್ಲ ಕಳ್ರು ? ಈ ಮಗ ನೋಡಿದ್ರ ನೆಲ ಹಿಡ್ದು ಕುಂತಾನ. ಇಕಿ ನೋಡಿದ್ರ ಶಿಲಾಬಾಲಿಕೆ ಪೋಜು ಕೊಟ್ಟು ನಿಂತಾಳ. ಏನ್ನು ಗದ್ಲಾಗೇತಿಲ್ಲಿ. ಯಾಕಲೆ ರಂಗ ಏನಾತು ?

ರಂಗ– ನನೇನೂ ಕೇಳಬ್ಯಾಡ. ನಿಂತಾಳ ನೋಡಲ್ಲಿ ಮಳ್ಳಿ. ಆಕಿನ್ನ ಕೇಳು.

ಮೂರ್ತಿ– ಏನಾತೆ ಲಿಲ್ಲಿ ?

ಲಿಲ್ಲಿ– ಯಾಕಲೇ ಹೈವಾನ್ ? ಏನೇ ಲಿಲ್ಲಿ ಅಂತ ಏಕವಚನದಾಗ ಕರಿತಿಯಲ್ಲ ? ಬಾಯಾಗ ಗೂಟ ಬಡದೇನು, ನೆಟ್ಟಗ್ಮಾತಾಡು.

ಮೂರ್ತಿ– ನೆಟ್ಟಗೇನು ಮಾತಾಡ್ತಾರೇ ಸೋಗಲಾಡಿ. ಪಾಪ! ನೆಲ ಹಿಡ್ದು ಕುಂತಾನಲ್ಲ. ಏನ್ಮಾಡಿದಿ ಖರೆ ಹೇಳು. ಮೊದಲ್ನ ಬಾಯಿಸತ್ತ ಹುಡುಗದು. ನಿನ್ನ ವಯಸ್ಸೇನು, ಇವನ ವಯಸ್ಸೇನು ? ಸ್ವಲ್ಪರ ತಿಳಿತೇತಿಲ್ಲ ನಿನಗ ?

ರಂಗ– ಈ ಮಗಾ ಹೊಸ ಗತ್ತು ಎಬ್ಬಿಸಿದ. ಇನ್ನೂ ಹಾಲು ಕುಡಿಯೋ ಕೂಸಂತ ತಿಳಿದಾನ ನನ್ನ.

ಮೂರ್ತಿ– ನೀನೇನರ ಮಾಡುವಂಗಿದ್ರ ನನಗ್ಯಾಕ ತಡ್ಕೊಂತೀನಿ.

ಲಿಲ್ಲಿ– ಮೂರ್ತಿ, ಇದು ನಿನಗ ಸಂಬಂಧಿಲ್ಲದ ವಿಷಯ. ತಲಿ ಕೆಡಸ ಬ್ಯಾಡ ಸುಮ್ಮನೋಗು.

ಮೂರ್ತಿ– ನೀನೂ ಅಷ್ಟ. ನನ್ನ ತಲಿ ಕೆಡಸಬ್ಯಾಡ. ಏನು ನಡೀತಂತ ಸರಳ್ಹೇಳು, ಇಲ್ಲಾಂದ್ರೆ ನಿನ್ನ ಮೂಗು ಕೊಯ್ದು ಹಣಿಗ್ಹಚ್ತೀನಿ.

ಲಿಲ್ಲಿ– ಏನಂದಿ ? ಮೂಗು ಕೊಯ್ತಿಯಾ ? (ಸೆಡ್ಡು ಹೊಡೆದು) ನಿಮ್ಮಪ್ಪಗ ಹುಟ್ಟಿದ್ರೆ ಮುಟ್ಟುಬಾರಲೇ ನೋಡ್ತಿನಿ. ನಿನ್ನ ನಾಲಿಗೆ ಕಿತ್ತು ನಾಯಿಗಾಕ್ಹದಿದ್ರ ನಾನು ಹೆಣ್ಣ ಅಲ್ಲ. (ಮತ್ತೆ ಸೆಡ್ಡು ಹೊಡೆದು) ಬಾರಲೇ ಬಾ.

ರಂಗ– ಇವರ ಪ್ರಕರಣ ಭಾರತ–ಪಾಕಿಸ್ತಾನದ ಗಡಿ ಸಮಸ್ಯೆಗೆ ಬಿದ್ದಂಗಾತು. ಈ ಮಗ ಮೂಗು ಕೊಯ್ತಿನಿ ಅಂತಾನ, ಇಕಿ ನಾಲಿಗಿ ಕೀಳ್ತಿನಿ ಅಂತಾಳ. ಇಬ್ರೂ ತಲಿ ಕೆಟ್ಟವರ ಅದಾರ. ಇಲ್ಲೇ ಇದ್ದು ಇವರ ಕೈಗೆ ಸಿಕ್ರ, ನಂದೇನೇನು ಕೀಳ್ತಾರೋ ಯಾರಿಗ್ಗೊತ್ತು! ಯೋ ನಿವೌರ ಕುಸ್ತಿಸರ ಹಿಡಿರಿ ನೋಡ್ತಿನಿ.

ಮೂರ್ತಿ– ಅಂದ್ರ, ಇಕಿ ಕೈಯಾಗ ಕಟಿಸೇ ಕಳ್ಸೋ ವಿಚಾರ್ಯೆತೇನು ?

ರಂಗ– ಇಕೇನು ಕಟಿತಾಳಲೆ. ಹೇಳಿ ಕೇಳಿ ಹೆಣ್ಣು ?

ಮೂರ್ತಿ– ನೀನಿನ್ನೂ ಹೆಣ್ಣಿನ ಕೈಯಾಗ ಸಿಕ್ಕಿಲ್ಲ ಮಗನೆ. ಸಿಟ್ಟು ಬಂದು ಜಗಾ ನೋಡಿ ಕಟದ್ರ, ಆರು ತಿಂಗ್ಳು ಹಾಸಿಗಿನ ಹಿಡಿಬೇಕು.

ರಂಗ– ಆ ನಮೂನಿ ಕಟಿತಾರ ?

ಮೂರ್ತಿ– ಅವರಿದ್ದನ ಅಂಗಿರ್ತಾವು. ಸಧ್ಯ ನೀನೀಗ ನೆಲ ಹಿಡ್ದು ಕುಂತಿದ್ದೆಲ್ಲ, ನಿನಗ್ಯಾವ ಹಿಡ್ತದಾಗ ಕಟದಿದ್ಲು ?

ಆ ಹಿಡ್ತನ ಬ್ಯಾರಿತ್ತು ಬಿಡಲೆ. ಎಷ್ಟು ಕಟದ್ರೂ ನನಗೇನು ನೋವಾಗ್ಲಿಲ್ಲ. ಪುಷ್ಪಕ ವಿಮಾನದಾಗ ತೇಲಿದಂಗಾತು ನನಗ.

ಮೂರ್ತಿ– ಈ ಮಗನಿಗೆ ಮತ್ತು ಬರುವಂತ ಹಿಡ್ತದಾಗ್ಹ ಕಟದಾಳ ಬೇವರ್ಸಿ.

ಲಿಲ್ಲಿ– ಬೇವರ್ಸಿ ಅನಬ್ಯಾಡೋ ಮಗನ.

ಮೂರ್ತಿ– ನೀನೂ ಮಗಾಪಗ ಅನಬ್ಯಾಡ. ನನಗೇನರ ಸಿಟ್ಟು ಬಂತಂದ್ರ...

ರಂಗ– ಮೂಗು ಕೊಯ್ತಾನ.

ಮೂರ್ತಿ– ಸುಮ್ನಿರಲೆ...

ರಂಗ– ಏನು ಸುಮ್ನಿರ್ತಿಯಾ ? ಒಂದಳತಿ ಶುರು ಹಚ್ಚಿದಿ. ಸಿಟ್ಟು ಬಂತಂದ್ರ ಹಂಗ್ಮಾಡ್ತೀನಿ, ಹಿಂಗ್ಮಾಡ್ತೀನಿ ಅಂತ. ನಾನೂ ಈಗ್ಬಂದಿತು, ಆಗ್ಬಂದೀತಂತ ನೋಡೇ ನೋಡ್ತೀನಿ. ಒಟ್ಟ ಬರುವಲ್ದದು ಸಿಟ್ಟು.

ಮೂರ್ತಿ– ಅಂದ್ರ, ಇಷ್ಟು ದಿವ್ಸ ನನ್ನ ಸಿಟ್ಟು ನೋಡಿಲ್ಲೇನು ? ಇವತ್ತು ನೋಡಂಗಾರ. ಬಾರೆ ಬಿಂಕದ ಹೆಣ್ಣೆ, ಇವತ್ತು ನಿನಗೊಂದು ಗತಿ ಕಾಣ್ಸ ಕೈ ಬಿಡ್ತೀನಿ.

ಲಿಲ್ಲಿ– (ಬಳೆ ಏರಿಸುತ್ತಾ) ನಾ ತಯಾರಾಗೇ ನಿಂತೀನಿ. ಮುಂದ್ಕರ ಬಾರೋ ಗಂಡ್ಸ.

ರಂಗ– ಇದು ಡೇಂಜರ್ ಪೊಜಿಷನ್ನಿಗೇ ಬಂತು. ಇವರೌರ ಹೊಡದಾಡಿ ಸಾಯ್ಲಿ. (ಓಡುವನು)

ಮೂರ್ತಿ– ಲೇ ಮಗನ ರಂಗ್ಯಾ, ಒಬ್ಬನ್ನ ಬಿಟ್ಹೋಕ್ಕಿಯಲ್ಲಲೇ... (ಓಡಿ ಹೋಗುವನು)

ಲಿಲ್ಲಿ– ಬಾರಲೇ ಮೂರ್ತಿ. ನನ್ನ ಕೈರುಚಿ ಇನ್ನೊಮ್ಮೆ ತೋರಿಸ್ತೀನಿ. ಅಲ್ಲಾ, ಈ ರಂಗೂಗೇನ್ಮಾಡ್ಬೇಕಾತಂತೀನಿ. ಒಟ್ಟ ಕೈಗೆ ಸಿಗವಲ್ಲ. ಅದ್ರೂ ಅವನ್ನ ಬಿಡಲ್ಲ ಬೆನ್ಹತ್ತೀನಿ. (ಹೋಗುವಳು)

(ಭೋಜರಾಜನಿಗೆದುರಾಗಿ ವಿಕ್ರಂ ಅವಸರದಲ್ಲಿ ಬರುವನು)

## ಆರನೆಯ ದೃಶ್ಯ

## ಉದ್ಯಾನವನ

(ರಂಗ ಒಂದು ಕಡೆ ನಿಂತಿದ್ದಾನೆ. ವನಜ ಟೈಂ ನೋಡಿಕೊಳ್ಳುತ್ತಾ ತಿರುಗಾಡುತ್ತಿದ್ದಾಳೆ)

ವನಜ– ರಂಗಣ್ಣ. ಅರವಿಂದ್ರೇಕೊ ಇಷ್ಹೊತ್ತಾದ್ರೂ ಬರ್ಲಿಲ್ಲವಲ್ಲ ?

ಮೊದಲ್ಲ ಡಾಕ್ಟರವರು. ಯಾವ್ದರ ಅಪ್ರೇಷನ್ ಕೇಸ್ ಬಂದಿರ್ಬೇಕು. ಅದಕ ತಡ ಆಗೇತಿ.

ವನಜ– ರಂಗಣ್ಣ, ಅರವಿಂದರ ಬಗ್ಗೆ ನಿಮ್ಮ ಅಭಿಪ್ರಾಯವೇನು ?

ರಂಗ– ದೊಡ್ಡ ಪಂಡಿತಗ ಕೇಳಿದ್ರಿ ನೀವು. ಅಲ್ರಿ, ಸಂದ್ಯಾ ನನಗ ತಿಳಿವಲ್ದು. ಇನ್ನು ಆ ಡಾಕ್ಟ್ರದೇನು ತಿಳಿಬೇಕು.

ವನಜ– ನನಗವರ ಪರಿಚಯವಾದಂದಿನಿಂದ ನೀನೂ ಅವರ ಜೊತೆಗಿದ್ದಿಯಾ ಅಂದಾಗ, ಅವರ ಸ್ವಭಾವ ಸ್ಟಡಿ ಮಾಡಿಲ್ವೆ ನೀನು ?

ರಂಗ– ಮಾಡೇನ್ರಿ, ಸಧ್ಯ ತೋರಸ್ತೀನಿ. (ಆ ಕಡೆ ಈ ಕಡೆ ನೋಡಿ) ನನ್ನ ತಲಿಯಾಗೀಗ ಯಾವ ವಿಚಾರ ಬಂದಿದೆ ಗೊತ್ತೈನ್ರಿ ?

ವನಜ– ನನಗೇನು ಗೊತು ?

ರಂಗ– ಗೊತ್ತು ಮಾಡ್ತೀನೀಗ.

ವನಜ– ಅಂದ್ರೆ ?

ರಂಗ– ನಿಮ್ಮನ್ನ ರೇಪ್ ಮಾಡ್ತೀನಿ.

ವನಜ– ರಂಗಣ್ಣ, ನಿನಗೇನು ತಲೆ ಕೆಟ್ಟಿದೆಯೇನು ?

ರಂಗ– ಹೌದು. ನಿನ್ನಲುವಾಗಿ ಪೂರಾ ತಲೆಕೆಟ್ಟದೆ. ಬಾಳ ದಿನದಿಂದ ನಿನ್ನ ಮ್ಯಾಲ ಕಣ್ಣಿತ್ತು ನನಗ. ಆದ್ರ, ಕಾಲ ಕೂಡಿ ಬಂದಿದ್ದಿಲ್ಲ. ಇವತ್ತದಕ ಕಾಲ ಕೂಡೇತಿ. ತಕರಾರು ಮಾಡದಂಗ, ಸುಮ್ಮನ ನನ್ನಾಸೆ ತೀರಿಸು ಬಾ ನನ್ನ ರಾಣಿ. (ಹಿಡಿಯಲು ಹೋದಾಗ ಕಪಾಳಕ್ಕೊಡೆಯುವಳು)

ವನಜ– ಚಂಡಾಲ, ನನ್ನ ಕೆಡಸಾಕ ಬರ್ತಿಯೇನೋ!

ರಂಗ– ಕಟದ್ರಿಲ್ಲೊ. ಹಿಂಗಿರುತ್ತ ನೋಡ್ರಿ ಮನುಷ್ಯನ ಸ್ವಭಾವ. ಹೊತ್ತ ನೋಡಿ ಹೊಡ್ತ ಹಾಕುತ್ತ. ಈಗ ನಾವೂ ನಿಮ್ಮೊಡ ಖಾಯಂ ಇರ್ತೀನಿಲ್ಲೊ.

ವನಜ– ಇರ್ತಿಯಾ.

ರಂಗ– ಹಂಗಾರ ನನ್ನ ಸ್ವಭಾವ ಇಂಗ್ಹ ಐತೆಂತ ನಿಮಗ್ಯಾಕ ತಿಳಿಲಿಲ್ಲ.

ವನಜ– ಈ ಪ್ರಶ್ನೆಗೆ ಏನಂತ ಉತ್ತರಿಸಬೇಕೋ ನನಗಂತೂ ತಿಳಿತಿಲ್ಲ.

ರಂಗ– ನಿಮಗ್ಯಾಕ, ಯಾರಿಗೂ ತಿಳಿದಿಲ್ರಿ. ಸ್ವಭಾವ ಬೂದಿ ಮುಚ್ಚಿದ ಕೆಂಡದಂಗ್ರಿ. ಸಮಯ, ಸಂದರ್ಭಕ್ಕ ಬಣ್ಣ ಬದಲಾಯಿಸ್ತಿರತೇತಿ ಕೆಲವರ ಸ್ವಭಾವ ಕಣ್ಣಿಗೆ ಸೊಗಸಾಗಿ ಕಂಡ್ರೂ, ಮನಸ್ಸು ಮಾತ್ರ ಬುಸುಗುಡೋ

ಸರ್ಪವಾಗಿ ಹರದಾಡುತ್ತಿರುತ್ತ. ಹಂಗ, ಅರವಿಂದರ ಸ್ವಭಾವ ಅರಳಿದ ಹೂವಿನಂಗ ಕಂಡ್ರೂ. ಮನಸ್ಸ, ಹಾವಾಗಿ ಹರದಾಡ್ತಿದ್ರ ಏನ್ಮಾಡ್ತಿರಿ ? ಯಾಕಂದ್ರ ಮನಸ್ಸು ಮಂತ್ರ ದಂಡಿದ್ದ್ಹಾಂಗ. ಹೂವಾಗಿ ಸುವಾಸ್ನೆನೂ ಕೊಡ್ತದ, ಹಾವಾಗಿ ಪ್ರಾಣಾನೂ ಹೀರುತ್ತ. ಇದು ಆ ವ್ಯಕ್ತಿನ ನಂಬಿರೋ ನಿಮ್ಮ ಹಣೆಬರಕ ಬಿಟ್ಟಿದ್ದು.

ವನಜ– ನಾ ಕೇಳಿದ ಸಣ್ಣ ಪ್ರಶ್ನೆಗೆ. ದೊಡ್ಡ ತತ್ವಾನೇ ಹೇಳಿದೆಲ್ಲ.

ರಂಗ– ಇದು ಸಣ್ಣ ಪ್ರಶ್ನೆ ಅಲ್ರಿ, ಇದು ದೊಡ್ಡ ಪಂಡಿತರಿಗೂ ಗದ್ಲಕ್ಕ ಕೆಡುವುತ್ತ.

(ಅರವಿಂದ ಬರುವನು)

ಅರವಿಂದ– ಏನಪಾ ರಂಗಣ್ಣ, ಪಂಡಿತನ ಸುದ್ದಿ ತಗು[illegible]

ರಂಗ– ಏನಿಲ್ರಿ, ವನಜಮ್ಮಾರಿಗೆ ಸಣ್ಣ ಸಮಸಿ. ತಲಿ ಕೆಡಿಸೇತ್ರಿ.

ಅರವಿಂದ– ಯಾವ ಸಮಸ್ಯೆ ?

ರಂಗ– ನಾಯಿ ಬಾಲಕ್ಕ ಡಬ್ಬಿ ಕಟ್ಟಿದ್ರೂ ನೆಟ್ಟಗಾಗಲ್ಲಲ್ಲ, ಅದಕ್ಕೇನು ಮಾಡ್ಬೇಕು ? ಅಂದ್ರು.

ಅರವಿಂದ– ನೀನೇನು ಹೇಳಿದೆ ?

ರಂಗ– ನೆಟ್ಟಗಾಗಲ್ಲ ಅಂದ್ಮೇಲೆ. ಅದನ ಕಟ್ ಮಾಡೋದೇ ಛಲೋ ಅಂತ ಹೇಳ್ದೆ.

ಅರವಿಂದ– (ತಡವರಿಸಿ) ಆಂ... ವನಜ ಏನೇಳ್ತಾನಿವನು ?

ವನಜ– ಅವನಿಗೇ ಗೊತ್ತದು, ನಾ ಕೇಳಿದ್ದೊಂದು, ಇವನು ಹೇಳ್ತಿರೋದೊಂದು.

ಅರವಿಂದ– ನನಗಂತೂ ಈ ಮಹಾನುಭಾವನ ಮಾತೇ ಅರ್ಥವಾಗೋದಿಲ್ಲ.

ರಂಗ– ಖರೆ ಐತ್ರಿ ನಿಮ್ಮಾತು. ನನ್ನಂತ ಬುದ್ಧಿವಂತ ಬಡವ, ಶ್ರೀಮಂತರ ಮುಂದ ನಿಂತು, ಹಸಿವಾಗಿದೆ ಅಂತ ಅತ್ತರ, ಹೇಸ್ಗಿ ತಿಂದು ಬದುಕ್ಕೋಗು ಅಂತಾರ. ಬಡವನ ಸತ್ಯ ಶ್ರೀಮಂತರ ಕಾಲಾಗಿನ ಕೆರ ಆಗ್ಬಿ

ಟ್ಟೆತ್ರಿ. ಬರ್‍ತ್ನಿ. ಇಲ್ಲೆ ನಿಂತ್ರ ಬೈಕ್ಕಿಲ್ಲದ ಬಾಯಿ ಒದರ್‍ಕೊಂತನ ಇರ್‍ತ್ತೇತಿ, (ಹೋಗುವನು)

ಅರವಿಂದ– ವಿಚಿತ್ರ ಮನುಷ್ಯ

ವನಜ– ಆದರೂ ವಿಚಾರವಂತ.

ಅರವಿಂದ– ಅವನ ಸುದ್ದಿ ಬಿಡು ಚಿನ್ನ. ಸಧ್ಯ ಡೆಲ್ಲಿಯಿಂದ ಬಂದವಳು, ಈ ಬಡಪ್ರೇಮಿಯನ್ನು ಮರೆಯದೆ, ಬೆರೆಯಲು ಬಂದಿರುವಿಯಲ್ಲ ?

ವನಜ– ಮರೆಯುವಷ್ಟು ತುಚ್ಛಳಾಗಿ ಕಾಣ್ತ್ತೇನು ?

ಅರವಿಂದ– ಛೆಛೇ, ತುಚ್ಛಳಾಗಿ ಕಾಣ್ತೆ ಅಂತ ಹೇಳಲಿಲ್ಲ. ನಿನ್ನ ಗುಂಗಿನಲ್ಲಿ ನಾನಷ್ಟು ಹುಚ್ಚನಾಗಿದ್ದನ್ನು ಹೇಳಿದೆ. ನಿನ್ನ ಪ್ರೀತಿಯ ಬಲೆಯಲ್ಲಿ ಬಿದ್ದು ನಿಯಂತ್ರಣ ತಪ್ಪಿದ ಗೊಂಬೆಯಾಗಿದ್ದೇವೆ. ಕುಳಿತರೆ ಮನ ಕಲಕುವ ನಿನ್ನ ರೂಪ, ನಿಂತರೆ ನಿಲುವಿನ ಆಯಾವನ್ನೇ ತಪ್ಪಿಸುವ ನಿನ್ನ ಕಣ್ಣೋಟ. ಮಲಗಿದರೆ ಮತ್ತೆ ಮತ್ತೆ ಮರುಕಳಿಸುವ ಈ ನಿನ್ನ ಹೂನಗೆ ಒಟ್ಟು ನನ್ನ ಮನಸ್ಸನ್ನು ಕಟ್ಟಿಹಾಕಿಬಿಟ್ಟದೆ ಈ ನಿನ್ನ ಮುದ್ದು ಮುಖ.

ವನಜ– ಗಂಡಸಾದ ನಿಮ್ಮ ಸ್ಥಿತಿನೇ ಹೀಗಿರುವಾಗ, ಹದಿನೈದು ದಿನ ನಿಮ್ಮನ್ನಗಲಿ ಡೆಲ್ಲಿಯಲ್ಲಿದ್ದ ಈ ಹೆಣ್ಣಿನ ಪರಿಸ್ಥಿತಿ ಏನಾಗಿರಬಹುದೆಂದು ನೀವೇ ವಿಚಾರ ಮಾಡಿ.

ಅರವಿಂದ– ನನ್ನನ್ನೆಷ್ಟು ಪ್ರೀತಿಸುತ್ತಿರುವಿಯೆಂದು ನನಗ್ಗೊತ್ತು ವನಜ. ಆದರೆ ಮುಂದಾಗುವ ಆಘಾತದ ಅರಿವಿಲ್ಲದೆ ತಪ್ಪು ಮಾಡ್ತಿರುವಂತ ಭಾಸವಾಗ್ತಿವೆ.

ವನಜ– ಯಾಕರವಿಂದ್ ವಿಚಿತ್ರವಾಗಿ ಮಾತಾಡ್ತೀರಿ.

ಅರವಿಂದ– ಹೌದು ವನಜ. ಗಿಡದಲ್ಲರಳಿದ ಗುಲಾಬಿ ಹೂವಿಗೂ, ಅಕ್ಕಸಾಲಿಯಿಂದ ಅರಳಿದ ಬಂಗಾರದ ಹೂವಿಗೂ ಬಹಳ ಅಂತರವಿದೆ.

ವನಜ– ಅಂದ್ರೆ ?

ಅರವಿಂದ– ನಿಸರ್ಗ ನೇಮದಿಂದ ಅರಳಿದ ಗುಲಾಬಿ ಹೂವನ್ನು ಆಸೆಪಟ್ಟವರು ಭಯವಿಲ್ಲದೆ ಕಿತ್ಕೊಳ್ಳಬಹುದು ಆದ್ರೆ ಅಕ್ಕಸಾಲಿಯಿಂದ ಅರಳಿದ ಬಂಗಾರದ ಹೂವನ್ನು ಆಸೆ ಪಟ್ಟವರು ಅಷ್ಟು ಸುಲಭವಾಗಿ ದಕ್ಕಿಸಿಕೊಳ್ಳಲು

ಸಾಧ್ಯವಿಲ್ಲ. ಯಾಕಂದ್ರೆ, ಆ ಹೂವು ಅಕ್ಕಸಾಲಿಗೆ ದುಡ್ಡು ಕೊಟ್ಟು ಮಾಡಿಸಿದವರ ಆಧೀನದಲ್ಲಿರುತ್ತದೆ. ಮತ್ತೊಬ್ಬರು ಹಕ್ಕು ಚಲಾಯಿಸದಷ್ಟು ಭದ್ರವಾಗಿರುತ್ತದೆ.

ವನಜ– ನಾನೀಗ ನಿಮ್ಮ ದೃಷ್ಟಿಯಲ್ಲಿ ಬಂಗಾರದ ಹೂವೇ ?

ಅರವಿಂದ– ಹೌದಲ್ವೊ... ನೀನೇ ವಿಚಾರ ಮಾಡು. ನಿನ್ನನ್ನು ಬಂಗಾರದ ಹೂವಾಗಿ ಅರಳಿಸಿ, ಬೆಳೆಸಿದವರು ನಿನ್ನ ಸೋದರ ಮಾವ ಭೋಜರಾಜರು. ಅಂದಾಗ, ತಮ್ಮ ಮಗನಿಗೆ ಕೊಡುವ ವಿಚಾರ ಇಟ್ಕೊಂಡೇ ಅರಳಿಸಿರಬೇಕಲ್ಲವೇ ?

ವನಜ– ನಿಮ್ಮ ಕಲ್ಪನೆ ತಪ್ಪಾಗಿದೆ. ನಾನು, ಅವರ ಮಗ ವಿಕ್ರಂ ಬಾಲ್ಯದಿಂದ ಕೂಡಿ ಆಡಿ ಬೆಳೆದವರು. ಹೀಗಾಗಿ ನನಗವನ ಮೇಲೆ ಸೋದರ ಮಮತೆ ಇದೆಯೇ ಹೊರತು, ಮದುವೆಯಾಗುವ ಮನಸ್ಸಿಲ್ಲ. ಇದಲ್ಲದೆ ನಮ್ಮಿಬ್ಬರ ಮದುವೆ ವಿಷಯವಾಗಿ ನಮ್ಮಾವನವರು ಇದುವರೆಗೂ ಚಕಾರವೆತ್ತಿಲ್ಲ. ಒಂದ್ವೇಳೆ ಆ ವಿಚಾರ ಇದ್ರೂ ನಮ್ಮಿಬ್ಬರ ಪ್ರೇಮದ ವಿಷಯ ತಿಳಿದ್ರೆ ಖಂಡಿತ ನನ್ನಾಸೆಗೆ ಅಡ್ಡ ಬರೋಲ್ಲವರು.

ಅರವಿಂದ– ನನ್ಮೇಲೆ ಅಷ್ಟೊಂದು ಪ್ರೀತಿಯಿದೆಯೇ ?

ವನಜ– ನಿಮಗನುಮಾನವಿದೆಯೇನು ?

ಅರವಿಂದ– ಅನುಮಾನ... ಅನಿವಾರ್ಯ

ವನಜ– ನಾನಿಷ್ಟು ಬಿಚ್ಚಿ ಹೇಳಿದ್ರೂ ಅನುಮಾನವೇ ?

ಅರವಿಂದ– ಹೌದು ವನಜ. ನಿನ್ನಾಸ್ತಿಯನ್ನು ದಕ್ಕಿಸಿಕೊಳ್ಳುವ ಆಸೆ ಇದ್ದವರು, ನಿನ್ನನ್ನು ನನ್ನಿಂದ ದೂರ ಮಾಡಬಹುದೆಂಬ ಸಂಶಯ ಕಾಡ್ತಾಯಿದೆ.

ವನಜ– ಅರ್ಥವಾಯ್ತು. ನಮ್ಮಾವನ ಬಗ್ಗೆ ಸಂಶಯವಿದೆ ನಿಮಗೆ. ಇದರ ನಿವಾರಣೆಗಾಗಿ ಅವರೆದುರಲ್ಲೇ ನನ್ನಾಸ್ತಿಯನ್ನು ನಿಮ್ಮೆಸರಿಗೆ ಮಾಡಸ್ತೀನಿ. ಸರಿ ತಾನೆ ?

ಅರವಿಂದ– ಆಸ್ತಿಯ ಆಸೆ ನನಗಿಲ್ಲ. ಅದು ನಿನ್ನೆಸರಿಗಿದ್ರೇನು, ನನ್ನೆಸರಿಗಿದ್ರೇನು ಒಟ್ನು ನಿನ್ನ ನಂಬಿಕೆ ಸುಳ್ಳಾಗದಿದ್ರೆ ಸಾಕು.

ವನಜ– ಆ ನಂಬಿಕೆಯ ಸತ್ವ ಪರೀಕ್ಷೆಗಾಗಿಯಾದರೂ ನೀವು ನನಗೆ ತಾಳಿ ಕಟ್ಟುವ ಮುನ್ನ ನನ್ನಾಸ್ತಿಗೆ ಒಡೆಯರಾಗ್ಬೇಕು. ಇದರಿಂದ ನಿಮ್ಮ ಸಂಶಯವೂ ನಿವಾರಣೆಯಾಗುತ್ತದೆ, ನನ್ನ ಮನಸ್ಸಿಗೂ ನೆಮ್ಮದಿಯಾಗುತ್ತದೆ. ಒಪ್ಪಿಗೆ ತಾನೆ ?

ಅರವಿಂದ– ವನಜ, ನನಗೆ ಆಸ್ತಿ ಮೇಲೆ ಆಸೆ ಇಲ್ಲ...

ವನಜ– ನನಗ್ಗೊತ್ತಿದೆ. ಆದ್ರೆ ನನ್ನ ನಂಬಿಕೆಯ ನಿರ್ಧಾರಕ್ಕಾದ್ರೂ ನೀವಿದಕ್ಕೆ ಒಪ್ಲೇಬೇಕು.

ಅರವಿಂದ– ಆದ್ರೂ ವನಜ...

ವನಜ– ಒಪ್ಪದಿದ್ರೆ ನನ್ನಾಣೆಯಾಗಿದೆ.

ಅರವಿಂದ– ಛೆ ಛೇ, ಏನ್ಮಾಡ್ಬಿಟ್ಟೆ ವನಜ. ಆಣೆಯಿಟ್ಟು ಇಕ್ಕಟ್ಟಿನ ಪರಿಸ್ಥಿತಿಗೆ ಸಿಕ್ಕಿಸಿಬಿಟ್ಟೆಯಲ್ಲ. ಆಯ್ತು ನಿನ್ನ ಮನಸ್ಸಿನ ಆನಂದಕ್ಕಾಗಿ ಯಾದ್ರೂ ಒಪ್ಕೊಳ್ತೀನಿ.

ವನಜ– ಈಗ ಮನಸ್ಸು ಹಗುರಾಯ್ತು

-ಪದ-

(ಪದ ನಡೆಯುವಾಗಲೇ ರಂಗ ಬರುವನು)

ರಂಗ– ಕಟ್! ಫಸ್ಟ್ ಶಾಟ್ ಮುಗಿಯಿತು, ನೆಕ್ಸ್ಟ್ ಶಾಟ್‌ಗೆ ರೆಡಿಯಾಗ್ರಿ.

ಅರವಿಂದ– ಇಷ್ಟು ಬೇಗ ಯಾಕ ಬಂದೆಪಾ ?

ರಂಗ– ವನಜಮ್ಮಾರ, ದೊಡ್ಡಾವ, ಸಣ್ಣಾವರು ಬರ್‍ತಾ ಅದಾರ್‍ರಿ.

ವನಜ– ಮಾವನವರು ಬಂದ್ರಾ... ?

ಅರವಿಂದ– ವನಜ ನಾನು...

ವನಜ– ಗಾಬರಿಯಾಗ್ಬೇಡಿ. ಈ ವಿಷಯ ಇಂದಲ್ಲ ನಾಳೆ ಅವರಿಗೆ ಗೊತ್ತಾಗ್ಲೇ ಬೇಕು. ಅದಿವತ್ತೇ ಗೊತ್ತಾಗ್ಲಿ.

ರಂಗ– ಇವರ ಮಾತು ಖರೇರಿ. ಲವ್ವಿನ ಕೇಸು ದೌಡ್ ಪಬ್ಲಿಕ್ ಆಗಿ

ಬಿಡ್ಬೇಕು. ಇಲ್ಲಾಂದ್ರೆ ಮುಂದ ಬಾಳ ಡೇಂಜರು.

(ಭೋಜರಾಜ ವಿಕ್ರಂ ಬರುವರು)

ಭೋಜರಾಜ– ವನಜ...

ವನಜ– ಬನ್ನಿ ಮಾವ, ಇವರು...

ಭೋಜರಾಜ– ಡಾ॥ ಅರವಿಂದಂತ ನನಗೊತ್ತಮ್ಮ.

ಅರವಿಂದ– ಸಾರ್ ನಾನು...

ಭೋಜರಾಜ– ನೀವೇನೂ ಹೇಳ್ಬೇಕಾಗಿಲ್ಲ ಡಾಕ್ಟ್ರೆ. ನನ್ನ ಸೂಕ್ಷ್ಮ ಮಿದುಳು ಎಲ್ಲವನ್ನೂ ಗ್ರಹಿಸುತ್ತದೆ. ನನ್ನನ್ನು ಕಂಡಾಗ ಗೌರವದಿಂದ ಕೈ ಮುಗಿಯುವ ನೀವು, ನನ್ನ ಸೊಸೆಯನ್ನು ಮದುವೆ ಆಗ್ತೀನಿ ಅಂತ ಒಂದ್ಮಾತು ತಿಳಿಸಿದ್ರೆ, ಇಷ್ಟೊತ್ತಿಗೆ ವರ್ಷದ ಮಗು, ನಮಗೆ ಹರ್ಷ ತರಲು ಈ ಭೂಮಿಗೆ ಬಂದಿರ್ತಿತ್ತು.

ಅರವಿಂದ– ನೀವು ತುಂಬಾ ತಮಾಷೆಯಾಗಿ ಮಾತಾಡ್ತಿರಿ ಸಾರ್.

ರಂಗ– ಆ ತಮಾಷ್ಯಾಗೆಂಥಾ ಗೂಟೈತಂತ ಈ ಮಗನಿಗೆ ಗೊತ್ತೇ ಇಲ್ಲ.

ವನಜ– ಮಾವ, ನಾನಿವರನ್ನು ಮದುವೆಯಾಗುವ ವಿಷಯ...

ಭೋಜರಾಜ– ನನಗ ವಿಷವಾಗ್ಬಹುದಂತ ತಿಳಿದಿದ್ದಿಯೇನಮ್ಮ? ಖಂಡಿತ ಇಲ್ಲಮ್ಮ. ಬುದ್ಧಿವಂತೆಯಾದ ನನ್ನ ಸೊಸೆ, ಹದ್ದು ಮೀರುವುದಿಲ್ಲ ವೆಂದು ನನಗೊತ್ತಿದೆಯಮ್ಮ. ನನ್ನ ಕಣ್ಣು ತಪ್ಪಿಸಿ ಬಂದಿದ್ದ ಈ ಮುದ್ದಿನ ಪಾರಿವಾಳ, ಗಿಡುಗನ ಬಾಯಿಗೆ ಸಿಕ್ಕಿರಬೇಕೆಂದು ಗಾಬರಿಯಾಗಿದ್ದೆ. ಆದ್ರದು ನನ್ನಿಚ್ಛೆಯ ಹುಡುಗನ ಬಲೆಯಲ್ಲಿ ಬಿದ್ದಿರುವುದನ್ನು ಕಂಡು, ಹಾಲು ಕುಡಿ ದಷ್ಟು ಸಂತೋಷವಾಗಿದೆಯಮ್ಮ.

ವಿಕ್ರಂ– ಹೌದು ವನಜ. ನಿನ್ನ ಶ್ರೇಯಸ್ಸೇ ನಮ್ಮ ಶ್ರೇಯಸ್ಸು. ನಗು ವಿನ ಕಾಂತಿಯಿಂದ ಸದಾ ಮಿನುಗುತ್ತಿರಬೇಕು ಈ ನಿನ್ನ ಮುಖ. ಅದೇ ನಮಗೆ ಪರಮ ಸುಖ.

ರಂಗ– ಇನ್ನ ಈ ಮಗ ಶುರುಮಾಡಿದ ಥೈಲಾಗ. ನನಮಕ್ಕು ಚಂದ ಪ್ರಾಕ್ಟೀಸ್ ಮಾಡಿಕೊಂಡೇ ಬಂದಾರ.

ವಿಕ್ರಂ– ಡ್ಯಾಡಿ, ಸುಮ್ಮನ ಮಾತು ಬೆಳೆಸಿ, ಕಾಲ ಯಾಕ ದಂಡ ಮಾಡ್ತೀರಿ. ಆದಷ್ಟು ಬೇಗ ಮುಹೂರ್ತ ನೋಡಿ ಮುಗಿಸಿಬಿಡಿ... ಇವರ ಮದುವೆನ. ಮಾತಾಡುವ ವಿಷಯ ಸಾಕಷ್ಟಿದೆ, ಬನ್ನಿ ಹೋಗೋಣ.

ಭೋಜರಾಜ– ಸರಿ, ನಡೀರಿ. (ರಂಗನ ಹೊರತು ಎಲ್ಲರೂ ಹೋಗುವರು) ರಂಗಾ.

ರಂಗ– ಇಲ್ಲೆ ಅದಿನಿ.

ಭೋಜರಾಜ– ಕಾಣುತ್ತದು. ಕಾರು ಸ್ಟಾರ್ಟ್ ಮಾಡು ನಡಿ.

ರಂಗ– ಸಾಧ್ಯಿಲ್ರಿ. ಸಣ್ಣ ಕಾರದು. ಐದು ಜನಕ್ಕ ಇಕ್ಕಟ್ಟಾಗುತ್ತ.

ಭೋಜರಾಜ– ಅದಕ್ಕ ನಾನೇನ್ಮಾಡ್ಲಿ ?

ರಂಗ– ಹವಾ ತಿನಕೊಂತ ನಡಕೊಂಡು ಬರ್ರಿ.

ಭೋಜರಾಜ– ನನಮಗನೆ, ನಾನು ನಡಕೊಂಡು ಬರಬೇಕಾ ?

ರಂಗ– ಜಗಾದ ಅಭಾವ. ಯಾರರ ಒಬ್ರು ನಡೀಬೇಕು.

ಭೋಜರಾಜ– ನೀನೇ ನಡಕೊಂತ ಬಾ ಹಂಗಾರ. (ಹೋಗುವನು)

ರಂಗ– ಹೊಗ ಕತ್ತಿಕಿರುಬ ನನ್ನ ಮಗನೆ ಇವಕಾರಿವರು ಟೈಂ ಬಾಂಬಿದ್ಧಂಗ. ಯಾವಾಗ ಸಿಡಿತಾರಂತ ಹೇಳಾಕ್ಹ ಬರಂಗಿಲ್ಲ. ಈ ಮಕ್ಳ ಹಿಸ್ಟ್ರಿ ಪಾಪ ವನಜಮ್ಮಗೇನೂ ಗೊತ್ತಿಲ್ಲ. ನಾನರ ಹೆಂಗ ತಿಳಸ್ಬೇಕನ್ನುದ್ಧು ತಿಳಿದಂಗಾಗೇತಿ. (ವಿಚಾರಿಸಿ) ನೋಡೋಣ ದೇವ್ರದಾಸ. (ಹೋಗುವನು)

## ಏಳನೆಯ ದೃಶ್ಯ

### ರಸ್ತಾ

(ಕೊರಳಲ್ಲಿ ಕ್ಯಾಮರ ನೇತು ಹಾಕಿಕೊಂಡ ಜಗ್ಗು ಬರುವನು)

ಜಗ್ಗು– ಅದೃಷ್ಟ ಕೂಡಿ ಬಂದವನು, ಅರೆಕ್ಷಣದಲ್ಲಿ ಅರಸನಾಗಿ ಬಿಡಬಹುದು. ಹೆಸರಿಗೆ ಕಂಪೌಂಡ್ರಾಗಿ, ಅರವಿಂದ ಡಾಕ್ಟ್ರಿಗೆ ದಿನಕ್ಕೊಂದು ಹೆಣ್ಣನ್ನು

ಸಪ್ಲೆ ಮಾಡ್ತಿರುವ ನನಗೆ ದುಡ್ಡಿನ ಹೊಳೆಯಲ್ಲಿ ಈಜಾಡುವ ಕಾಲ ಬಂದಿದೆ. ಈ ಕ್ಯಾಮ್ರಾದಲ್ಲಿ ಅರವಿಂದರ ರತಿ ಮನ್ಮಥ ಕ್ರಿಡೆಯನ್ನು ಮಾಡಿಸಿ ಕೊಟ್ರೆ ಇಪ್ಪತ್ತೈದು ಸಾವಿರ ರೂಪಾಯಿ ಕೊಡ್ತಿವಂತ ಭೋಜರಾಜ ಹಾಗವರ ಮಗ ವಿಕ್ರಂ ಹೇಳಿದ್ದಾರೆ. ತಲೆ ಹಿಡುಕತನ ಬೇಸತ್ತಿರುವ ನನಗೆ ಅದರಿಂದ ಬಿಡುಗಡೆ ಹೊಂದಿ ಹೊಸ ಜೀವನ ಪ್ರಾರಂಭಿಸಲು ಇದೇ ಸುಸಂದರ್ಭ ಆದ್ರೆ ಒಂದು ಫೋಟೋಕ್ಕೆ ಅಷ್ಟು ದುಡ್ಡು ಕೋಡಬೇಕಾದ್ರೆ ಒಳಗಿನ ಹಕೀಕತ್ತೇನಿರ್ಬೆಕು? ಏನಿದ್ರೇನು ನನಗ ದುಡ್ಡು ಬಂದ್ರ ಸಾಕು ದೂರದ್ದೂರಿಗೆ ಹಾರಿಬಿಡ್ತೆನಿ ಇವತ್ತೊಂದು ದಿನ ಅರವಿಂದರ ಸಲುವಾಗಿ ಹೆಣ್ಣು ಹುಡುಕ್ಬೇಕಾಗಿದೆ, (ಹೋಗುವನು)

ಮೂರ್ತಿ ಬರುವನು

ಮೂರ್ತಿ—ಆ ಬ್ರಹ್ಮ ನನ್ನಸಲುವಾಗಿ ಹೆಣ್ಣರ ಸೃಷ್ಟಿ ಮಾಡ್ಯಾನಿಲ್ಲೋ ಅಂತೀನಿ. ಈ ಮಾರಿ ನೋಡಿದ್ರ ನಾರಿಮಣಿಯರು ದೂರ ಸರಿತಾರಲ್ಲ ಯಾಕ? (ವಿಚಾರಿಸಿ) ಅಂ. ತಿಳಿತು. ಅಪರೂಪದ ಸುಂದರ, ನನ್ನ ಲವ್ ಮಾಡೋ ಯೋಗ್ಯತೆ ತಮಗಿಲ್ಲಂತ ಹಂಗ್ಮಾಡ್ತಾರವರು

(ಲಿಲ್ಲಿ ಒಳಗಿನಿಂದ ಮಾತಾಡುತ್ತಲೇ ಬರುವಳು)

ಲಿಲ್ಲಿ—ಯಾಕಲೇ ನನ ಮಗನೇ ಹೆಣ್ಣಂದ್ರ ಸಂತ್ಯಾಗ ಮಾರೋ ಹಣ್ಣಂತ ತಿಳಿದಿಯೇನು? ಗುರ್ತ ಖೂನಿಲ್ಲದವಳಿಗೆ ಕಣ್ಣು ಹೊಡ್ದು ಮತ್ತ ಮ್ಯಾಲ ಬಣ್ಣದ ಮಾತಾಡ್ತಿ ಮಗನ? ಇನ್ನೊಮ್ಮೆ ನನ್ನ ಸುದ್ದಿಗ್ಬಂದ್ರ ಎದೆಗೊದ್ದೇನ.

ಮೂರ್ತಿ—ಯಾರೆದಿಗೆ ಒದಿತಿ?

ಲಿಲ್ಲಿ—ಯಾರಿಗೊದಿತೇನಂತ ನನಗ ಗೊತ್ತಿಲ್ಲ.

ಮೂರ್ತಿ—ನೀ ಯಾರಿಗರ ಒದಿ ಮಾರಾಯ್ತಿ. ಆದ್ರ ನಾ ಕಟ್ಟಿದ ಆಶಾ ಗೋಪುರಕ್ಕೆ ಮಾತ್ರ ಒದಿಬೇಡ. ಯಾಕಂದ್ರ ನಾ ಹುಟ್ಟಿದ್ದೆ ನಿನಗಾಗಿ ಬದುಕಿರೊದೆ ನಿನ್ನೊಡ ಲವ್ ಮಾಡುವುದಕ್ಕಾಗಿ.

ಲಿಲ್ಲಿ—ಆದ್ರ ನಾ ಹುಟ್ಟಿದ್ದು ಆ ರಂಗನಿಗಾಗಿ ಬದುಕಿರೋದು ನಿನ್ನಂತವ ಹಲ್ಲು ಮುರಿಯುವುದಕ್ಕಾಗಿ.

ಮೂರ್ತಿ–ಅಯ್ಯ ಕಟುಕ ಹೆಣ್ಣೆ ನಿನ್ಗೂಡ ಪ್ರೇಮಗೀತೆ ಹಾಡ್ಬೇಕಂತ ಹಾರುಪೇರ್ರಿಸಿಕೊಂಡು ಬಂದಿರ್ತಿನಿ, ನೀನಿಲ್ಲಿ ಹಲ್ಮುರಿತಿನಿ ಮುಸುಡಿ ಜಜ್ಜತಿನಿ ಅಂತಿ. ಅಷ್ಟಕ್ಕ'ರ ಬಿಡ್ತಿಯೆನು? ಹೊಳ್ಳ ಮಳ್ಳ ಆ ರಂಗ್ಯಾನ ಹೆಸರು ತೆಗೆದು ಇಲ್ಲದ ಸಂಕಟ ಹಚ್ಚತಿ. ಅವನೌನ ನಿನಗೇನರ ಮಾಟ ಮಾಡ್ಯಾನೇನು?

ಲಿಲ್ಲಿ– ಹೌದು ನನ್ನ ಮನಸ್ಸು ಅವನ್ನ ಬಿಟ್ಟು ನಿನ್ನಂತ ಲುಚ್ಚ್ಯಾನ ಕಡೆ ಹರಿದಂಗ ಮಾಡ್ಯಾನ.

ಮೂರ್ತಿ– ನಾ ಲುಚ್ಚಾ ಆ ಮಗ ಸಾಚೆ ಅಲ್ಲ? ಲಿಲ್ಲಿ ಆ ಮಗನ್ನ ಗಂಡ್ಸಂತ ತಿಳಿದಿಯೇನು? ಹುಚ್ಚಿ ಅವನ್ನ ಬೆನ್ಹತ್ತ್ಯಾದು, ಮುದಿ ಎತ್ತು ಹೂಡಿ ದಿಬ್ಬ ಹತ್ತನ್ನಾದು ಎರಡೂ ಒಂದ.

ಲಿಲ್ಲಿ–ಮುದಿ ಎತ್ತು ಅವನಲ್ಲ ನೀನು ಅವನ ತಾಕತ್ತು ನಿನಿಗ್ಯಾವ ಕಾಲಕ್ಕೆ ಬರ್ಬೇಕೋ? ನಿನ್ನಂಗ ಕಂಡ ಕಂಡಲ್ಲಿ ಬೇಲಿ ಹಾರಿ, ಮಾರಿ ಸೊರಗಿಸಿ ಕೊಂಡಿಲ್ಲವನು. ಹೆಣ್ಣಿನ ಬಗ್ಗೆ ಭಯ ಭಕ್ತಿ ತೋರಿ ತಾಜಾತನ ಉಳಿಸಿಕೊಂಡು ಬಂದಿರೋ ಭೂಪತಿ ಗಂಡವನು

ಮೂರ್ತಿ–ಪೂರಾ ತಿದ್ದೇ ಹೊಗ್ಬಿಟ್ಟಾನ ಮಗ ಇಕ್ಕಿನ್ನ ಯಾವ ನಮೂನಿ ತಲಿ ಕೆಡಸ್ಯಾನಲ್ಲ ಅಂತೀನಿ. ಮಾತೆತ್ತಿದ್ರ ಆ ಮಗನ ಹೆಸರು ತಗಿತಾಳಲ್ಲ. ಇಕಿ ಮೈಯಾಗೆಲ್ಲರ ಮಿಷಿನ ಕುಂದರ್ಸಿ ಕಳಿಸಿರಬೇಕು.

ಲಿಲ್ಲಿ–ಹೌದು ನನ್ನ ಹೃದಯದಾಗ ಪ್ರೇಮ ಅನ್ನೋ ಮಿಷಿನ್ ಕುಂದು ರ್ಸಿದ್ದಾನೆ ನಿನ್ನಂತ ಕಾಮದ ಮಿಷಿನ್ನಿಗಿಲ್ಲಿ ಜಗಾನೇ ಇಲ್ಲ.

ಮೂರ್ತಿ– ನನ್ನೇನೂ ಕಸಕ್ಕಿಂತ ಕಡಿ ಮಾಡಿ ಮಾತಾಡ್ತಿಯಲ್ಲ.? ಈ ವ್ಯಕ್ತಿಯಾರು? ಕಿಮ್ಮತ್ತೆಷ್ಟೈತಿ? ಮನಸ್ಸು ಹೂವ್ವೋ,ಹಾವ್ವೋ ನಿಷ್ಠೂರವಾಗಿ ಮಾತಾಡಿದ್ರೆ ಈ ಪ್ರೇಮಿಗೆ ಎಂತ ಆಘಾತಾಗುತ್ತ? ಆಘಾತಾತಂತ್ರ ಈ ಪ್ರಾಣಿ ಬದುಕುತ್ತೋ ಇಲ್ಲೋ? ಸ್ವಲ್ಪರ ವಿಚಾರ ಮಾಡಂಗಿಲ್ಲೇನು?ನಿನಗೇನರ ನನ್ನ ಗಂಡಸ್ತನದ ಬಗ್ಗೆ ಸಂಶ್ಯಾ ಐತೆನು? ಹಂಗಿದ್ರೆ ಸ್ಯಾಂಪಲ್ಲಿಗರ ಮದಿವ್ಯಾಗಿ ನೋಡು

ಲಿಲ್ಲಿ–ಸ್ಯಾಂಪಲ್ಲಿಗೆ ಮದಿವ್ಯಾಗ್ಬೇಕೆನು? (ಒಳೆ ಏರಿಸುತ್ತಾ) ಬಾ ಹಂಗಾರ.

ಮೂರ್ತಿ– ಎದಕ ಕಟ್ಟಿಸಿಕೊಳ್ಳಾಕ? ಬ್ಯಾಕ ಅವತ್ತ ಕಟಿದುದೆ ರಗಡಾಗೇತಿ. ಮತ್ತೀಗ ಮಳ್ಳ ಮಾಡಿ ಹತ್ರಕ್ಕ ಕರೆದ ಬಂಗಾರದಂತ ನನ್ನ ಮೂಗಿಗೆ ಬಾಯ್ಯಾಕಿ ಕಡದ್ರ ನನ್ನ ಗತಿ ಏನಾಗುತ್ತ?

(ರಂಗ ಬರುವನು)

ರಂಗ–ಕ್ಯಾರೆ ದೋಸ್ತ್? ಏನ ನಡೆಸಿಯಲ್ಲ. ಲಿಲ್ಲಿ ಕೂಡ ಲಲ್ಲೆನ?

ಮೂರ್ತಿ–ಬಂದ್ಯಾ ಬಾ ನೀನೊಬ್ಬಾಂವಕ ವಿಕ್ಕದ್ದಿ ಇವಳೌಳು ಇಕ್ಯೋದು ನಮೂನಿ ಕಾಡ್ತಾಳ ನೀನೊಂದು ನಮೂನಿ ಕಾಡ್ತಿ. ದೊಡ್ಡ ಕರ್ವಾತಲೆ ನನ್ನ ಬಾಳಿವು ನಿನ್ನ ಕಾಲಾನವು ಚಪ್ಲಿನರ ಕೊಡಲೆ ನನ್ನ ಹಣೆಬರಕ್ಕೆ ನಾನು ಹೂಡ್ಕೊಂತಿನಿ

ರಂಗ– ದಯವಿಟ್ಟು ಕ್ಷಮಿಸು ಮಿತ್ರ. ನನ್ನ ಚಪ್ಲಿ ಹೊಸವದಾವು ಹೊಡ್ಕೊತೀನಿ ಅಂತ ಮೆಟಿಗೊಂದು ಹೋದ್ರ ನಾಯೇನು ಮಾಡ್ಲಿ?

ಮೂರ್ತಿ–ಅಂದ್ರ ಹಳೆವಿದ್ದಿದ್ರೆ...?

ರಂಗ–ನಿನ್ನ ಕೈಗ ಸೈತ ಕೊಡ್ತಿದ್ದಿಲ್ಲ. ಸಾಕನ್ನೋತನ ನಾನ್ನ ಕಟಿತ್ತಿದ್ದೆ

ಮೂರ್ತಿ–ಇವರೌರ ನನ್ನ ಕಟಿಯಾಕ ತುದಿಗಾಲಾಗ ನಿಂತಾರಿಬ್ರೂ

ರಂಗ–ಲಿಲ್ಲಿ ಇವನ್ಯಾಕ ಗಾಂಜಾ ಸೇರಿದವರಂಗ ಮಾಡ್ತದಾನ? ನೀಯೇನರ ಮಾಡ್ದೀನು?

ಲಿಲ್ಲಿ–ನಾಯೇನು ಮಾಡಾಕ್ಹೋಗ್ಲಿ? ಇದಕ್ಕ ಹೆಣ್ಣಿನ ಹುಚ್ಚು ತಲಿಗೇರಿ ಬಿಟ್ಟಾತಿ ಒಂದಳತಿ ಗಂಟು ಬಿದ್ದಾನ ಲವ್ ಮಾಡಂತ.

ರಂಗ– ತಪ್ಪೇನೈತಿ ನೀ ನನಗ ಗಂಟು ಬಿದ್ದಂಗ ಇವನು ನಿನಗ ಗಂಟು ಬಿದ್ದಾನ. ಅಲ್ಲೆ ಅನಾದಿ ನಿನಗ ಸ್ವಲ್ಪರ ಬುದ್ಧೈತೆನು?

ಲಿಲ್ಲಿ–ಯಾಕ?

ರಂಗ–ನನಗೆ ಗಂಡು ಬೇಕಾಗಿತಿ ಈ ಮಗನಿಗಂತೂ ಅರ್ಜಂಟ್ ಹೆಣ್ಣು ಬೇಕಾಗಿತಿ ಇಬ್ಬರದ ಗುಂಗು ಒಂದ ಐತೆಂದಾಗ ಜೋಡಿ ಬರೋಬ್ಬ ಆಗದಿಲ್ಲೇನು

ಮೂರ್ತಿ–ಹೇಳಲೇ ರಂಗ. ಇಕಿ ಸಲುವಾಗಿ ನಿದ್ದಿಲ್ಲದಂಗಾಗೇತಿ ಅಂತ ತಿಳಿಸಿ ಹೇಳಲೇ

ರಂಗ– ನೋಡು, ನಿನ್ನ ಸಲುವಾಗಿ ಎಷ್ಟು ತಲಿ ಕೆಡಿಸಿಕೊಂಡಾನ. ನೀ ಹೂಂ ಅಂದ್ರೆ, ತಾಳಿ ಸೈತ ಕಟ್ಟೊ ವಿಚಾರ ಮಾಡುದಿಲ್ಲ.

ಮೂರ್ತಿ– ಮೊದಲು ಮಕ್ಕಳಡಿಯಾಕ್ಹಚ್ಚತೇನಿ. ಯಾಕ ? ನನ್ನ ಗಂಡಸ್ತನ ನಿನಗ ಖಾತ್ರಿ ಆಗ್ಬೇಕಲ್ಲ.

ರಂಗ– ಎಷ್ಟು ಫಾಸ್ಟ ಅದಾನ ನೋಡು ಮಗ. ಇವನ ಅವಸ್ರ ನೋಡಿದ್ರೆ, ಮೂರು ತಿಂಗ್ಳಿಗೆ ಒಂದ್ರಂಗ, ವರ್ಷಕ್ಕ ನಾಕ ಮಕ್ಳನ್ನ ಹುಟ್ಟಿಸ್ತಾನ ಕಾಣತ್ತ.

ಮೂರ್ತಿ– ಒಂದ್ಹ ಛಾನ್ಸ್ ಸಿಗಲಲೇ ರಂಗ್ಯಾ...

ರಂಗ– ಮೂರ್ಹ ತಿಂಗ್ಳಿಗೆ ನಾಕೂ ಬೇಕಾರ ಹುಟ್ಟಸ್ತಾನ. ಒಂದು ನಮೂನಿ ಫಾರಂ ಕೋಳಿ ತತ್ತಿ ಕಾವು ಕೊಡೋ ಕರೆಂಟಿದ್ದಂಗ ಈ ಮಗ. ಇಂಥಾ ಹುರುಪಿನ ಮನುಷ್ಯಾನ್ನ ಬಿಟ್ಟೆದಿ. ಚಳಿಗಾಲಕ್ಕೊಂದ್ನಲ ಗಂಡ್ಸಾಗೊ ನನ್ನ ಬೆನ್ನತ್ತಿದಿ. ಇನ್ನರ ನನ್ನ ಸುದ್ದಿ ಬಿಡು.

ಮೂರ್ತಿ– ಸ್ಯಾಪಲ್ಲಿಗುಳಿದಿರೋ ಈ ಮನ್ಮಥ ರಾಜನ್ನಿ ಲವ್ ಮಾಡು.

ಲಿಲ್ಲಿ– ನಿನ್ನ ಲವ್ ಮಾಡುದಿಲ್ಲ, ಹತ್ರ ಬಂದ್ರ ಮೈ ನೋವು ಮಾಡ್ತೀನಿ.

ಮೂರ್ತಿ– ನೋಡಲೇ ರಂಗ್ಯಾ ಹೆಂಗ್ ಮಾತಾಡ್ತಾಳೀಕಿ.

ರಂಗ– ಅಕಿಗೆ ನಿನ್ನ ಮ್ಯಾಲ ಪ್ರೀತಿ ಜಾಸ್ತಿ ಆಗಿ, ತಡಕೊಳ್ಳಾಕ ಆಗದಿದ್ದಕ್ಕ, ಈ ನಮೂನಿ ಸಿಟ್ಟಿಲೆ ಮಾತಾಡ್ತಾಳ.

ಮೂರ್ತಿ– ನೀನೂ ಮಗ ನನ್ನ ಹೆಣ ಹೊರಾಕ ಬಂದೀದಿ. ಅಲ್ಲಲೇ ಪ್ರೀತ್ಯಾವುದು, ಸಿಟ್ಯಾವುದು ತಿಳಿಯದಿಲ್ಲ ನಿನಗ? ನನ್ನ ಮ್ಯಾಲ ಪ್ರೀತಿ ಹೆಚ್ಚಾಗಿಲ್ಲಿಕಿಗೆ, ಯಾವಾಗ ನನ್ನೆದಿಗೆ ಒದ್ದೀನನ್ನೋ ಕಿಚ್ಚು ಹೆಚ್ಚಾಗೇತಿ.

ರಂಗ– ಇಕಿ..., ನಿನ್ನೊ ದಿತಾಳ? ಅಷ್ಟು ದಮ್ಮ ತೆಸಕಿಗೆ? ಹಂಗಾರ್ಲೆಂಗ

ಒದಿತಾಳ ಒದಿಲಿ ನಾನೂ ನೋಡೆ ಬಿಡ್ತೇನಿ.ಯೇ ಲಿಲ್ಲಿ ಒದಿತಿಯಾ? ಒದಿಯಾ ಹೆಂಗ ಒದಿತಿ ನೋಡ್ತಾನ?

ಮೂರ್ತಿ– ರಂಗ್ಯಾ, ನಿನ್ನ ಪಾದ ಜೋಡ್ಸಲೆ ನಮಸ್ಕಾರ ಮಾಡ್ತೀನಿ. ಅಲಾ ಮಗನ, ನೀನೂ ಒಳ ಮುಚುಗದಿಯಾಲೆ ಇಕಿ ಕೈಯಾಗ ನನ್ನೊದಸಾಕ ಎಷ್ಟರ ಪ್ರಯತ್ನ ನಡಸಿಯಲ್ಲಲೇ.

ಲಿಲ್ಲಿ– ಸುಮ್ಮನ ಯಾಕ ಒದ್ದಾಡ್ತಿಯೋ ಮೂರ್ತಿ? ಮುತ್ತಿನಂತ ಮಾತ್ಹೇಳ್ತೀನಿ ಕೇಳು. ಹೆಣ್ಣಿಗೆ ಬ್ಯಾಡ ಅನಿಸಿದ್ದು ಅಮೃತ ಇದ್ರೂ ಅದವಳಿಗೆ ವಿಷ ಇದ್ದಂಗ. ಬೇಕನಿಸಿದ್ದು ಕಸ ಇದ್ರೂ, ಅದಕಿಗೆ ಸಿಹಿ ರಸ ಇದ್ದಂಗ.

ಮೂರ್ತಿ– ನಾನೀಗ ವಿಷ ಇದ್ದಂಗ?

ಲಿಲ್ಲಿ– ತಿಪ್ಪಿಗೆ ಚಲ್ಲಿದ ಕಸ ಇದ್ದಂಗ.

ಮೂರ್ತಿ– ಶಿವ, ಶಿವಾ, ನಾಚಿಕಿ, ಮಾನ, ಮರ್ಯಾದಿದ್ದ ಗಂಡ್ಸಾಗಿದ್ರೆ, ಇಲ್ಲೆ ಉರ್ಲು ಹಾಕ್ಕೊಂತಿದ್ದ.

ಲಿಲ್ಲಿ– ಮತ್ತ ನೀನು?

ಮೂರ್ತಿ– ಈ ಮೂರೂ ಬಿಟ್ಟೇ ನಿನ್ನ ಬೆನ್ನ್ಹತ್ತೀನಿ. ಅಂದಾಗ ಸಾಯೂ ವಿಚಾರ ದೂರ್ಹಳಿತು.ಮಗನ ರಂಗ್ಯಾ.ನಮ್ಮ ಪ್ರೇಮಕ್ಕ ನೀನೇ ಅಡ್ಡಗ್ಲೋಡೆ. ನೀನಾಗಿ ನೀವ ಇಕಿ ನನ್ನ ಪ್ರೀತಿ ಮಾಡುವಂಗ ಮಾಡಿದಿ ಛಲೋ ಆತು. ಇಲ್ಲಾಂದ್ರ ನಿನ್ನೆಷ್ಟರ್ಲೆ ಚೀಟಿ ಬರ್ದಿಟ್ಟು ಹೊಳಿ ಹಾರ್ತೀನಿ ಮಗನ, ಹುಷಾರಿ. (ಹೋಗುವನು)

ರಂಗ– ನೋಡು, ನಿನ್ನ ಸಲುವಾಗಿ ಹೊಳಿ ಹಾರಿ, ನನ್ನ ಜೈಲಿಗ ಕಳ್ಸಾಕ ತಯಾರಾದ ಮಗ. ಅದಕ ಸುಮ್ಮನ ಅವನ್ನ ಮದಿವ್ಯಾಗು ನಾನ ಉಳಿತಿನಿ, ನಿನಗೂ ಪುಣ್ಯ ಬರುತ್ತ.

ಲಿಲ್ಲಿ– ನನಗ ಪಾಪ ಬಂದ್ರೂ ಚಿಂತಿಲ್ಲ. ನಾನ್ನ ಹೊಳಿ ಹಾರಿ ನಿನ ಕಷ್ಟ ತಪ್ಪಸ್ತೇನಿ. ಆಸೆ ಪಟ್ಟದ್ದು ದಕ್ಕದಿದ್ದ ಮ್ಯಾಲ ಯಾಕ ಬದುಕಿರ್ಬೇಕು

ರಂಗ– ಅದಕ ಸತ್ತು ದವ್ವಾಗರ ನನ್ನ ಕಾಡಬೇಕಂತ ಮಾಡಿಯೇನು ಲಿಲ್ಲಿ ಈ ಜೀವನದಾಗ, ಮನುಷ್ಯಾರಾಗಿ ಹುಟ್ಟಿದಮ್ಯಾಲ "ಮದುವೆ" ನೆಪ

ದಾಗ ಗಂಡು–ಹೆಣ್ಣಿನ ಬೆಸುಗ್ಯಾಗುತ್ತ, ಆದ್ರ ಈ ಮದುವೆ ಅನ್ನೋ ಪವಿತ್ರ ಶಬ್ದ. ಇವತ್ತಿನ ದಿನ. "ಮೊದಲ ರಾತ್ರಿ"ಗಷ್ಟ ಬಳಕ್ಯಾಗಾದು ಜಾಸ್ತಿಯಾ ಗೇತಿ ಸಾಯ.ತನ ಜಂಟಿಯಾಗಿರ್ಬೇಕಾದ ಸಂಸಾರ, ನಮ್ಮ ಸರ್ಕಾರದ ಹೆಂಡ. ಸರಾಯಿ ಪ್ರಭಾವದಿಂದ್ಲೋ, ಗಂಡ, ಪರಸ್ತ್ರೀ ವ್ಯಾಮೋಹಕ್ಕ ತುತ್ತಾಗ ದ್ರಿಂದ್ಲೋ, ಹೆಂಡ್ತಿ, ಗಂಡನ್ನ ಅರ್ಥ ಮಾಡ್ಕೋಳ್ಳದು ಬದುಕಾಕ ಆಗದ್ರಿಂದ್ಲೋ ಮೂರ ತಿಂಗ್ಳಿಗೆ ಮೂರಾಬಟ್ಟಿ ಆಗಿಬಿಡುತ್ತ. ಕಾರಣ, ಗಂಡು, ಹೆಣ್ಣು ಒಬ್ರ ಮನಸ್ಸು ಒಬ್ರು ಅರ್ಥ ಮಾಡಿಕೊಂಡು, ಅವ್ರ್ಯಾಲ ಮದಿವ್ಯಾದ್ರ, ಮುಂದ ಸಂಸಾರ ಸರಳ ನಡಿಯುತ್ತ.

ಲಿಲ್ಲಿ– ನಿನ್ನ ಮನಸ್ಸು ನಾ ಪೂರಾ ಅರ್ಥ ಮಾಡಿಕೊಂಡೇನಿ. ಸುಮ್ನ ತಡಮಾಡಿ, ಸೀಜನ್ ಹಾಳು ಮಾಡಿಕೊ ಬ್ಯಾಡ. ದೌಡು ನನ್ನ ಮದಿವ್ಯಾಗಿ ಬಿಡು.

ರಂಗ– ಈ ಅವಸ್ರಕ್ಕ ಬೇಳ್ಬ್ಯಾರ್ದು ಅಂತಾನ. ಇಪ್ಪತ್ತನ ಶಂಖ ಹೊಡ ದದ್ದು. ಇನ್ನಷ್ಟು ವಿಚಾರ ಮಾಡಿ ನೋಡು. ಯಾಕಂದ್ರ ಅವಸರವೇ "ಅಪ ಘಾತಕ್ಕೆ ಕಾರಣ." (ಹೋಗುವನು)

ಲಿಲ್ಲಿ–ಇವನ್ಯಾವ ಸೀಮಿ ಗಂಡ್ಸು ಗಂಟು ಬಿದ್ದ ಅಂತೀನಿ ನಾನು ನೋಡ ತೆನಿ ನೋಡಿ ಒಬ್ಬ್ಯಾವನ ಸಿಕ್ಕಾಗ ಬಲತ್ಕಾರ ಮಾಡಿಬಿಡ್ತೀನಿ. (ಹೋಗುವಳು)

## ಎಂಟನೆಯ ದೃಶ್ಯ

## ಅರವಿಂದನ ಆಸ್ಪತ್ರೆ

(ಅರವಿಂದ ಸೀಗರೇಟ ಸೇದುತ್ತಾ ಶತಪಥ ತಿರುಗುತ್ತಿರುವನು)

ಅರವಿಂದ– ರಸಿಕತೆ ಗಂಧ ಗೊತ್ತಿಲ್ಲದವನಿಗೆ ಸರಸದ ವಿಷಯ ಹೇಳ್ಬ್ಯಾರ್ದು ಹಸಿವಾದವನ ಸಂಕಟ ಹೊಟ್ಟೆ ತುಂಬಿದವನಿಗೇನು ಗೊತ್ತಾಗುತ್ತೆ ನನ್ನ ವಿರಹ ವೇದನೆಗೆ ಹೆಣ್ಣುಗಳನ್ನು ಒದಗಿಸಲೆಂದೇ ಆ ಜಗ್ಗನನ್ನು ಗೊತ್ತು ಮಾಡಿದ್ದೇನೆ ಆದರೆ ಆ ಅವಿವೇಕಿಗೆ ಸನ್ನಾತುರದ ಅರಿವೇ ಇದ್ದಂತೆ

ಕಾಣುವುದಿಲ್ಲ. ಎಲ್ಲಿ ಸಾರಾಯಿ ಕುಡಿದು ಸಾಲಿಕಟ್ಟಿಗೆ ಶರಣು ಹೋಗಿದ್ದಾನೋ ಏನೋ?

(ಜಗ್ಗು ಬರುವನು)

ಜಗ್ಗು—ನಮಸ್ಕಾರ ಸಾರ್

ಅರವಿಂದ—ಅರೆ ಜಗ್ಗು ಯಾವಾಗ್ಬಂದೆ?

ಜಗ್ಗು—ಚುರುಕು ಬುದ್ಧಿಯು ನನ್ನನ್ನು ಹರಕು ಮುದ್ದಿ ತಿಂದು ಸಿದ್ದಿ ಮಾಡೋನು ಅಂತಿದ್ರೆಲ್ಲಾ ಆವಾಗ್ಲೆ ಬಂದೆ

ಅರವಿಂದ—ಸಿದ್ದಿ ಮಾಡದವನಾದ್ರೆ ಇಷ್ಟೊತ್ತಿಗೆ ನಿನ್ನ ಚುರುಕು ಬುದ್ದಿಯು ಪ್ರದರ್ಶನವಾಗಬೇಕಿತ್ತು.

ಜಗ್ಗು—ಸಾಹೇಬ್ರ ಕುಡುಕುಗು ತಲೆ ಹಿಡುಕುಗು ಬಾಳ ವ್ಯತ್ಯಾಸೈತಿ. ಕುಡುಕುಗ ಸರಾಯಿ ಕುಡಿಯಾಕ ದುಡ್ಡು ಹುಟ್ಸೊ ಯೋಚನ್ಯಾದ್ರ ತಲೆ ಹಿಡುಕುಗ ತಾ ಸನ್ಯಾಸಾದ್ರೂ ಚಿಂತಿಲ್ಲ, ತನ್ನ ಗಿರಾಕಿಗೆ ಹೆಣ್ಣೂದಗಿಸ್ಬೇಕನ್ನೂ ವಿಚಾರಿರ್ತಾತಿ

ಅರವಿಂದ— ಆದ್ರ ಸಧ್ಯ ಹೆಣ್ಣು ರೆಡ್ಡಿ ಅಪ್ಪ?

ಜಗ್ಗು—ಎಸ್ ಸರ್ ಇವತ್ತೊಂದು ಹೊಸ ಮಾಲು ನನ್ನ ಮೋಸದ ಜಾಲಕ್ಕೆ ಸಿಕ್ಕು ಬಿದ್ದಿದೆ.

ಅರವಿಂದ—ಹೌದು ಎಲ್ಲಿದ್ದಾಳೆ ಬೇಗ ಕರಿಯೊ.

ಜಗ್ಗು—ತಡಿರಿ ಅವಸ್ರ ಮಾಡಬ್ಯಾಡ್ರಿ ಯಾಕಂದ್ರ ಆ ಹೆಣ್ಣು ಮಗಳು ಮೂರು ತಿಂಗಳ ಗರ್ಭಿಣಿ ಅದಾಳೆ.

ಅರವಿಂದ—ಆರು ತಿಂಗಳ ಗರ್ಭಿಣಿಯಿರಲಿ ನನಗರ್ಜಂಟಿದೆ ಮೊದ್ಲು ಕರಿ ಆಕಿನ.

ಜಗ್ಗು—ಹಡಿಯೋದು ಒಂದ ತಾಸೈತಂದ್ರು ಬಿಡೋಪೈಕಿಲ್ಲಂತ ನನ ಗೊತ್ರಿ ಆದ್ರ ನಾ ಹೇಳೋ ವಿಷಯ ಪೂರಾ ಕೇಳ್ರಿ. ಆ ಹೆಣ್ಮಗಳ ಹೊಟ್ಟಿ ತೊಳ್ಸಾಕ ದವಾಖಾನಿ ಹುಡುಕ್ತಾ ಇದ್ಲು ನಾನ್ಯೆಡಿಯಾ ಮಾಡಿ ಲೇಡಿ

ಡಾಕ್ಟ್ರೊ ನರ್ಸಿಂಗ ಹೊಂಗೆ ಕರ್ಕೊಂಡ್ಹೋಗ್ತೀನಂತ ಇಲ್ಲಿಗೆ ಕರ್ಕೊಂಡು ಬಂದಿನಿ.

ಅರವಿಂದ–ಮುಂದೀಗ ನಿನ್ನ ವಿಚಾರೇನು?

ಜಗ್ಗು–ನನ್ನ ವಿಚಾರ ತಗಂದೇನ್ಮಾಡ್ತೀರಿ? ನಿಮ್ಮ್ವಿಚಾರೇನೈತೊ ಅದನ್ಮಾಡ್ರಿ ಅದಕ್ಕಿಂತ ಮದ್ಲು ನೀವು ಸ್ವಲ್ಪ ಮರೆಯಾಗ್ರಿ ನಾ ಆಕಿನ ಡಾಕ್ಟ್ರ ಪರ್ಮಿಷನ್ ತರ್ತೀನಂತ ಹೊರಗ ಕುಂದರ್ಸಿ ಬಂದೀನಿ ಸದ್ಯ ಕರ್ಕೊಂಡ್ಬಂದು ಒಳಗ ಕಳಸ್ತೇನಿ ಆವ್ಯಾಲ ನೀವು ಹೊಗುವಂತ್ರಿ.

ಅರವಿಂದ–ಸರಿ ಹಾಗಾದ್ರೆ ನಾನಿಲ್ಲೆ ಮರೆಯಾಗಿರ್ತಿನಿ ಬೇಗ ಒಳಗಡೆ ಕಳ್ಸಕಿನ (ಒಳಗಡೆ ಹೋಗುವನು)

ಜಗ್ಗು–ಬೇದಿಗ್ಬಂದ ನಾಯ್ಯಾಗಿದಾನ ಮಗ ಆದು ಖರೇನ ಇಂತವರ ಅವಸ್ರ ನನ್ನಂತವ್ರಿಗೆ ಆಸ್ರಾಗುತ್ತ. ಇವತ್ತು ಈ ಮಗನ ಸರಸಾನ ಕ್ಯಾಮ್ರಾದಾಗ ಮೂಡುಸ್ತೀನಿ ಇಪ್ಪತ್ತೈದು ಸಾವಿರ ಹೊಡಿತಿನಿ (ಹೊರಗೆ ವಿಶಾಲಳನ್ನು ಕರೆತಂದು) ಬರ್ರಿ ಡಾಕ್ಟ್ರಮ್ಮಾರು ಸಧ್ಯ ಬರ್ತಾರೆ ಅಲ್ಲೀವರ್ಗೂ ನೀವು ಒಳಗ್ಹೋಗಿ ರೆಸ್ಟ್ ತಗೋಳ್ರಿ.

ವಿಶಾಲ–ಬೇಗ ಕಳಿಸಿಕೊಡಣ್ಣ ಪುಣ್ಯ ಬರುತ್ತ (ಒಳಗ್ಹೋಗುವಳು)

ಜಗ್ಗು–ಸಣ್ಣತನ ಇರೋ ನನಗ್ಯಾಕ ಅಣ್ಣ ಅಂತ ಕರಿತಿಯಾ? ನಿನ್ನ ಬಣ್ಣ ಕೆಡ್ಸಾಕ ಒಳಗೊಬ್ಬಣ್ಣ ಹಾತೊರಿತಿದಾನೆ.

ಅರವಿಂದ–(ಬರುತ್ತಾ) ಜಗ್ಗು…

ಜಗ್ಗು–ಒಳಗ ಕಳಿಸೇನಿ ನಿಮ್ಮ ಕೆಲ್ಸಕ್ಕ ರೇಡಿಯಾಗ್ರಿ ಆದ್ರ ಒಮ್ಮೆಗೆ ಅವಸ್ರಕ್ಕೀಳ್ಬ್ಯಾಡ್ರಿ ರಮಿಸಿ ಸಾಧಿಸ್ರಿ,

ಅರವಿಂದ–ಇಂಥಾ ವಿಷಯದಲ್ಲಿ ನನಗಿರೊ ಅನುಭವ ನಿನಗೇನು ಗೊತ್ತೊ ಮಂಕೆ? ನೋಡ್ತಾಯಿರು ಈ ಹೆಣ್ಣನ್ನು ಯಾವ ರೀತಿ ಮಣಿಸ್ತಿನಿ ಅಂತ (ಒಳಗ್ಹೋಗುವನು)

ಜಗ್ಗು–ನೀವು ಆ ಹೆಣ್ಣನ್ನು ಮಣಿಸ್ರಿ, ನಾನು ನನ್ನ ಕೆಲ್ಸಕ್ಕ ಅಣಿಯಾಗ್ತೀನಿ. (ಹಿಂಬಾಲಿಸುವನು)

ವಿಶಾಲ–(ಒಳಗಿನಿಂದ) ಯಾರು? ನೀವು

ಅರವಿಂದ–(ಒಳಗಿನಿಂದ) ಅಮ್ಮಾಳ್ಹೇಳ್ತಿನಿ..

ವಿಶಾಲ–(ಒಳಗಿನಿಂದ) ಬಿಡಿ ನನ್ನ.

ಅರವಿಂದ–(ಒಳಗಿನಿಂದ) ಬಿಡುವುದಕ್ಕಲ್ಲ ಹಿಡಿದಿರೋದು.

ವಿಶಾಲ–(ಒಳಗಿನಿಂದ) ಯಾರಾದ್ರೂ ಕಾಪಾಡಿ ಬಿಡೋ ನನ್ನ... ಅಮ್ಮಾ (ಚೀರುವಳು) (ಜಗ್ಗು ಓಡಿ ಹೋಗುವನು)

–ಹಿನ್ನೆಲೆ–

## ಒಂಭತ್ತನೆಯ ದೃಶ್ಯ

### ಜಂಗಲ್ ರಸ್ತಾ

(ಹಿನ್ನೆಲೆ ಮುಗಿದು ವಿಶಾಲ ಹೋಗುವಾಗ ಅರವಿಂದ ಬಂದು)

ಅರವಿಂದ– ನಿಲ್ಲು.

ವಿಶಾಲ– ಯಾರು?... ಓಹೋ ದೈವ ಸ್ವರೂಪ ವೈದ್ಯರಿಗೆ ಸುಸ್ವಾಗತ. ಯಾಕ ಡಾಕ್ಟ್ರೆ ಮತ್ತೆ ನನ್ನನ್ನು ಬೆಂಬತ್ತಿ ಬಂದಿದ್ದೀರಲ್ಲ? ಇನ್ನೂ...., ನಿಮ್ಮಾಸೆ, ತೀರಿಲ್ಲವೆ?

ಅರವಿಂದ– ಆ ಭರವಸೆ ಖಂಡಿತ ನನಗಿನ್ನೂ ಮೂಡಿಲ್ಲ. ಇದುವರೆಗೆ ನಾನೆಷ್ಟೋ ಹೆಣ್ಣುಗಳೊಂದಿಗೆ ಸರಸವಾಡಿದ್ದೇನೆ.. ಆದ್ರೆ, ಅವರೆಲ್ಲ ಆ ಗಳಿಗೆಗೇ ಹಳಸಿದ ಅನ್ನವಾಗಿ ಬಿಟ್ಟರು. ನೀನು ಮಾತ್ರ......

ವಿಶಾಲ– ಬಿಸಿ ಅಡಿಗೆಯೆಂದು ಭಾವಿಸಿರುವಿಯಲ್ಲವೆ? ಅದೂ ನಿಜಾನೆ. ಕದ್ದು ತಿನ್ನುವ ಕಳ್ಳನಿಗೆ ಬಾಯಿ ರುಚಿಯಾದರೆ ಸಾಕು, ತನ್ನ ಸಾಹಸಕ್ಕೆ ತಾನೇ ಬೆನ್ನು ಚಪ್ಪರಿಸಿಕೊಳ್ಳುತ್ತಾನೆ. ಆದರೆ ಕತ್ತಲಲ್ಲಿ ತಾನು ಕದ್ದು ತಿಂದದ್ದು, ನಾಯಿ ತಿಂದು ಹೆಚ್ಚಾಗಿ ವಾಂತಿ ಮಾಡಿಕೊಂಡ ಹೊಲಸು ಅನ್ನುವುದು, ಆತುರದಲ್ಲಿ ಆ ಕಳ್ಳನಿಗೆ ಗೊತ್ತಾಗುವುದಿಲ್ಲ.

ಅರವಿಂದ– ಹುಚ್ಚಿ, ಹಸಿವಾಗಿ ಉಸಿರಾಡುವುದಕ್ಕೂ ಕಷ್ಟವಾದಾಗ ಬಿಸಿ ಅಡಿಗೆಯನ್ನೇ ಅರಸುವ ಅವಿವೇಕಿ ನಾನಲ್ಲ. ಆ ಸಮಯದಲ್ಲಿ ಹಸಿವೆ ಇಂಗಿಸಲು ಸಿಗುವ ಅಡಿಗೆ ತಂಗಳಲ್ಲ, ಹಳಸಿದನ್ನವಿದ್ದರೂ, ತಿಂದು, ಉಸಿರು ಉಳಿಸಿಕೊಳ್ಳುವುದೇ ನನ್ನ ರೀತಿ, ನೀತಿ.

ವಿಶಾಲ– ಭಲೇ ಡಾಕ್ಟ್ರೆ. ಮನುಷ್ಯರ ಪಾಲಿಗೆ ಮತ್ತೊಬ್ಬ ಬ್ರಹ್ಮನಾಗ ಬೇಕಾದ ನೀವೇ ಎಂಜಲು ತಿನ್ನುವ ನಾಯಿಗಳಾದ್ರೆ, ತಂದೆನೇ ಮಗಳ ದೇಹ ವನ್ನು ಬಳಸಿಕೊಂಡು, ತನ್ನ ಕಾಮದಾಹ ತೀರಿಸಿಕೊಂಡಂತಾಗುವುದಿಲ್ಲವೇ? ಸುಶಿಕ್ಷಿತರಾಗಿ ಸುವಿಚಾರ ಮಾಡಬೇಕಾದ ಗಂಡು ಕುಲವೆಲ್ಲ, ಹೆಣ್ಣಿನ ಶೀಲ ವನ್ನು ಕೊಳ್ಳೆ ಹೊಡೆಯುವ ದರೋಡೆಖೋರರಾದರೆ, ಹೆಣ್ಣು ಹುಟ್ಟಿದ ಕೂಡಲೇ ಕತ್ತು ಹಿಚುಕುವ ಕಟುಕರಾಗಬೇಕಾಗುತ್ತದೆ ಹೆತ್ತವರು. ಇವತ್ತು ನನ್ನ ದೇಹವನ್ನು ನಿಮ್ಮ ಕಾಮದಾಹಕ್ಕೆ ಬಳಸಿಕೊಂಡಿರೆಂದು ಖಂಡಿತ ನನಗೆ ನೋವಿಲ್ಲ. ಯಾಕಂದ್ರೆ, ದಡ್ಡ ಧನವಂತರಿಬ್ಬರ ಹೊಟ್ಟೆ ತುಂಬಿಸಿ. ಹೆಚ್ಚಾಗಿ ತಿಪ್ಪೆಗೆಸೆದ ಎಂಜಲು ನಾನು. ಈ ಎಂಜಲನ್ನು ಬುದ್ಧಿಯಿಲ್ಲದ ಬೀದಿ ನಾಯಿ ತಿನ್ನುವ ಮನಸ್ಸು ಮಾಡಬೇಕಿತ್ತೇ ಹೊರತು ದೊಡ್ಡ ಸ್ಥಾನದಲ್ಲಿರುವ ನೀವು ದಡ್ಡರಂತೆ ಈ ಎಂಜಲು ತಿನ್ನುವ ಮೂರ್ಖತನ ಮಾಡಬಾರದಿತ್ತು.

ಅರವಿಂದ–ಅಯ್ಯೋ ಮಂಕೆ ದೊಡ್ಡ ಸ್ಥಾನದಲ್ಲಿದ್ದುಕೊಂಡು ಮಾಡುವ ದಡ್ಡತನಕ್ಕೆ ಈ ಸಮಾಜದಲ್ಲಿ ಸಾಕಷ್ಟು ಬೆಲೆ ಇದೆ. ದೊಡ್ಡವರ ದಡ್ಡತನ. ದೇಶದ ಮೂಲೆ ಮೂಲೆಯಲ್ಲಿ ಗೆಜ್ಜೆ ಕಟ್ಟಿಕೊಂಡು ಅಟ್ಟಹಾಸದಿಂದ ಕುಣಿ ಯುತ್ತಲೇ ಇದೆ. ಆದರೂ ಅದನ್ನು ಅಡ್ಡಿಪಡಿಸುವ ಬುದ್ಧಿವಂತ ಶಕ್ತಿ ಇನ್ನೂ ಹುಟ್ಟಿಲ್ಲ. ಹುಟ್ಟಿದ್ದರೂ ಇದುವರೆಗೆ ತಡೆಯಲು ಸಾಧ್ಯವಾಗಿಲ್ಲ. ನಮ್ಮಂಥವರ ದಡ್ಡತನ ಇಂದಿನ ಸಮಾಜದಲ್ಲಿ ಮುಳುಗಿ ಮತ್ತೆ ಹುಟ್ಟಿ ಬರುವ ಆ ಸೂರ್ಯ ನಿದ್ದಂತೆ.

ವಿಶಾಲ–ಅದೂ ನಿಜಾನೆ. ನಿಮ್ಮಂಥ ದೊಡ್ಡವರು. ಅನ್ನ ತಿನ್ನುವ ಬಾಯಿಂದ ಹೇಸಿಗೆ ತಿಂದಿದ್ರೂ ಕೇಸರಿ ಬಾತ್ ತಿಂದಿದ್ದೇವೆ ಅಂತ ಮತ್ತೊಬ್ಬರ ಮುಂದೆ ಸಮರ್ಥಿಸಿಕೊಳ್ಳುತ್ತಾರೆ. ಇವರ ಬಾಯಿಂದ ಬರುವ ವಾಸನೆ ಕೇಸರಿ ಬಾತ್ ತಿಂದಿದ್ದಲ್ಲಾ ಹೆಸಿಗೆ ತಿಂದದ್ದನ್ನು ಸತ್ಯವನ್ನು ಮೂಗು ಕಂಡು ಹಿಡಿದಿ ದ್ದರೂ ಇವರ ದೊಡ್ಡಸ್ತಿಕೆ, ದರ್ಪಕ್ಕೆ ಬಲಿಯಾಗಿ ಇವರ ಮಾತಿಗೊಪ್ಪಿ ಗೊಳ್ಳುವ ಷಂಡುರಾಗಬೇಕಾಗುತ್ತದೆ. ಆದರೆ ಮರ ಉರುಳಿಸುವ ಆನೆ ಕೂಡ ಸಣ್ಣ ಇರುವೆಯಿಂದ ಪ್ರಾಣ ಬಿಡುವ ಪ್ರಸಂಗಕ್ಕೆ ತುತ್ತಾಗಬೇಕಾಗುತ್ತದೆ.

ಡಾಕ್ಟ್ರೇ ಹಲ್ಲು ಗಟ್ಟಿ ಅಂತ ಕಲ್ಲು ಕಡಿದ್ರೆ ಜೊಲ್ಲು ಸುರಿಸ್ಬೇಕಾಗುತ್ತದೆ. ಶಕ್ತಿಯಿದ್ದಾಗ ವಿದ್ಯುಚ್ಛಕ್ತಿಯಂತೆ ಹರಿದಾಡಿದರೂ. ರಕ್ತ ಸುಟ್ಟಾಗ ಪಕ್ಕ ಕಿತ್ತ ಹಕ್ಕಿಯಂತಾಗುವುದು ಮಾತ್ರ ಸತ್ಯ. ಈ ಮಾತು ನೆನಪಿರ್ಲಿ, ಬರ್ತೀನಿ.

ಅರವಿಂದ– ನಿಲ್ಲು ಹೋಗುವ ಮುನ್ನ ನನ್ನದೂ ಒಂದು ಮಾತು ಕೇಳಿ ಹೋಗು. ಕಾಮದ ಹಸಿವಾಗುವ ಈ ವಯಸ್ಸಿನಲ್ಲಿ, ಸುಖದ ಅಡಿಗೆಯನ್ನು ಅರಸನಾಗಿ ಉಣ್ಣುವ ವಿಚಾರವನ್ನಷ್ಟೇ ನಾನು ಮಾಡ್ತೀನಿ. ಮುಂದೆ ಮುದುಕನಾಗ್ತೀನಿ. ಮಣ್ಣು ಸೇರ್ತೀನನ್ನುವ ಹುಚ್ಚು ಕಲ್ಪನೆಯನ್ನು ಈ ಯೌವನದ ವಯಸ್ಸಿನಲ್ಲಿ ನಾನು ಖಂಡಿತ ಮಾಡುವುದಿಲ್ಲ. ಮತ್ತೇನಾದ್ರೂ ನನ್ನನ್ನು ಪ್ರಶ್ನಿಸುವ ವಿಚಾರವಿದ್ರೆ ನನ್ನೀ ನಿರ್ಧಾರವೇ ಉತ್ತರವಾಗಬಹುದೆಂದು ನನಗನಿಸುತ್ತದೆ. ಹ್ಯಾವ್ ಎ ಕರೆಕ್ಟ?

ವಿಶಾಲ– ಹುಚ್ಚು ಡಾಕ್ಟ್ರ ಮನುಷ್ಯ ರೂಪವಿರುವ ನಿನ್ನಂತ ಕಾಡು ಕಲ್ಲಿಗೆ ಪ್ರಶ್ನೆ ಮಾಡುವುದು ಮಾಂಸ ತಿನ್ನುವ ಮೃಗದ ಮುಂದೆ ಹುಲ್ಲು ಹಾಕುವುದು, ಎರಡೂ ಒಂದೆ. ನಾರಾಯಣನ ಹತ್ತು ಅವತಾರಗಳಲ್ಲಿ ಹಂದಿಯೂ ಒಂದು ಮುತ್ತು ಅಂತ ಮನೆಗೆ ತಂದು ಮಂಚದ ಮೇಲೆ ಮಲಗಿಸಿದರೆ, ಆ ಹಂದಿ ಹೊಲಸು ತಿನ್ನುವುದನ್ನು ಬಿಟ್ಟು ಅನ್ನ ತಿಂದು ಬದುಕಲು ಮನಸ್ಸು ಮಾಡಬಹುದೆ? ಸಾಧ್ಯವಿಲ್ಲ. ಅದರಂತೆ ಕಲಿತರೂ ಖದೀಮರಾದ ನಿಮ್ಮಂತ ಬುದ್ಧಿಹೀನರ ಮುಂದೆ ಕೈಜೋಡಿಸಿ ಕರುಣೆ ಸಿದ್ಧಿಸಿಕೊಳ್ಳಲು ಸಾಧ್ಯವಿಲ್ಲ. ನಿಮ್ಮಂತವರನ್ನು ಕಾಲಿನ ಕೆರವಾಗಿ ಮೆಟ್ಟಿ, ತೊಟ್ಟಿಗೆಸೆಯುವ ಬುದ್ಧಿವಂತಿಕೆ ಮಾಡಬೇಕು.

(ಭೋಜರಾಜ, ವಿಕ್ರಂ ಬರುವರು)

ಭೋಜರಾಜ– ಶಹಭಾಷ್, ಗಂಡೆದೆಯ ಹೆಣ್ಣೆ. ಕಂಡ–ಕಂಡವರ ತೋಳ ತೆಕ್ಕೆಯಲ್ಲಿ ಸಿಕ್ಕು ಬಿದ್ದು, ಗಾಣದಲ್ಲಿ ಹಿಂಡಿದ ಕಬ್ಬಿನಂತಾಗಿದ್ದರೂ, ಇನ್ನೂ ನಿನ್ನ ರೋಷ, ಆವೇಶ ಕಡಿಮೆ ಆಗಿಲ್ಲವಲ್ಲ. ಅವತ್ತು ನಮ್ಮನ್ನೇ ನಾಶ ಮಾಡ್ತೀನಂತ ಆವೇಶದಿಂದ ಆದೇಶ ಕೊಟ್ಟವಳು, ಇವತ್ತು ಮತ್ತೊಬ್ಬನ ಪಾಶಕ್ಕೆ ಬಲಿಯಾಗಿ ನೀನೇ ನಾಶವಾಗಿರುವಿಯಲ್ಲ.

ವಿಕ್ರಂ– ಇವಳ ನಾಶದಲ್ಲಿ ನಮ್ಮ ಶಕ್ತಿ ವಶವಾಗುವ ಮಂತ್ರವೊಂಡಡಗಿದೆಯಲ್ಲ ಡ್ಯಾಡಿ.

ಅರವಿಂದ– ಮಂತ್ರ...ತಂತ್ರ..., ಏನನ್ನಾರ್ ಹೇಳ್ತಾಯಿರೋದು? ನಮಗೆ..., ಇವಳ ಪರಿಚಯವಿದೆಯೋ?

ವಿಶಾಲ– ಪರಿಚಯ? ಯಾರದು? ನನ್ನದೆ? (ನಗು) ಅಯ್ಯೋ ಡಾಕ್ಟ್ರೆ, ಬೆಣ್ಣೆ ತಿಂದವರ ಮುಂದೆ, ಮಜ್ಜಿಗೆ ಕುಡಿದವನು ಬಾಯಿ ಚಪ್ಪರಿಸಿದಂತಾಯಿತು ನಿಮ್ಮ ಪ್ರಶ್ನೆ. ಆಸೆಯ ಮತ್ತಿನಲ್ಲಿ ನೀವು ರುಚಿ ನೋಡಿದ ಈ ಹೆಣ್ಣಿನ ತಿರುಳನ್ನು ಈ ಮೊದಲು ಇವರಿಬ್ಬರೂ ಸವಿದು ಬಿಟ್ಟಿದ್ದಾರೆ. ನೀವೀಗ ಕುಡಿದಿದ್ದು ತಾಜಾ ಹಾಲಲ್ಲಾ ಡಾಕ್ಟ್ರೆ. ಈ ನಾಯಿಗಳು ಕುಡಿದು ಬಿಟ್ಟ ಎಂಜಲ ಹಾಲು.

ಅರವಿಂದ– ಮುಚ್ಚು ಬಾಯಿ ಗರ್ಭಪಾತ ಮಾಡಿಸಿಕೊಳ್ಳುವುದಕ್ಕಾಗಿ ನನ್ನಾಸ್ಪತ್ರೆಗೆ ಬಂದು, ನನ್ನ ಮೇಲೆ ಅಪವಾದ ಹೊರಿಸುವೆಯಾ? ನನ್ನ ಮರ್ಯಾದೆಯ ಗತಿ ಏನಾಗುತ್ತನ್ನೊ ಪ್ರಜ್ಞೆಯಿದೆಯಾ ನಿನಗೆ?

ವಿಶಾಲ– ಕಳ್ಳನಿಗೊಂದು ಪಿಳ್ಳೆ ನೆವ ಅನ್ನುವಂತೆ, ಸುಳ್ಳುಗಳನ್ನು ಪೋಣಿಸುವ ಜಾಣತನ ಯಾಕ ಮಾಡ್ತೀರಿ ಡಾಕ್ಟ್ರೆ? ಶೀಲ ಕಳೆದುಕೊಂಡ ಹೆಣ್ಣಾದ ನಾನೇ ನನ್ನ ಮೈ ಕದ್ದ ಗಂಡಸರ ಸಂಖ್ಯೆಯನ್ನು ಅಂಕೆ ಮಾಡಿ ಹೇಳುತ್ತಿರುವಾಗ, ಗಂಡು ಗುಂಡಿಗೆಯ ಗಂಡಸರಾದ ನೀವೇಕೆ ಸತ್ಯ ಹೇಳಲು ಶಂಕೆ ಪಡುತ್ತೀರಿ? ನೀವು ಮೂವರೂ ತಿಂದಿರುವುದು ನರಕವೇ ಅಂದಾಗ, ನಿಮ್ಮ ಹರಕು ಮನಸ್ಸುಗಳು ಸತ್ಯವನ್ನು ಬಚ್ಚಿಡಲು ಪ್ರಯತ್ನಿಸುವುದರಲ್ಲಿ ಅರ್ಥವಿಲ್ಲ. ಮುಸುರೆಗೆ ಮುತ್ತುವ ನೋಣಗಳ ಜಾತಿ ನಿಮ್ಮದಾಗಿರುವಾಗ ನೀತಿಯೂ ಒಂದೇ ಆಗಿರಬೇಕಲ್ಲವೆ?

ಅರವಿಂದ– ಮೂರ್ಖ ಹೆಣ್ಣೆ, ಸಲಿಗೆ ಕೊಟ್ಟ ನಾಯಿ ಅಡಿಗೆ ಮನೆಗೆ ಬಂದಂತೆ ಅಬಲೆಯೆಂದು ಅನುಕಂಪ ತೋರಿಸಿದ್ರೆ, ನನ್ನ ಪಾಲಿಗೆ...

ಭೋಜರಾಜ- ದುಷ್ಟ ಗ್ರಹವಾದ್ಲು ಅಂತೀರಾ?

ಅರವಿಂದ- ನೋಡಿ ಸಾರ್...

ಭೋಜರಾಜ- ಡಾಕ್ಟ್ರೆ, ಯಾಕ ಸುಮ್ಮನೆ ನಮ್ಮನ್ನು ಮೆಚ್ಚಿಸೋ ಹುಚ್ಚು ತನ ಮಾಡ್ತಿರಿ? ಮೀನಿಗೆ ಈಜು ಕಲಿಸುವ ಬುದ್ಧಿವಂತಿಕೆ ಪ್ರದರ್ಶಿಸುವ ಮೂರ್ಖತನ ಮಾಡಬೇಡಿ.

ವಿಕ್ರಂ- ಒಂದು ವೇಳೆ ಪ್ರಯತ್ನ ಮಾಡಿದ್ರೆ ಹುಲಿ ಬಾಯಿಗೆ ಸಿಕ್ಕ ಜಿಂಕೆ, ಹಸಿರಿಗೆ ಬಾಯಿ ಹಾಕಲು ಅವಸರ ಪಟ್ಟಂತೆಯೇ ಸರಿ.

ವಿಶಾಲ– ಈಗಲಾದ್ರು ಅರ್ಥವಾಯಿತೆ ಡಾಕ್ಟ್ರೆ ಈವರ ಬುದ್ಧಿಯ ಗೂಡಾರ್ಥ. ಯಾಕ ಸುಮ್ಮನೆ ಅರ್ಥವಿಲ್ಲದ ಕಾಲ ವ್ಯರ್ಥ ಮಾಡುತ್ತಿದ್ದಿರಿ? ಮಹಾ ಕಾಮುಕರ ಸಂಗಮವಾಗಿರುವ ಈ ಸಮಯದಲ್ಲಿ, ಮತ್ತೆ ಬೇರೊಂದು ಹೆಣ್ಣಿನ ಬಾಳನ್ನು ಹಾಳು ಮಾಡುವ ವಿಚಾರ ಕೂಟ ನಡಸಿರಿ. ಕಾಲ ಕೂಡಿ ಬರುವತನಕ ನಿಮ್ಮಂತವರ ಕುಲ ಬೆಳಿಯುತ್ತಲೇ ಇರಬೇಕು. ಆದರೆ, ಲಂಕೆ ತಪ್ಪಿದ ಬೆಂಕಿ ಊರು ಸುಟ್ಟರೂ, ನೀರು ಬಿದ್ದಾಗ ಆರದೆ ಇರಲಾರದು. ಅಲ್ಲಿ ಯವರೆಗೂ ಈ ಸಮಾಜದಲ್ಲಿ ನಿಮ್ಮ ದಗುಲುಬಾಜಿ,ದರಬಾರು ನಡೆಯುತ್ತಲೇ ಇರಲಿ, ಪಾಪದ ಫಲ ಪಾಶವಾಗಿ ನಿಮ್ಮ ಕತ್ತಿಗೆ ಬೀಳೋವರೆಗೂ. ಅಬಲೆ ಹೆಂಗಳೆಯರ ಬಾಳನ್ನು ಗೋಳಿಗೀಡು ಮಾಡಿ, ನೀವು ಮಾತ್ರ ಮಜದಿಂದ ಮೆರೆಯುತ್ತಲೆ ಬದುಕಿರಿ. ದಿನಕ್ಕೊಂದು ಹೆಣ್ಣನ್ನು ಮಣ್ಣು ಸೇರಿಸಿ, ಹೆಣ್ಣು ಕುಲವನ್ನೇ ನಿರ್ನಾಮ ಮಾಡಲು ಸಿದ್ಧರಾಗಿ ನಿಲ್ಲಿರಿ. ನಡೆಯಲಿ–ನಡೆಯಲಿ ನಿಮ್ಮ ಕುಟಿಲ ವ್ಯಾಪಾರ, ಹೆಣ್ಣಿನ ಬಲತ್ಕಾರ. (ಹೋಗುವಳು)

ಭೋಜರಾಜ– ಯಾಕ ಡಾಕ್ಟ್ರೆ, ಅವಳ ಮಾತು ಕೇಳಿ ಗರ ಹೊಡೆದು ನಿಂತು ಬಿಟ್ರೆಲ್ಲಾ?

ವಿಕ್ರಂ– ತಮ್ಮ ಹುಳುಕು ಬೆಳಕಿಗೆ ಬಂತಲ್ಲಾ ಅನ್ನುವ ಕಳವಳದಿಂದ ಚಳಿ ಹತ್ತಿರಬೇಕು ಪಾಪ.

ಅರವಿಂದ– ನೋಡಿ, ಸುಮ್ಮನೆ ಸುತ್ತಿ ಬಳಸಿ ಮಾತಾಡಬೇಡಿ. ನಾ ಮಾಡಿರುವ ಅಪರಾಧವಾದರೂ ಏನು, ಸಾಭೀತು ಮಾಡಿ ತೋರ್ಸಿ.

ಭೋಜರಾಜ– ಸಾಭೀತು? (ನಗು) ವಿಕ್ರಂ..

ವಿಕ್ರಂ– ವಾಟ್ ಡ್ಯಾಡಿ...?

ಭೋಜರಾಜ– ಕಬ್ಬಿಣ ಹದಕ್ಕೆ ಬರ್ಬೇಕಾದ್ರೆ, ಏನ್ಮಾಡ್ಬೇಕು ಗೊತ್ತೇನು?

ವಿಕ್ರಂ– ಚೆನ್ನಾಗಿ ಕಾಯ್ಸಿ, ಸುತ್ತಿಗೆ ಪೆಟ್ಟು ಹಾಕಿದ್ರೆ, ಹದಕ್ಬಂದ ಕಬ್ಬಿಣ, ಬಯಸಿದ ಆಕಾರ ಕೊಡುತ್ತದೆ ಡ್ಯಾಡಿ.

ಅರವಿಂದ– ನೀವು ನನ್ನನ್ನ ಹೆದ್ರಸ್ತಾಯಿದಿರಾ?

ಭೋಜರಾಜ– ನಾವ್ಯಾಕ ನಿಮ್ಮನ್ಹೆದರ್ಸೊ ಪ್ರಯತ್ನ ಮಾಡೋಣ? (ಫೋಟೋ ತೆಗೆದು) ಈ ಫೋಟೋದಲ್ಲಿ ಮೂಡಿರುವ ನಿಮ್ಮ ಚೋರ ಪ್ರಣಯದ ಪ್ರತಿರೂಪ, ನಿಮ್ಮ ಗುಂಡಿಗೆಯನ್ನು ಅದುರಿಸಲು ಸಿದ್ಧವಾಗಿದೆ. (ಕೊಟ್ಟು) ನೋಡಿ, ಕಣ್ತುಂಬ ನೋಡಿ.

ಅರವಿಂದ– (ನೋಡಿ ಗಾಬರಿಯಿಂದ) ಈ ಫೋಟೋ...

ವಿಕ್ರಂ– ನಿಮ್ಮ ತಲೆ ಹಿಡುಕ ಜಗ್ಗುನ ಕೈಯಿಂದ, ಇಪ್ಪತ್ತೈದು ಸಾವಿರ ರೂಪಾಯಿ ಬೆಲೆ ಹೊತ್ತು, ನಮ್ಮ ಕೈಯಿಗೆ ಬಂದಿದೆ ಡಾಕ್ಟೆ.

ಅರವಿಂದ– ಓ ಮೈ ಗಾಡ್... (ಚಡಪಡಿಸುವನು)

ಭೋಜರಾಜ– ಈ ಭಾವಚಿತ್ರವನ್ನು ವನಜಾಳಿಗೆ ತೋರಿಸಿದ್ರೆ ಸಾಕು, ನಿಮ್ಮ ಮೋಡಿಯ ಪ್ರೀತಿ ಅವಳಿಂದ ಓಡಿ ಹೋಗಿ ಬಿಡುತ್ತದೆ.

ವಿಕ್ರಂ– ಅಷ್ಟೇ ಅಲ್ಲ, ಅಬಲೆ ಹೆಣ್ಣಿನ, ಅದೂ ಗರ್ಭಿಣಿ ಹೆಣ್ಣಿನ ಶೀಲಹರಣ ಮಾಡಿದ ಅಪಾದನೆಯ ಮೇಲೆ, ನೀವು ಸೆರಮನೆಯ ಸೇವಕರಾಗುವ ದುರ್ದಿನ ಒದಗಿ ಬರುತ್ತದೆ. ಕಾರಣ. ಈಗ ನಾವು ಹೇಳಿದಂತೆ ಕೇಳಿ, ಹೆಣ್ಣಿನ ಜೊತೆಗೆ ಹೊನ್ನನ್ನೂ ಪಡೆಯಲು ಸಿದ್ಧರಾಗುತ್ತೀರೋ? ಇಲ್ಲಾ ಮರ್ಯಾದೆ ಕಳೆದುಕೊಂಡು ಹಿಡಿ ಮಣ್ಣನ್ನು ಕಣ್ಣಿಗೆ ಹಾಕಿಕೊಂಡು ಬೊಬ್ಬೆ ಹಾಕುವ ಪರಿಸ್ಥಿತಿಯನ್ನು ಆಹ್ವಾನಿಸುತ್ತೀರೋ?

ಅರವಿಂದ– (ಕೂಗಿ) ಖಂಡಿತಾ ಇಲ್ಲ. ನೀವ್ಹೇಳಿದಂತೆ ಕೇಳ್ತೀನಿ. ಅದ್ರೆ ನನ್ನ ಮರ್ಯಾದೆ ಕಳೆಯುವ ವಿಚಾರ ಮಾತ್ರ ಮಾಡಬೇಡಿ.

ಭೋಜರಾಜ– ಛೇ ಛೇ ಎಲ್ಲಿಯಾದರೂ ಉಂಟೆ ಡಾಕ್ಟೆ? ಹಾಯೋ ಹಸುವಾದರೂ, ಹಾಲು ಕೊಡುತ್ತೇ ಅಂದಾಗ, ಆ ಹಸುವಿಗೆ ಹುಲ್ಲು ತಿನ್ನಿಸದೆ ಕಲ್ಲು ತಿನ್ನಿಸುವ ಮೂರ್ಖತನ ನಾವ್ಯಾಕೆ ಮಾಡೋಣ?

ವಿಕ್ರಂ– ನೋಡಿ ಡಾಕ್ಟ್ರೆ, ನೀವು ಯಾವ ಹೆಣ್ಣು, ಹೊನ್ನು ಬಯ ಪ್ರೀತಿಯ ನಾಟಕವಾಡ್ತಿದ್ದಿರೊ ಈ ಎರಡರಲ್ಲಿ ಆ ಹೆಣ್ಣು ಸಂಪೂರ್ಣ ನಿಮ್ಮ ಸೊತ್ತಾಗುತ್ತಾಳೆ. ಆದರೆ, ಹೊನ್ನು ಮಾತ್ರ ಈ ಮೂವರಿಗೂ ಸಮಭಾಗ ವಾಗಿ ಹಂಚುತ್ತದೆ.

ಭೋಜರಾಜ– ಆದರೆ ಒಂದು ಕಂಡೀಷನ್ ಡಾಕ್ಟ್ರೆ.

ಅರವಿಂದ– ಏನದು?

ಭೋಜರಾಜ– ಖಾಲಿ ಬಾಂಡ್ ಪೇಪರಿನಲ್ಲಿ ವನಜಾಳ ಸಹಿ ಬೀಳು ವಂತೆ ಮಾಡುವ ಜವಾಬ್ದಾರಿ ನನ್ನದು. ನಂತರ ವಿಲ್ ಬರೆಸಲು ಫ್ಯಾಮಿಲಿ ವಕೀಲರ ಸಹಕಾರವೂ ನನಗಿದೆ. ಆದರೆ, ನೀವು ತಾಳಿ ಕಟ್ಟುವ ಹಿಂದಿನ ದಿನವೇ ಮೂವರ ಹೆಸರಿಗೆ ಸಮಭಾಗವಾಗಿ ವಿಲ್ ಬರೆಸಬೇಕು. ಇದಕ್ಕೆ ನಿಮ್ಮೊಪ್ಪಿಗೆ ಇದೆ ತಾನೆ?

ಅರವಿಂದ– ತಿಪ್ಪೆಯಲ್ಲಿ ಬೀಳ್ತಿದ್ದವನನ್ನು ಉಪ್ಪರಿಗೆ ಮೇಲೆ ಕೂರುಸ್ತೀ ನಂದ್ರೆ ಯಾರು ಬೇಡವೆನ್ನುತ್ತಾರೆ?

ವಿಕ್ರಂ– ಆಯ್ತಲ್ಲ. ಇನ್ನಾದ್ರೂ ಈ ಸ್ವಜಾತಿ ಬಾಂಧವರ ಬೆಸುಗೆಯ ಗುರುತಿಗೆ ಸಣ್ಣ ಪಾರ್ಟಿ ಮಾಡೋಣ.

ಅರವಿಂದ– ಸಣ್ಣ ಪಾರ್ಟಿಯೇಕೆ ಸಾರ್...

ಭೋಜರಾಜ– ದೊಡ್ಡಾಸ್ತಿಗೆ ಅಧಿಪತಿಗಳಾಗುವ ಭೂಪರು ನಾವು, ದೊಡ್ಡ ಪಾರ್ಟಿನೆ ಮಾಡೋಣ ಅಂತಾರೆ ಡಾಕ್ಟ್ರು. ಅಲ್ವೆ ಮಿ॥ ಅರವಿಂದ?

ಅರವಿಂದ– ಎಸ್...! (ಮೂವರೂ ನಗುತ್ತಾ ಹೋಗುವರು)

## ಹತ್ತನೆಯ ದೃಶ್ಯ

### ರಸ್ತೆ

(ಭೋಜರಾಜ, ಮೂರ್ತಿ ಬರುವರು)

ಭೋಜರಾಜ– ಮೂರ್ತಿ, ಇವತ್ತು ನನ್ನಾಸೆ ಬಸಿರು ಚಿಗುರಿ, ಹಸಿರಾ

ಮೂರ್ತಿ– ಅಂದ್ರೇನ್ರಿ?

ಭೋಜರಾಜ– ನಿನಗರ್ಥವಾಗುವ ವಿಷಯಲ್ಲದು. ಸುಮ್ಮನಿದ್ದು ಬಿಡು.

ಮೂರ್ತಿ– ಖರೆರಿ. ಇತ್ತಿತ್ಲಾಗ ನನ್ನ ಮಾತು ನನಗ್ಹ ತಿಳಿದಂಗಾಗೇತಿ ಅಲ್ಲ ನಾ ಗಂಡ್ಸರ ಹೌದಲೊ?

ಭೋಜರಾಜ– ಈ ಅನುಮಾನ್ಯಾಕ ಬಂತಲೇ?

ಮೂರ್ತಿ– ಅನುಮಾನಲ್ಲ, ಅವಮಾನ. ಆ ರಂಗನ ಮುಂದ ನನ್ನ ಹುಡಿಗ್ನ ಮಾತ್ನಾಳಲ್ಲ ಲಿಲ್ಲಿ, ಈ ಅವಮಾನ ಹೆಂಗ ಸಹಿಸಿಕೊಳ್ಲಿ?

ಭೋಜರಾಜ– ನೋಡು ತಮ್ಮಾ, ಈ ಸಮಾಜದಾಗ ನಮಗ ಅವಮಾನದ ಅಗ್ನಿ, ಬಹುಮಾನದ ಸಿಗಲಿ, ಇವೆರಡೂ ಸುಟ್ಟ ಬೂದಿ ಇದ್ದಂಗ.

ಮೂರ್ತಿ– ಬೂದಿದ್ದಂಗ?

ಭೋಜರಾಜ– ಹೌದಲೆ, ಸುಟ್ಟುಬೂದಿನ ತಿಪ್ಪಿಗೆ ಚಲ್ಲಿದ್ರ ಗೊಬ್ರಾಗುತ್ತ. ಅದನ್ನ ಗುಡಿಯಾಗಿಟ್ರ ಅಂಗಾರಾಗುತ್ತ. ಅಂದ್ರ ಆ ಬೂದಿ ತಿಪ್ಪಿಗೆ ಬಿದ್ರೂ ನೆಲಿ ಐತಿ, ಗುಡಿಯಾಗಿಟ್ರ ಬೆಲಿ ಐತಿ. ಹಂಗ ನಾವು. ಸುಮ್ಮನ ಯಾಕ ತಲಿಕೆಡಿಸ್ಕೊಂತಿ ನಡಿ ಮನಿಗೆ.

ಮೂರ್ತಿ– ನೀವು ನಡಿರಿ. ನಾ ಸ್ವಲ್ಪ ಸೂಳ್ಯಾರ ಮನಿಕಡಿ ಹೋಗಿ ಬರ್ತೀನಿ.

ಭೋಜರಾಜ– ಯಾಕಲೆ ?

ಮೂರ್ತಿ– ಇವತ್ತು ರಾಖಿ ಹಬ್ಬ. ರಾಖಿ ಕಟ್ಟಿಸ್ಕೊಂಡು ಬರ್ತೀನಿ.

ಭೋಜರಾಜ– ಅಂದ್ರ. ಊರಾಗ್ಯಾರೂ ರಾಖಿ ಕಟ್ಟೋರಿಲ್ಲೇನು ?

ಮೂರ್ತಿ– ಅದಾರ. ಆದ್ರ, ಸೂಳ್ಯಾರ್ಹತ್ರಾನ ಕಟ್ಟಿಸಿಕೊಳ್ಳೋ ಕೆಟ್ಟ ಚಟ ಐತ್ರಿ ನನಗ.

ಭೋಜರಾಜ– ನಡಿ ಹಂಗಾರ ನಾನೂ ಬರ್ತೀನಿ. ನೀ ರಾಖಿ ಕಟ್ಟಿಸ್ಕೊ.

ಮೂರ್ತಿ– ನೀವು ಹಾಸಿಗಿ ಹಾಸೀರಿ. ಬೇಪ್ ಗಂಟು ಬಿದಿ. ನೀವು.

ಅವತ್ನೋಡಿದ್ರೆ ಲಿಲ್ಲಿ ಹಿಡ್ಕೊಳ್ಳಾಕ ಹೋದ್ರಿ, ಆಕಿ ಕೆಲ್ಸನ ಬಿಟ್ಕೊಟ್ಹೋದ್ಲು. ಕಣ್ಮುಂದಿದ್ದಿದ್ರೆ ಪ್ರಯತ್ನ ಮಾಡಿ, ಬಲಿಗೆರ ಹಾಕ್ಕೊಂತಿದ್ದೆ.

ಭೋಜರಾಜ– ಯಾಕ ಮಾತಾಡ್ತಿಯಲೆ? ನಾಯಿಗತಿ ಆಕಿ ಬೆನ್ನತ್ತಿ ತಿರುಗ್ತಿದಿ. ಒಂದಿನವರ ಸಿಂಪಲ್ಲಾಗಿ ಕಿಸ್ ಕೊಡಾಕ ನಿನಗಾಗುವಲ್ದು. ಅದ ನನ್ನ ಕೈಗೆ ಸಿಗಲಿ ನೋಡು.

ಮೂರ್ತಿ– ಆಕಿನ ಬಂದ್ಲು ಅದೇನ್ಮಾಡ್ತಿರೊ ಮಾಡ್ರೆಹ್ಂಗಾರ.

(ಲಿಲ್ಲಿ ಬರುವಳು)

ಭೋಜರಾಜ– ಏನೇ ಲಿಲ್ಲಿ, ಎಲ್ಲಿಗ್ಹೊಂಟಿದಿ?

ಲಿಲ್ಲಿ– ಯಾಕಪಾ ಭೋಜಣ್ಣ, ಹೆಂಡತೀನ ಕರದಂಗ ಕರೀತಿಯಲ್ಲ ? ಮೈಮ್ಯಾಲ ಖಬರಿಲ್ಲಿ. ಇಲ್ಲಾಂದ್ರೆ (ಬಳೆ ಏರಿಸ್ತುತ್ತಾ) ಬಾಯಾನ ಹಲ್ಲು ನೆಲಕ್ಕ ಬಿದ್ದಾವು.

ಮೂರ್ತಿ– ಸಾವ್ಕಾರ್ರ. ಬಳಿ ಏರ್ಸಾಕತ್ತಿದ್ಲು. ನಿಂತ್ರ ಕೆಡ್ತೇವಿ. ದೌಡು ಜಗಾ ಬಿಡೋಣನಡ್ರಿ.

ಭೋಜರಾಜ– ಮುತ್ಯಾಳ, ಇಕಿಗ್ಹೆದರಿ ಜಗಾ ಬಿಡ್ತಿಯಾ ? ಇನ್ನರ ಗಂಡ್ಸಾಗಲೇ ಗಂಡ್ಸಾಗು.

ಮೂರ್ತಿ– ಇಕಿ ಮುಂದ ಯಾವ ಟೈಪ್ ಗಂಡ್ಸಾಗ್ಬೇಕನ್ನೋದ್ವು ತಿಳಿವಂಗಾಗೇತಿ ನನಗ.

ಭೋಜರಾಜ– ಏನಂದೆ, ಜಿಂಕೆ ಮರಿಯೆ ? ನನ್ನ ಹಲ್ಲುದುರುಸ್ತಿಯಾ? ಅಷ್ಟು ಧೈರ್ಯ ಐತೇನು ನಿನಗ ?

ಲಿಲ್ಲಿ– ಧೈರ್ಯ, ನಿಮ್ಮಪ್ಪನಷ್ಟೈತಿ. ನಿನ್ನಂತ ನೀಚನಿಂದ ಮಾನ ಕಳ್ಕೊಂಡು, ಪ್ರಾಣ ಬಿಡೋ ಅಳ್ಕೆದೆ ಹೆಣ್ಣಲ್ಲ ನಾನು. ಹುಟ್ಟು ಗರತಿ ಮಗಳದೀನಿ. ಮೈ ಮುಟ್ಟಾಕ್ಬಂದ್ರೆ, ನಿಂತ ಜಗದಾಗ ಹರ್ದು ತಿಂದುಬಿಟ್ಟೇನು.

ಮೂರ್ತಿ– ಲಿಲ್ಲಿ ತಿನ್ನೋದಾದ್ರ ಇವರೊಬ್ರುನ್ನ ತಿನ್ನು, ನನ್ನ ಸುದ್ದಿಗ್ಬರ್ಬೇಡ

ಭೋಜರಾಜ– ಮೂರ್ತಿ ಸುಮ್ನಿರ್ತಿಯೋ ಬಡಿಸಿಕೊಂತಿಯೊ? ಇಕಿ ನನ್ನ ತಿಂತಾಳ?

ಮೂರ್ತಿ– ನೋಡ್ರೆಲ್ಲಿ ದುರಗವ್ವಂಗ ಬಾಯಿ ತರ್ಕೊಂಡು ತಿನ್ನಾಕ ನಿಂತಾಳ.

ಭೋಜರಾಜ– ಹಂಗಾರ್ವಂಗ ತಿಂತಾಳ ತಿನ್ಲಿ ನಾನೂ ನೋಡ್ತಿನಿ.

ಮೂರ್ತಿ– ಹೆಂಗ ತಿಂತಾಳ ಜಗಾನೋಡಿ ಬಾಯ್ಹಾಕ್ತಾಳೆ. ಹರ್ಕೊಂಡು ತಿಂತಾಳ.

ಭೋಜರಾಜ– ನನ್ನ ಹುಡುಗಿ? ತಿಂತಿಯೇನು ಬಾ ಹಂಗಾರ ನಿನ್ನ ಗುಲಾಬಿ ಗಲ್ಲಾನ ಹರ್ಕೊಂಡು ನಾ ತಿಂತೀನಿ (ಹಿಡಿಯಲು ಹೋಗುವನು ಅಲ್ಲಿ ಕಪಾಳಕ್ಕೆ ಹೊಡೆಯುವಳು)

ಮೂರ್ತಿ– ಜಯ ಜಯ ನಮಃ ಪಾರ್ವತಿ ಪತಿ ಹರ ಹರ ಮಹಾದೇವ

ಭೋಜರಾಜ– ಲೇ ಮೂರ್ತಿ...

ಮೂರ್ತಿ- ನನ್ನ ಮ್ಯಾಲ್ಯಾಕ ಸಿಟ್ಟಿಗ್ಬರ್ತೀರಿ? ನಾ ಬಡ್ಕೊಂಡೆ ಬಳಿ ಏರ್ನಿ ಸಿಗ್ನಲ್ ಕೊಟ್ಟಾಳ. ಅಕಿ ಸುದ್ದಿಗ ಹೋಗೂದು ಬ್ಯಾಡಂತ. ಕೇಳಿದ್ರೆನು ನನ್ನ ಮಾತ?

ಲಿಲ್ಲಿ– ಯೇ ಭೋಜರಾಜ ನಿನ್ನಂತ ಚೆಂಡಾಲನ ಕೈಗೆ ಅಷ್ಟು ಸರಳ ಸಿಗೋ ಹೆಣ್ಣಲ್ಲ ನಾನು

ಮೂರ್ತಿ– ಬರೊಬ್ಬರಿ. ಅವತ್ತು ನೀವಿಕಿನ ಕಡ್ಸಾಕ್ಹೋಗಿದ್ರಿ. ಆ ರೊಚ್ಚೈತಿ ನಿಮ್ಯಾಲ. ಇನ್ನೂ ನನ್ನ ಕೈಗೆ ಅಗದಿ ಸರಳ ಸಿಕ್ತಾಳ ಹೌದಿಲ್ಲ ಲಿಲ್ಲಿ?

ಲಿಲ್ಲಿ- (ಬಳಿ ಏರಿಸುತ್ತ) ಹತ್ರ ಬಂದು ನೋಡು ಗೊತ್ತಾಗುತ್ತೆ.

ಮೂರ್ತಿ– ಬ್ಯಾಡ್ಬಿಡು ಮಾರಾಯುಳ. ಮೊದಲ್ಹು ನಮ್ಹಲ್ಲಿನ ಬೇರೂ ಅದ್ರದಾವ.

ಭೋಜರಾಜ– ನಸ್ಮಗನೆ, ಅಕಿ ನನ್ನ ಕಪಾಳಕ್ಕೆ ಹೊಡದಾಳ, ನೀ ಇಕಿನ ರಮುಸಾಕ್ಹತಿಯಾ?

ಮೂರ್ತಿ– ಮತ್ತೇನು ಮಾಡ್ಲಿ, ನಾನ್ನು ತಡವಿ ನಿಮ್ಹಂಗ ಕಟಿ ಸ್ಕೊಳ್ಳಿನು?

ಭೋಜರಾಜ– ಮಾತು ಬಿಟ್ಟು ಮೊದಲಿಕಿನ ಹೊತ್ಕೊಂಡು ನಡಿ ಅಂದೆ

ಮೂರ್ತಿ- ಇಕಿನ್ನ... ನಾ ಹೊರಬೇಕಾ? ಸಾವ್ಕಾರ್ರ. ಮನ್ನೆ ಅಟ್ಟದ ಮ್ಯಾಗಿಂದ ಬಿದ್ದು ಸಡನ ಬಾದಾಗೇತಿ. ಬಗ್ಗಿದ್ರ ಏಳೂದು ಒಜ್ಜೈತಿ. ನೀವು ಹೊತ್ಕೊಳ್ರಿ. ನಾ ಹಿಂದ ಬಾಡಿಗಾಡಾಗಿ ಬರ್ತೀನಿ.

ಭೋಜರಾಜ– ಥತ್ ಯೂಸ್ ಲೆಸ್ ಫೆಲೊ. ಏ ಸೊಕ್ಕಿನ ಹೆಣ್ಣೆ ನನ್ನ ಕಪಾಳಕ್ಕ ಹೊಡ್ದೆಲ್ಲಾ? ನಿನ್ನ ಸುಮ್ನ ಬಿಡುದಿಲ್ಲ. ಮಾನ ಕಳೆದು ಮಣ್ಣು ಸೇರುಸ್ತೀನಿ. ಇವತ್ಯಾರು ಬಂದು ಬಿಡಸ್ತಾರ ಬಿಡಿಸ್ಲಿ ನಿನ್ನ ನೋಡ್ತೀನಿ,

(ರಂಗ ಬರುವನು)

ರಂಗ- ಯಾರ್‍ಯಾಕ? ಇಲ್ಲೆ ಅದಾನ್ನೋಡು ಬಹದ್ದೂರ ಗಂಡು.

ಭೋಜರಾಜ– ರಂಗ್ಯಾ...

ರಂಗ- ಯಾಕಲೇ ಮಂಗ್ಯಾ...?

ಭೋಜರಾಜ– ನನಗ ಮಂಗ್ಯಾ ಅಂತ, ಲೇ ಹಚ್ಚಿ ಮಾತಾಡ್ತಿಯೇನೋ ಬಡ್ಡಿ ಮಗನೆ.

ರಂಗ– ನಿನಗ ಮಂಗ್ಯಾ ಅನ್ದೆ, ಮನುಷಾ ಅಂತಾರೇನೋ ಅಡ್ನಾಡಿ ನನ್ನ ಮಗನೆ.

ಮೂರ್ತಿ– ಸಾವ್ಕಾರ್ರ ಈಗರ ದೌಡು ಮನಿ ಸೇರಾನ ಬರ್ರಿ. ಏಕ್ ದಮ್ ಡೆಂಜರ್ ಪೊಜಿಷನ್ನಿಗೆ ಬಂತೀಗ. ನನಗಂತೂ ನಡುಗ ಶುರುವಾಗೇತಿ

ಭೋಜರಾಜ– ಹಂಗ ನಡುಗಿ ಸಾಯಿ ಮಗನ. ಲೇ ರಂಗಾ, ನಾ ಯಾರನ್ನೋ ಪ್ರಜ್ಞೆಇಲ್ದಂಗ ಮಾತಾಡ್ತಿಯಾ?

ರಂಗ– ನನ್ನ ಕಣ್ಮುಂದ ದೇಶೋದ್ಧಾರದ ಕೆಲ್ಸ ಮಾಡಾಕ ನಿಂತಿದ್ದಿ ಅಂದಾಗ ನೀ ಯಾರನ್ನೊ ಪ್ರಜ್ಞೆ ಹೆಂಗ ತಪ್ಪಿತಿ?

ಮೂರ್ತಿ– ಏನಲೇ ರಂಗ ಹಂಗ್ಯಾಕ ಮಾತಾಡಿದ್ರಿ? ನಿನಗ ಸಂಬ್ಳ ಕೊಡೊ ಧಣಿ ಅವಾರವರು. ಸಿಟ್ಟಿಗೆದ್ದು ನೌಕ್ರಿಯಿಂದ ತಗೆದೊಗದ್ರ ಮಣ್ಣು ತಿಂದ್ಕೊಂತ ಕುಂದ್ರುಬೇಕಾಗುತ್ತ.

ರಂಗ– ಅಪ್ಪಾ ನಾಯಿ ಬಾಲ್ದಂತವನ, ಇವರ್ದು ಕಂಡವರ ಮನಿಯಾಗ ದಂಡದ ಕೂಳ ತಿಂದ್ಕೊಂತ ಬಿದ್ದಾರ, ನನಿಗ್ಹ್ಯಾಂಗ ಧಣಿ ಆಗ್ತಾರ್ಲೆ? ನನ್ನ ಕೆಲ್ಸಕ್ಕ ತಗೊಂಡಿರೋದ ವನಜಮ್ಮ, ಸಂಬ್ಳ ಕೊಡೋದು ವನಜಮ್ಮ, ಅವ್ರ ಮನಸ್ಸು ಕೆಟ್ಟಾಗಿ ಇವತ್ತ್ ನೌಕ್ರಿಯಿಂದ ತಗಿಲಿ, ಸಂತೋಷದಿಂದಹೋಗ್ತಿನಿ. ಆದ್ರ ಇವ್ರಿಗೇನು ಅಧಿಕಾರ್ಬೈತಲೆ? ಆ ದಮ್ಮಿದ್ರೆ ನೌಕ್ರಿಯಿಂದ ತಗಿ ಅಂತ ಹೇಳಿವ್ರಿಗೆ.

ಮೂರ್ತಿ– ಏನ್ರಿದು, ಈ ಮಗ ನಿಮಗ ಸವಾಲ್ ಹಾಕ್ತಸಲ್ಲ?

ಭೋಜರಾಜ– ಹಾಕ್ದೆ ಏನ್ಮಾಡ್ತಾನ್ಲೆ, ಇವನ ಜೊತ್ಯಿಂದೆ ನನ್ನ ಸೊಸೆ ದೊಂದು ದೊಡ್ಡ ಧೈರ್ಯಾನೆ ಐತಲ್ಲ.

ಮೂರ್ತಿ– ಇಲ್ರಿ, ಈ ಮಗನ ಮಾರಿ ನೋಡಿದ್ರ, ಹುಲಿಸ್ಯೆತ ನಿಂತ ಜಗಾದಾಗ ನಿದ್ದಿ ಮಾಡುತ್ತ ಸಾವ್ಕಾರ್ರ. ಸಂಬಂಧಿಲ್ಲದ ವಿಷಯ್ದಾಗ ತಲಿ ಹಾಕೋದು ಬಾಳಿ ಮಗ ಅಲ್ರಿ ಇಕೇನು ಸಂಬಂಧಂತ ಪರವಹಿಸ್ಕೊಂಡು ಬಂದಿರ್ಬೇಕು?

ರಂಗ– ಏನ್ಸಂಬಧ?

ಮೂರ್ತಿ– ಹೌದಲೇ ನಿನಗೇನು ಸಂಬಂಧ?

ರಂಗ– (ಲಿಲ್ಲಿ ಭುಜದ ಮ್ಯಾಲ ಕೈ ಹಾಕಿ) ಇಕಿ ನನ್ನ ಲವರ್?

ಮೂರ್ತಿ– ಇಕಿ ನಿನ್ನ ಲವರ್ರು? ನೋಡ್ರಿ ಸಾವ್ಕಾರ ನನಗೆ ಹುಚ್ಚು ಹಿಡ್ಯಾಕ ಹೆಂಗ ಮಾತಾಡ್ತಾನ? ಆ ಪೋಸರ ಹೆಂಗ ಕೊಟ್ಟು ನಿಂತಾನ್ನೋಡ್ರಿ ನನ್ನ ಹೊಟ್ಟಿ ಉರ್ಯಾಕ?

ಭೋಜರಾಜ– ನೋಡ್ತಿದೀನಪ್ಪಾ ನೋಡ್ತಿದಿನಿ. ಲೇ ರಂಗ್ಯಾ ಈ ಭೋಜರಾಜನ್ನ ಕೆಣಕಿ ಬದ್ಕೊದು ಬಾಳಕಷ್ಟ ಈ ಮಾತು ನೆನಪಿಟ್ಕೊಳಲೆ ನೆನ ಪಿಟ್ಕೊ. ನಡಿಯಲೆ ಮೂರ್ತಿ.

(ಹೋಗುವನು)

ಮೂರ್ತಿ- ನನ್ಮಾತೂ ನೆನಪಿಟ್ಕೊಳಲೇ, ಇನ ರ ಇಕಿನ ಕೆ.ಬಿಟಿ. ಛಲೋ ಆತು. ಇಲ್ಲಾಂದ್ರೆ...

ರಂಗ– ಏನ್ಮಾಡ್ತಿಯಾ?

ಮೂರ್ತಿ– ಒಬ್ಬಾವನ ಸಿಕ್ಕಾಗ ಹೇಳ್ತೀನಿ ಮಗನ. (ನಿಂತು) ಲೇ ಲಿಲ್ಲಿ......

ಲಿಲ್ಲಿ– ಯಾಕಲೇ ಗ್ರಹಚಾರ ಕೆಟ್ಟವನ. (ಬಳಿ ಬರ್ತಾಳೆ)

ಮೂರ್ತಿ– ಹೊಗ ನಿನೌನು ಹಾಳಾಗ್ಹೋಗು. (ಹೋಗುವನು)

ರಂಗ– ಮತ್ತೇನು ಲಿಲ್ಲಿ ಸಮಾಚಾರ?

ಲಿಲ್ಲಿ– ಹೊಗ ನಿನ್ಕೂಡ ಮಾತಾಡಾಕ ನಾಚಿಗಿ ಬರುತ್ತ.

ರಂಗ– ನಾಚಿಗಿ? ಒಮ್ಮಿಗೆ ಯಾಕ ಬಡುಕೊಂತದ?

ಲಿಲ್ಲಿ– ನೀ ನನಗ ಲವ್ಹರ್ ಅಂದೆಲ್ಲ.

ರಂಗ– ಅದಕ ನಾಚಿಗಿ ಬಂತೇನು? ಅನಾದಿ, ಆ ನನ್ನ ಮಕ್ಳ ಕೈಯಿಂದ ನಿನ್ನ ಪಾರು ಮಾಡೋ ಸಲುವಾಗಿ ಹಂಗ ನಾಟಕ ಮಾಡಿದೆ.

ಲಿಲ್ಲಿ– ಹಂಗಾರ ನನ್ನ ಲವ್ ಮಾಡದಿಲ್ಲ?

ರಂಗ– ಎಲ್ಲಿ ಲವ್ ತರ್ತಿ, ಮನಸಿನ ತುಂಬಾ ಬರೆ ನೋವೆ ತುಂಬೇತಿ. ಮನುಷ್ಯಾ ನಾ ಕಂಡೀಪನ್ನಿಲ್ಲೇ ಲಿಲ್ಲಿ.

ಲಿಲ್ಲಿ– ಥೂ. ಸ್ವಲ್ಪರ ಕರುಣೆಲ್ಲಲ್ಲ ನಿನಗ. ನನ್ನ ಜೀವನ ಹಾಳು ಮಾಡಾಕ. ಬೀದಿ ನಾಯಿಗಳು ಬೆನ್ನು ಬಿದ್ದಿರೋದು ಕಣ್ಣಾರೆ ಕಂಡ್ರೂ. ನಿನ್ನ ಕಲ್ಲು ಹೃದಯ ಕರಗುವಲ್ದಲ್ಲ. ಅತು ಬಿಡು ಒತ್ತಾಯದ ಪ್ರೀತಿ ಜೀವನಕ್ಕ ಕುತ್ತಾಗುತ್ತಂತ. ಸುಮ್ನ ನನ್ನಾಸೆ ಸಲುವಾಗಿ ನಿನಗ್ಯಾಕ ನಿರಾಸೆ ಮಾಡ್ಬೇಕು? ನನ್ನ ಹಣೆಬರ್ಹಾಗಿದ್ದುದ್ದ ನಾ ಉಣ್ತೇನಿ. ಬರ್ತೀನಿ ರಂಗು.

ರಂಗ– ಹುಚ್ಚಿ ನಿಂದ್ರು. ನೀತಿವಂತ ಹೆಣ್ಣಿನ ಕಣ್ಣಾಗ ನೀರು ಹರಿಸು ವಂತ ನೀಚ ನಾನಲ್ಲ. ನನ್ನ ಪರೀಕ್ಷೆಯೊಳಗ ನೀ ಗೆದ್ದಿ, ನನ್ನ ಮನಸ್ಸು ಕದ್ದಿ.

ಲಿಲ್ಲಿ– ಅಂದ್ರ ನೀನು...

ರಂಗ– ಲವ್ ಮಾಡಾಕ ರೆಡಿ.

ಲಿಲ್ಲಿ– ಖರೇನ ನೀ ಹೇಳೋದು?

ರಂಗ– ಸುಳ್ಳು ಹೇಳಾಕ, ನನ್ಹೇನು ಹೈಬ್ರಿಡ್ ಪ್ರೇಮ ಅಂತ ತಿಳದಿ ಯೇನು?

ಲಿಲ್ಲಿ– ಮತ್ತ, ಎಷ್ಟು ಹೆದರಿಸಿದ್ದೆಲ್ಲ?

ರಂಗ– ಪ್ರೇಮದ ವಿಷಯ ಹೆದರಿಕೊಂತ, ಹೆದರ್ಸಿಕೊಂತನ ಪ್ರಾರಂಭಾಗಬೇಕು, ಅಂದ್ರ ಸ್ವಾರಸ್ಯಿರುತ್ತ. ಅವಸ್ರಕ ಬಿದ್ರ ಸಕ್ರಿ ತಿಂದು ಚಾ ಕುಡ್ದ್ಹಂಗಾಗುತ್ತ.

ಲಿಲ್ಲಿ– ಛೀ ಛೀ ನಮ್ಮ ಪ್ರೇಮ ಸಪ್ಪ್ಯಾಗಬಾರದು. ಸಾಯುತನ ಹುರುಪಿನ್ಯಾಗ ಇರಬೇಕು.

ರಂಗ– ಎಪ್ಪತ್ತು ಕಳೆದ್ರೂ, ನೀ ಒಪ್ಪಿರಬೇಕು ಅಂತ ಗಂಡ್ಸನದಿರಿ.

ಪದ

## ಹನ್ನೊಂದನೆಯ ದೃಶ್ಯ

## ಕಟ್ ಜಂಗಲ್

(ವಿಶಾಲ ಬರುವಳು)

ವಿಶಾಲ– ಹೆಣ್ತನ ಕಳೆದುಕೊಂಡ ಹೆಣ್ಣಿಗೂ, ಮಣ್ಣು ಸೇರುವ ಹೆಣಕ್ಕೂ ಯಾವ ವ್ಯತ್ಯಾಸವೂ ಇಲ್ಲ. ಆದರೂ, ಹೆಣ್ತನ ಕಳೆದುಕೊಂಡು ಬದುಕುವ ಹೆಣ್ಣಿಗಿಂತಲೂ ಈ ಮಾನವ ಪ್ರಪಂಚವನ್ನೇ ಮರೆತು ಮಣ್ಣು ಸೇರುವ ಹೆಣವೇ ಎಷ್ಟೋ ಪಾಲು ಮೇಲು ಅಂದಾಗ, ನಾನು ಬದುಕುವುದರಲ್ಲಿ ಅರ್ಥವೇನಿದೆ? ಶೀಲ ಕಳೆದುಕೊಂಡಿರುವ ನಾನು ಈ ಸಮಾಜದಲ್ಲಿ ಮಾದರಿ ಹೆಣ್ಣಾಗಿ ಬದುಕಲು ಸಾಧ್ಯವಿದೆಯೇ? ಬದುಕಿದರೂ ಅದಕ್ಕೊಂದು ಬೆಲೆ ಇದೆಯೇ? ಬೆಲೆ ಇದ್ದರೂ, ಆ ಬದುಕಿಗೆ ನಿರ್ದಿಷ್ಟವಾದ ನೆಲೆ ಸಿಗುತ್ತದೆಯೇ? ನೆಲೆ ಸಿಕ್ಕರೂ, ನನ್ನ ಶೀಲವನ್ನು ಕೊಲೆ ಮಾಡಿದವರ ತಲೆ ತೆಗೆಯಲು ನನ್ನಿಂದಾಗುತ್ತದೆಯೇ? ಖಂಡಿತಾ ಸಾಧ್ಯವಿಲ್ಲ. ಈ ಕಲಿಯುಗದ ಒಬ್ಬ ನೀಚ ಪುರುಷರ ತಲೆಗಳು, ಹೆಣ್ಣಿನ ಪಾಲಿಗೆ ಮಾರಕವಾಗಿ ಸೃಷ್ಟಿಯಾಗುತ್ತಲೆ ಇರುತ್ತವೆ. ಅಂದಾಗ, ಇಂಥವರ ತಲೆ ತಗಿಯುವ ಹುಚ್ಚು ಸಾಹಸ ಮಾಡುವುದಕ್ಕಿಂತ ನನ್ನ ಪ್ರಾಣ ಕಳೆದುಕೊಳ್ಳುವುದೇ ಲೇಸಲ್ಲವೆ?

(ನಗು) ಈ ಪ್ರಶ್ನೆಗೆ ಮತ್ತೊಬ್ಬರ ಉತ್ತರ ಕಾಯುವುದಕ್ಕಿಂತ, ನಾನೇ ಸತ್ತು ಹೋಗುತ್ತೇನೆ.

(ಹೋಗುವಾಗ ಧರ್ಮಯ್ಯ ಬರುವನು)

ಧರ್ಮಯ್ಯ– ನಿಲ್ಲು ತಾಯಿ.

ವಿಶಾಲ– ನೀವು......?

ಧರ್ಮಯ್ಯ– ಯಾಕಮ್ಮ, ನನ್ನ ಗುರ್ತು ಸಿಗಲಿಲ್ಲವೆ?

ವಿಶಾಲ– (ನೆನಪಾದವಳಂತೆ) ಅಂದು, ಆ ನೀಚರ ಮನೆಯಿಂದ ಹೊರ ಬೀಳುವಾಗ......

ಧರ್ಮಯ್ಯ– "ಹೆಣ್ಣಿನ ರೂಪದಲ್ಲಿ ಕಾಣುವ ನರರಾಕ್ಷಸಿಯನ್ನುವ ಮಾತನ್ನು ನಿನ್ನ ಬಾಯಿಂದ ಕೇಳಿದವನೂ ನಾನೆ. ನರರಾಕ್ಷಸಿಯಾಗಬೇಕಾದವ ಳಿಂದಲೇ ಸತ್ತು ಹೋಗುತ್ತೇನೆನ್ನುವ ಮಾತನ್ನು ಇಂದು ಕೇಳಿದವನೂ ನಾನೆ,

ವಿಶಾಲ– ಮನುಷ್ಯರನ್ನೇ ತಿಂದು ತೇಗುವ ರಾಕ್ಷಸರು ತುಂಬಿಕೊಂಡಿ ದ್ದಾರೆ ಇಂದಿನ ಸಮಾಜದಲ್ಲಿ. ಅಂದಾಗ ನನ್ನಂತ ಅಬಲೆ ಹೆಣ್ಣು, ರಾಕ್ಷಸಿಯ ವೇಷ ಹಾಕುವ ಸಾಹಸ ಮಾಡಿದ್ರು, ಆ ನಿಜವಾದ ರಾಕ್ಷಸರನ್ನು ನಾಶ ಮಾಡಲು ನನ್ನಿಂದ ಸಾಧ್ಯವಿದೆಯೇ?

ಧರ್ಮಯ್ಯ– ನೋಡಮ್ಮಾ. ಯಾವ ಕಾರ್ಯವನ್ನು ಸತ್ಯದ ಹಾದಿ ಯಲ್ಲಿ ಸಾಧಿಸಲು ಸಾಧ್ಯವಿಲ್ಲವೋ. ಆ ಕಾರ್ಯವನ್ನು ಮೋಸದಿಂದಾದರೂ ಸಾಧಿಸುವ ಧೈರ್ಯ ಮಾಡಬೇಕು.

ವಿಶಾಲ– ಧೈರ್ಯ ಈ ಕಾಲದಲ್ಲಿ? ಅದೂ ನನ್ನಂತ ಅಬಲೆ ಹೆಣ್ಣಿ ನಲ್ಲಿ? (ನಗು) ಯಜಮಾನ್ರೆ, "ಪ್ರೇಮ" ಅನ್ನುವ ಕುರುಡಿಯನ್ನು "ಕಾಮ" ಅನ್ನುವ ಕಟುಕ, "ಬಲತ್ಕಾರ" ಅನ್ನುವ ನೀರಿಲ್ಲದ ಭಾವಿಗೆ ತಳ್ಳಿ, "ನೀನು ಸಾಯುವುದಿಲ್ಲ, ಧೈರ್ಯವಾಗಿರು ಅಂತ, ಮೇಲೆ ನಿಂತುಕೊಂಡ್ರೆ ಬಾಯಿ ಬಡಿದುಕೊಂಡರೆ, ಆ ಕುರುಡಿಗೆ ಧೈರ್ಯ ಬರುವುದಾದರೂ ಹೇಗೆ? ಆಸರೆ ಕೊಟ್ಟು ಮೇಲೆತ್ತಿಕೊಳ್ಳುವ ದೊಡ್ಡ ಗುಣ ಆ ಕಟುಕನಿಗೆ ಬಂದರಲ್ಲವೆ! ಕುರು

ಡಿಗೆ ಧೈರ್ಯ, ಸ್ಥೈರ್ಯ ಬರುವುದೇ? ಅದೂ ನಿಜಾನೆ. ನನ್ನಂತವಳ ಧೈರ್ಯ, ಸ್ಥೈರ್ಯಕ್ಕೆ. ಈ ಕಾಲವೇ ಎದುರಾಗಿ ನಿಂತಿರುವಾಗ, ಪಾಪ! ಆ ಕಟುಕನನಣ್ಣ ತನವೇನೂ ತಪ್ಪಲ್ಲ. ನಂಬಿದವರ ನಾಲಿಗೆಯ ಮೇಲೆ ನಂಜು ಸುರಿಸುವ ಕಾಲ ಯಜಮಾನ್ರೆ ಇದು.

ಧರ್ಮಯ್ಯ– ಹುಚ್ಚಮ್ಮಾ. ಕಾಲ. ತನ್ನ ದೈನಂದಿನ ಕರ್ತವ್ಯವನ್ನು ಪಾಲಿಸುತ್ತಿದೆ. ಆದರೆ. ಸೃಷ್ಟಿಯ ಮೂಲವನ್ನು ಹಾಳು ಮಾಡಲು ಹೊಂಚು ಹಾಕುತ್ತಿಲ್ಲ. ನಿನ್ನಂತೆ ಶೀಲ ಕಳೆದುಕೊಂಡವರು ಕಾಲವನ್ನು ಹೀಯಾಳಿಸು ತ್ತಾರೆ. ದುಡಿದು ಹೊಟ್ಟೆ ತುಂಬಿಸಿಕೊಳ್ಳಲಾಗದ ಹೇಡಿಗಳು, ಸಮಾಜವನ್ನು ಜರಿಯುತ್ತಾರೆ. ಇನ್ನು ನಾವೇ ಬುದ್ಧಿವಂತರೆಂದು ತಮ್ಮಷ್ಟಕ್ಕೆ ತಾವೇ ತಿಳಿದು ಕೊಂಡವರ ಕಣ್ಣಿಗೆ ಈ ಜಗದ ಜನರೆಲ್ಲರೂ ಕುರಿಗಳಂತೆ ಕಾಣುತ್ತಾರೆ. ಆದರೆ ಕಾಲವನ್ನು ಹೀಯಾಳಿಸುವವರಾಗಲಿ, ಸಮಾಜವನ್ನು ಜರಿಯುವವರಾಗಲಿ, ಜನರನ್ನು ಕುರಿಗಳಂತೆ ಕಾಣುವವರಾಗಲಿ ಅಸ್ತಿತ್ವ ಅಸ್ತಿಸಿಕೊಳ್ಳುವ ಪುಣ್ಯ ಜೀವಿಗಳಲಾಗುವುದಿಲ್ಲ. ತಿಪ್ಪೆಯಲ್ಲಿ ಬಿದ್ದು ಕೊಳೆತು ಹೋಗುವ ಕಸವಾಗು ತ್ತಾರೆ. ಕಾರಣ, ಹೊಟ್ಟೆ ತಿಂದವರು ಕಾಲವನ್ನು ಹೀಯಾಳಿಸಬಾರದು. ಆ ಕಾಲ ವನ್ನೇ ಬಳಸಿಕೊಂಡು ಜಯ ಗಳಿಸುವ ಬುದ್ಧಿವಂತಿಗೆ ಮಾಡಬೇಕು.

ವಿಶಾಲ– ನಿಮ್ಮಾತು ಕೇಳಿದ್ರೆ, ನನ್ನಂತೆ ನಿಮ್ಮ ಜೀವನದ ಕಥೆಯೂ...

ಧರ್ಮಯ್ಯ– ವ್ಯಥೆಯನ್ನೇ ಹೆಣೆದುಕೊಂಡ ಸತ್ಯ ಕಥೆಯಮ್ಮ.

ವಿಶಾಲ– ಆ ನಿಮ್ಮ ವ್ಯಥೆಯ ಕಥೆ ಏನೆಂದು ನಾನು ಕೇಳಬಹುದೇ?

ಧರ್ಮಯ್ಯ– ಕೇಳುವುದು ನಿನ್ನ ಧರ್ಮ, ಹೇಳುವುದು ನನ್ನ ಕರ್ತವ್ಯ ಒಪ್ತೀನಿ. ಆದರೆ, ಆತ್ಮಹತ್ಯೆ ಮಾಡಿಕೊಂಡು ಮಣ್ಣು ಸೇರಲು ಹೊರಟಿರುವ ನಿನ್ಮುಂದೆ ನನ್ನ ಕಥೆ ಹೇಳಿದ್ರೆ, ಹೇಡಿಯ ಬೆನ್ನು ಬಿದ್ದ ಕರ್ಮಗೇಡಿ ನಾನಾ ಗ್ತೀನಿ.

ವಿಶಾಲ– ಅಂದ್ರೆ...?

ಧರ್ಮಯ್ಯ– ಛಲ ಸಾಧಿಸಲು ಹೊರಟವನು,ಬಲವಿಲ್ಲದವನ ಸಹಾಯ

ಕೇಳಿದ್ರೆ, ಈಜಲು ಬಾರದ ಮೂರ್ಖರಿಬ್ಬರು ಜೂಜು ಕಟ್ಟಿಕೊಂಡು ನದಿಗೆ ಬಿದ್ದು ಪ್ರಾಣ ಬಿಟ್ಟಂತಾಗುವುದಿಲ್ಲವೆ?

ವಿಶಾಲ– ನೀವೀಗ ನನ್ನ ಸಹಾಯ ಯೋಚಿಸಲು ಬಂದಿದ್ದೀರಾ?

ಧರ್ಮಯ್ಯ– ಯಾಚನೆಯಲ್ಲಮ್ಮಾ. ನಮ್ಮಿಬ್ಬರ ಗುರಿ ಸಾಧಿಸುವ ಯೋಚನೆ ಯಾವ ತಂದೆ ಮಗ ನಿನ್ನ ಶೀಲ ಕಳೆದು ಈ ಸ್ಥಿತಿಗೆ ತಂದರೊ ಆ ಚಂಡಾಲರೆ ನನ್ನ ಮಗಳ ಮಾನ ಕಳೆದು ಸಾವಿಗೀಡು ಮಾಡಿದರು ಅಷ್ಟೇ ಅಲ್ಲ, ಈಗ ಮತ್ತೊಂದು ನಿರಪರಾಧಿ ಹೆಣ್ಣಿನ ಬಾಳಿಗೆ ಬಿರುಗಾಳಿಯಾಗಿ ನಿಂತಿದ್ದಾರೆ. ನಿನ್ನ ವೈರಿ ಕದ್ದ ಮೂರನೇ ವ್ಯಕ್ತಿ ಆ ಅರವಿಂದನೊಂದಿಗೆ.

ವಿಶಾಲ– ನಿಮ್ಮ ಮಾತು ನಿಜವೆ?

ಧರ್ಮಯ್ಯ– ಸುಳ್ಳು ಹೇಳಿ ನಾನು ಸಾಧಿಸುವುದಾದರೂ ಏನಿದೆ ತಾಯಿ? ನೋಡಮ್ಮ ನೀನು ಸಾಯಲು ಹೊರಟಿದ್ದಿಯಾ. ಆದರೆ ಆ ನಿನ್ನ ಸಾವು ಸಾರ್ಥಕವಾಗಬೇಕು. ಈ ಕಾಮುಕರು ಮುತ್ತಿಗೆ ಹಾಕಿರುವ ಮುಗ್ಧ ಹೆಣ್ಣಿನ ಶೀಲ ಉಳಿಸುವ ಪುಣ್ಯ ಜೀವಿ ನೀನಾಗಬೇಕು. ಕಾರಣ ಆತ್ಮಹತ್ಯೆಗೆ ಹೊರಟಿರುವ ನಿರ್ಧಾರವನ್ನು ಬದಲಿಸಿ, ಈ ನೀಚರ ಸಂಹಾರಕೆ, ಕಂಕಣ ಕಟ್ಟಿ ನಿಲ್ಲು ತಾಯಿ.

ವಿಶಾಲ– ಅದು ನನ್ನಿಂದ ಸಾಧ್ಯವಿದೆಯೇ?

ಧರ್ಮಯ್ಯ– ರೊಚ್ಚಿಗೆದ್ದ ಹೆಣ್ಣಿಗೆ ಅಸಾಧ್ಯವಾದದ್ದು ಇತಿಹಾಸದಲ್ಲೇ ಯಾವುದೂ ಇಲ್ಲಮ್ಮಾ, ನೀನೇ ವಿಚಾರಿಸಿ ನೋಡು ಏನೂ ಅರಿಯದ ಮುಗ್ಧ ಹೆಣ್ಣಿನ ಬಾಳು ಈ ರಾಕ್ಷಸರಿಂದ ನಾಶವಾಗುವುದು ನ್ಯಾಯವೆ? ಭೋಗಕ್ಕೋಸ್ಕರವಾಗಿಯೇ ಬದುಕಿ, ತ್ಯಾಗದ ಸೋಗಿನಲ್ಲಿ. ಹೆಣ್ಣಿನ ಮನಗಳನ್ನು ಮಲೀನ ಮಾಡುವ ಇಂಥಾ ಕಾಮಾಂಧರ ಕಾಲ ಕಸವಾಗುವುದು ಧರ್ಮವೆ? ಸಮಾಜದಲ್ಲಿ ಸಾವಿರಾರು ಹೆಣ್ಣುಗಳ ಬಾಳು ಹಾಳಾಗುವುದನ್ನು ತಡೆಯಲು ಸಾಧ್ಯವಿಲ್ಲದಿದ್ದರೂ ಕಣ್ಣೆದುರಿಗೆ ಹಾಳಾಗುತ್ತಿರುವ ಈ ಒಂದು ಹೆಣ್ಣಿನ ಬಾಳನ್ನಾದರೂ ಉಳಿಸೋಣವೇ ಇಲ್ಲಾ ನಾವೇ ಅಳಿಸಿ ಹಾಕೋಣವೆ? ಅಥವಾ ನಾವೇ ಹಾಳಾದವರು, ಮತ್ತೊಬ್ಬರ ಬಾಳನ್ನೇಕೆ ಬೆಳಗಿಸುವ ಮೂರ್ಖತನ ಮಾಡೋಣವೆಂದು ನಾವೇ ಸತ್ತು ಮಣ್ಣು ಸೇರೋಣವೆ?

ವಿಶಾಲ– ಇಲ್ಲ ಯಜಮಾನ್ರೆ ಇಲ್ಲ, ಮಣ್ಣು ಸೇರಬೇಕಾದವರು ನಾವಲ್ಲ, ಮಾನವಂತ ಹೆಣ್ಣುಗಳೊಂದಿಗೆ ಚೆಲ್ಲಾಟವಾಡುವ ಆ ಕಾಮುಕ ಪಿಶಾಚಿಗಳು. (ನಿರ್ಧಾರವಾಗಿ) ಯಜಮಾನ್ರೆ, ಸಾಯುವ ನಿರ್ಧಾರವನ್ನು ಬದಲಿಸಿ, ಆ ನೀಚರ ಸಂಹಾರಕ್ಕೆ ಸಿದ್ಧಳಾಗಿದ್ದೇನೆ. ಹೇಳಿ ಪಾಪಿಗಳ ತಲೆಗಳನ್ನು ವೆಲಕ್ಕುರುಳಿಸಲು ನಾನೇನು ಮಾಡಲಿ? ಚಂಡಿಯಾಗಲೆ, ಚಾಮುಂಡಿಯಾಗಲೆ? ಅಥವಾ ಆ ಭಂಡರಿಗೂ ಮಿಗಿಲಾದ ಜಗಭಂಡಳಾಗಿ, ಅವರ ರುಂಡ ಮುಂಡಗಳನ್ನು ಚಂಡಾಡಲು ದುರ್ಗಿಯಾಗಿ ನಿಲ್ಲಲೇ?

ಧರ್ಮಯ್ಯ– ದುರ್ಗಿಯಾಗಿ ನಿಲ್ಲಲೇ ಎಂದು ಕೇಳುವ ಸಮಯಕ್ಕೆ ಆಸ್ಪದವೆಲ್ಲಿದೆಯಮ್ಮ? ಬೆಳಗಾದರೆ ಆ ಹೆಣ್ಣಿನ ಬಾಳು ಹರಿದು ಚೂರಿಯಾಗುವ ಪರಿಸ್ಥಿಯಲ್ಲಿದೆ. ಅಂಟುರೋಗದ ಸಂಕೇತವಾಗಿರುವ ಅವರನ್ನು ಜೀವದಿಂದಿರಲು ಬಿಟ್ಟರೆ, ಇಡೀ ಹೆಣ್ಣು ಕುಲವೇ ನಿನ್ನಂತೆ ಸಾವಿನ ದವಡೆಗೆ ತುತ್ತಾಗಲು ಸಿದ್ಧರಾಗಿ ನಿಲ್ಲಬೇಕಾಗುತ್ತದೆ. ಕಾರಣ ಬದುಕು ನಿರಸವಾಗಿರುವ ನಮ್ಮಿಬ್ಬರ ಜೀವ ಕೊಸರಿ ಹೋದರೂ ಚಿಂತೆಯಿಲ್ಲ, ಆ ಪಾಪಿಗಳ ಉಸಿರನ್ನು ನಾಮಶೇಷ ಮಾಡಲೇ ಬೇಕು. ಕಾಲ ಕಳೆಯುವುದರಲ್ಲಿ ಅರ್ಥವಿಲ್ಲ. (ಅಡ್ರೆಸ್ ಕಾರ್ಡ್ ತೆಗೆದು) ತಗೋಳಮ್ಮ ನೀನು ನೇರವಾಗಿ ವಿಳಾಸಕ್ಕೋಗು. ನಾನ್ಹಿಂದಿನಿಂದ ಬರ್‍ತಿನಿ.

ವಿಶಾಲ– ಸರಿ ಯಜಮಾನ್ರೆ (ಹೋಗುವಳು)

ಧರ್ಮಯ್ಯ– ಅಂತೂ ರೊಚ್ಚಿಗೆದ್ದ ಈ ಹೆಣ್ಣು ಸರ್ಪದಿಂದ ಆ ನೀಚರ ನಾಶವಾಗುವ ಭರವಸೆ ಮೂಡಿದಂತಾಯಿತು. (ಆ ಕಡೆ ನೋಡಿ) ಓ, ಅರವಿಂದ ವನಜ ಈ ಕಡೆನ ಬರ್‍ತಾಯಿದ್ದಾರೆ, ಬರ್‍ಲಿ (ಮರೆಯಾಗುವನು)

(ಅರವಿಂದ–ವನಜ ಹಾಡುತ್ತ ಬರುವರು)

ವನಜ– ಅರವಿಂದ ನಮ್ಮಾವನವರು ಮುಂದಿನ ವಾರದಲ್ಲಿ ನಮ್ಮ ಮದುವೆ ನಿಶ್ಚಯಿಸಿದ್ದು ನನಗೆಷ್ಟು ಸಂತೋಷವಾಗಿದೆ ಗೊತ್ತಾ?

ಅರವಿಂದ– ನಿನಗೇನು ಸಂತೋಷವಾಗಿದೆ. ಆದರೆ ಇನ್ನು ಒಂದು ವಾರ ಕಾಯ್ಬೇಕಲ್ಲ, ಅಂತ ನನಗೆ ಸಂಕಟವಾಗ್ತಾಯಿದೆ,

ವನಜ– ವಾರ ಅನ್ನುವುದು ನಿಮಗಷ್ಟು ದೂರವಾಗಿ ತೋರುತ್ತಿದೆ ಯೇನು?

ಅರವಿಂದ– ದೂರವಷ್ಟೇ ಅಲ್ಲ, ಭಾರವಾಗ್ತಾ ಇದೆ. ನೋಡು, ಭಾಗ್ಯ ಬರುವ ಸಮಯದಲ್ಲಿ ಅಯೋಗ್ಯರ ಹಾವಳಿ ಬಹಳ. ಕಾರಣ, ಬರುವ ಭಾಗ್ಯ ಆದಷ್ಟು ಬೇಗ ಬಂದರೆ ಒಳ್ಳೆಯದಲ್ಲವೆ ?

ವನಜ– ಭಾಗ್ಯ ಅಂದರೆ ನಿಮ್ಮ ದೃಷ್ಟಿಯಲ್ಲಿ...?

ಅರವಿಂದ– ನೀನು ಹುಚ್ಚಿ, ನಿನ್ನ ಸಂಪತ್ತಿಗೆ ಆ ಸಂಕೇತ ಕೊಟ್ಟೆನೆಂದು ತಿಳಿದರೆ, ನನ್ನನ್ನು ಅರ್ಥಮಾಡಿಕೊಂಡಿದ್ದೇ ವ್ಯರ್ಥ. ನ ೀ ಪ್ರಾಣದೇವತೆಗೆ ಭಾಗ್ಯ ಎಂದು ಕರೆದೆನೇ ಹೊರತು...

ವನಜ– ನೋಡಿ ಅರವಿಂದ್, ಪ್ರೀತಿಗೆ ಕಣ್ಣಿಲ್ಲ. ಅದು ಮತ್ತೊಬ್ಬರಿಗೆ ಕಾಣುವುದೂ ಇಲ್ಲ. ಆದರೆ, ಪ್ರೀತಿಸಿದವನು ತನ್ನ ಪ್ರಿಯತಮೆಗೆ, ಹಾಲು ತುಂಬಿದೆಯೆಂದು ತಂದು ಕೊಟ್ಟ ಕಪ್ಪು ಸೀಸೆಯಲ್ಲಿ ಹಾಲಿದೆಯೋ, ಹಾಲಾ ಹಲವಿದೆಯೋ ಎಂದು ಪರೀಕ್ಷಿಸದೆ ಕುಡಿಯುವುದು, ಆ ಪ್ರಿಯತಮೆಯ ಮೂರ್ಖತನವಲ್ಲ, ಅವಳ ಆದರ್ಶ ಪ್ರೀತಿಯ ಪ್ರತೀಕ.

(ಧರ್ಮಯ್ಯ ಬರುವನು)

ಧರ್ಮಯ್ಯ– ಆ ಪ್ರತೀಕ ಅತಿರೇಕವಾದಾಗ, ಆಪತ್ತುಗಳು ಮುತ್ತುವ ಸಂಭವ ಬಹಳವಮ್ಮ.

ವನಜ– ಏನ್ಹೇಳ್ತಿದಿರಿ ಧರ್ಮಯ್ಯ.

ಧರ್ಮಯ್ಯ– ಅಂಥಾದ್ದೇನೂ ಇಲ್ಲಮ್ಮ. ನೀವೇಳಿದ ಆದರ್ಶ ಪ್ರೇಮಿಗಳ ನಿದರ್ಶನ ಕೇಳಿದೆ. ಕೆಲ ಗಂಡಿನ ಪ್ರೀತಿಯ ಹಿನ್ನೆಲೆಯಲ್ಲಿ ಸ್ವಾರ್ಥವಿರುವುದನ್ನು ತಿಳಿಯದೆ, ತಿಪ್ಪೆ ಕಸವಾಗಿರುವ ಕೆಲ ಹೆಣ್ಣುಗಳ ನೆನಪಾಗಿ, ಸಣ್ಣ ಉದಾಹರಣೆ ಕೊಟ್ಟೆನಷ್ಟೆ.

ವನಜ– ನಿಮ್ಮ ಉದಾಹರಣೆಗೆ ನನ್ನ ಅರವಿಂದರು ಹೋಣೆಯಾಗುವುದಿಲ್ಲ. ಆ ಭರವಸೆ ನನಗಿದೆ.

ಅರವಿಂದ– ವನಜ, ನಮ್ಮ ಪ್ರೀತಿ ಸಾಚ ಎಂದು ಇವರಿಗೆ ಪರಿಚಯ ವಾಗುವತನಕ, ನಮ್ಮ ರೀತಿ ಅರಿವಾಗುವದಿಲ್ಲ ಅಲ್ಲವೆ ಧರ್ಮಯ್ಯ.

ಧರ್ಮಯ್ಯ– ನಾನು ವಯಸ್ಸು ಕಳದ್ರೂ, ನಿಮ್ಮನುಭವ ನನಗಾಗಿಲ್ಲ ಸಾಹೇಬ್ರೆ. ಆದರೆ ನನಗೆ ತಿಳಿದಿರುವುದಿಷ್ಟೆ, "ಬೆಳ್ಳಗಿರುವುದೆಲ್ಲಾ ಹಾಲೆಂದು ತಿಳಿಯುವ ಮೂರ್ಖ ಜನ ಬಹಳ ಇದ್ದಾರೆ, ಕಳ್ಳರ ಸುಳ್ಳು ಪ್ರೀತಿಯ ತಿರುಳು ತಿಳಿಯದ ತಿಳಿಗೇಡಿಗಳಿದ್ದಾರೆ" ಎಂದು. ಈ ಮಾತನ್ನು ಎಲ್ಲ ಬಲ್ಲ ತಮಗೇಳು ವುದರಲ್ಲಿ ಅರ್ಥವಿಲ್ಲವೆಂದು ನನ್ನ ಭಾವನೆ. ಇದಕ್ಕೆ ನೀವೇನಂತೀರಿ ?

ವನಜ– ಅವರೇನಂತಾರೆ? ಕಳ್ಳ ಸುಳ್ಳರ ಪ್ರೀತಿ ನಮ್ಮದಲ್ಲ ಅಂತಾ ರಷ್ಟೆ. (ನಗುತ್ತಾ) ಒಳ್ಳೆ ಧರ್ಮಯ್ಯ. ಅರವಿಂದ, ಇವರು ಯಾವಾಗಲೂ ಹೀಗೆನೆ. ಆಗಿ ಹೋದ ಚರಿತ್ರೆಗಳನ್ನು ನನ್ನ ಮುಂದೆ ಉದಾಹರಣೆಗಳನ್ನಾಗಿ ನಿಲ್ಲಿಸ್ತಿರ್ತಾರೆ.

ಅರವಿಂದ– ಇವರ ಮನಸ್ಸು ಹಸುಗೂಸಿನಂತಾದ್ದು ಅಂತ ನನಗೊ ತ್ತಿದೆ ವನಜ ಸರಿ. ನೀ ಮುಂದಾಗು, ಸಧ್ಯ ನಿನ್ನ ಹಿಂದೆನೆ ನಾವೂ ಬರ್ತೀವಿ.

ವನಜ– ಸರಿ ಬೇಗ ಬನ್ನಿ. (ಹೋಗುವಳು)

ಅರವಿಂದ– ಏನು ಧರ್ಮಯ್ಯನವರೆ ಒಗಟಿನ ಮಾತಿನಲ್ಲಿ ನಾನು ಕೆಟ್ಟವ ನೆಂದು ಎತ್ತಿ ತೋರಿಸುವ ಪ್ರಯತ್ನ ಮಾಡುತ್ತಿದ್ದೀರಿ?

ಧರ್ಮಯ್ಯ– ಕದ್ದು ತಿಂದವರಿಗೆ ಯಾವ ಸುದ್ದಿ ಹೇಳಿದ್ರೂ, ತನಗೇ ತೆಗಳಿದನೆಂದು ತಪ್ಪು ತಿಳಿದುಕೊಳ್ಳುತ್ತಾರೆ. ಆದರೆ, ಅದಕ್ಕೆ ಕಾರಣ ನಾನಲ್ಲ, ಕದ್ದು ತಿಂದವರ ಕರ್ಮ.

ಅರವಿಂದ– ಹಾಗಾದರೆ, ಕದ್ದವನ ಸ್ಥಳಿವಿನ ಸುದ್ದಿಯನ್ನು ಊರ್ತುಂಬಾ ಹಬ್ಬಿಸುವವನಿಗೆ, ಯಾವ ಕಾಣಿಕೆ ಕೊಡುವುದು ಧರ್ಮವಾಗಬಹುದು, ಆ ಕದ್ದವನ ಪಾಲಿಗೆ?

(ಭೋಜರಾಜ ಬರುವನು)

ಭೋಜರಾಜ– ಅದನ್ನು ಕೇಳಿ ಕೊಡುವುದಕ್ಕಿಂತ, ಕೊಟ್ಟು ಸಂತೋಷ ಪಡುವುದು ಲೇಸಲ್ಲವೆ ಡಾಕ್ಟ್ರೆ?

ಅರವಿಂದ– ಹಾಗಾದರೆ..., ನಾನು ಕೇಳಿದ್ದು ತಪ್ಪೆ?

ಭೋಜರಾಜ– ತಪ್ಪೊ, ಒಪ್ಪೊ ಒಟ್ಟು ಮನ ಒಪ್ಪುವ ಕಾಣಿಕೆ ಕೊಟ್ಟು ಕರ್ತವ್ಯ ಮುಗಿಸಿದ್ರೆ ತೀರ್ತು ಏನಂತೀರಾ?

ಧರ್ಮಯ್ಯ– ಮಾತಾಡಿ ಕೆಡುವವರಿಗಿಂತ, ಕೆಟ್ಟು ಮಾತಾಡುವವರಲ್ಲಿ ಅರ್ಥ ಬಹಳ ಇರುತ್ತದೆ. ನೀವು ಕೊಡುವ ಕಾಣಿಕೆಯನ್ನು ಸ್ವೀಕರಿಸಲು ನಾನು ಸಿದ್ಧನಿದ್ದರೂ, ಕೊಡುವ ಯೋಗ್ಯತೆ ನಿಮಗಿರಬೇಕಲ್ಲ.

ಭೋಜರಾಜ– ನಮ್ಮ ಯೋಗ್ಯತೆಯನ್ನು ಪ್ರತ್ಯಕ್ಷ ಪರಿಚಯ ಮಾಡಿ ಕೊಡುತ್ತೇವೆಯೇ ಹೊರತು, ನಿನ್ನಂಥ ಕ್ಷುಲ್ಲಕನ ಮುಂದೆ ವಿವರಿಸುವ ಮೂರ್ಖ ತನ ಮಾಡುವುದಿಲ್ಲ.

ಅರವಿಂದ– ಸಾರ್, ನಾವು ಇವನನ್ನು ಕ್ಷುಲ್ಲಕನೆಂದು ತಿಳಿದಿದ್ದರೆ, ಇವನು ನಮ್ಮನ್ನು ಲೋಭಿಗಳು ಅಂತ ತಿಳಿದಿದ್ದಾನೆ.

ಭೋಜರಾಜ– ಹೌದೇನೋ ಧರ್ಮಯ್ಯ?

ಧರ್ಮಯ್ಯ– ಅಲ್ಲಾ ಅನ್ನುವ ಮೂರ್ಖತನ ನಾನ್ಯಾಕ ಮಾಡ್ಲಿ? ಲೋಭಿಯನ್ನುವ ಎರಡಕ್ಷರದ ಅರ್ಥವೇ ನೀವು. ನಿಮ್ಮಂತವರನ್ನು ಕಂಡೇ ಆ ಸರ್ವಜ್ಞನು, "ಉಣ್ಣದೊಡವೆಯ ಗಳಿಸಿ, ಮಣ್ಣೊಳಗೆ ಬೈತಿಟ್ಟು, ಚನ್ನಾಗಿ ನೆಲವ ಸಾರಿಸಿದವನ ಬಾಯೊಳಗೆ ಮಣ್ಣು ಕಾಣಯ್ಯಾ ಸರ್ವಜ್ಞ" ಅಂತ ಹೇಳಿದ್ದಾನೆ.

ಭೋಜರಾಜ– ಸರ್ವಜ್ಞ ಹೇಳಿದನ್ನು ಬೊಗಳುವೆಯಾ ಭಿಕಾರಿ?

ಧರ್ಮಯ್ಯ- ಬೊಗಳುತ್ತಿಲ್ಲ, ನಿಮ್ಮ ಹೀನ ಗುಣಗಳನ್ನು ಹೊಗಳು ತ್ತಿದ್ದೇನೆ. ಯೇ ಭೋಜರಾಜ, ನೀನು ಯಾರು? ಮಾಡಿರುವ ಪಾಪವೇನೆಂಬು ದರ ಅರಿವು ನಿನಗಿಲ್ಲದಿದ್ದರೂ, ನನ್ನ ಮಗಳ ಶೀಲಗೆಡಿಸಿ, ಸಾವಿನ ದವಡೆಗೆ ನೂಕಿರುವ ನಿನ್ನ ಮುಖದ ಮರೆವು ಮಾತ್ರ ನನಗಾಗಿಲ್ಲ, ಆಗುವುದೂ ಇಲ್ಲ. ನನ್ನ ಮಗಳ ಸಾವಿಗೆ ಕಾರಣರಾದ, ನಿಮ್ಮ ಪ್ರಾಣ ತೆಗೆಯದೆ ಇಷ್ಟು ದಿನ ಯಾಕೆ ಬಿಟ್ಟಿದ್ದೇವೆ ಗೊತ್ತೆ? ಅಡಗಿರುವ ವಿಷ ಜಂತು ತಾನಾಗಿಯೇ ಬಯ ಲಿಗೆ ಬರಲೆಂದು ಯಾಕಂದ್ರೆ, ಪಾಪಿಗೆ ತಗುಲುವ ಶಾಪವನ್ನು ತಪ್ಪಿಸಲು ಯಾವ ಭೂಪನಿಗೂ ಸಾಧ್ಯವಿಲ್ಲ.

ಭೋಜರಾಜ– ಶಹಭಾಷ್ ಧರ್ಮಯ್ಯ ಶಹಭಾಷ್. ಇದುವರೆಗೂ ಪೆಟ್ಟು ತಿಂದ ಸರ್ಪದ ಪಕ್ಕದಲ್ಲಿ ಮೈಮರೆತು ಮಲಗಿದ್ದ ನನ್ನನ್ನು, ಇಂದು ನೀನೇ ಎಚ್ಚರಿಸಿದೆ. ಇನ್ನು ನಿನ್ನಿಚ್ಛೆಯ ಕಾಣಿಕೆಯನ್ನು ಖಂಡಿತಾ ಕೊಡುತ್ತೇನೆ. ಭೋಗಕ್ಕಾಗಿ ಬದುಕುವವರ ಮುಂದೆ ತ್ಯಾಗಕ್ಕಾಗಿ ಬದುಕುತ್ತೇನೆಂದು ಹೇಳುವ ನಿನ್ನಂತ ಅರಸಿಕನಿಗೆ ನಾ ಕೊಡುವ ಕಾಣಿಕೆ ಇದೆ. (ಗುಂಡು ಹಾರಿಸುವನು. ಧರ್ಮಯ್ಯ ಚೀರಿ ನರಳುತ್ತ)

ಧರ್ಮಯ್ಯ– ಅಯ್ಯೋ ಪಾಪಿ, ಸತ್ಯದ ತಲೆಯ ಮೇಲೆ ಚಪ್ಪಲಿ ಇಡುವ ಮೂರ್ಖನಾದೆಯಾ? (ಬಿದ್ದು ಸಾಯುವನು)

ಭೋಜರಾಜ– ಸತ್ಯಕ್ಕೆ ಸಾವೇ ಹೊರತು ಅಸತ್ಯವನ್ನು ಗೆಲ್ಲುವ ಸಾಮರ್ಥ್ಯ ಈ ಕಲಿಯುಗದಲ್ಲಿ ಬರುವುದಿಲ್ಲ. ನಿನ್ನ ಪ್ರಾಣದ ಪ್ರಯಾಣ ಸುಖಕರವಾಗಲಿ ಗುಡ್ ಬೈ.

ಅರವಿಂದ-- ಅಂತೂ ಪ್ರಾಣಿ ಮಣ್ಣು ಸೇರ್‍ತು.

ಭೋಜರಾಜ– ಇನ್ನೂ ಸೇರಿಲ್ಲ, ಅಪಾಯ ನಮಗೊದಗದಂತೆ ಉಪಾಯವಾಗಿ ನಾವೇ ಸೇರಿಸ್ಬೇಕ.. ಬನ್ನಿ ಹೇಳ್ತೀನಿ. (ಹೋಗುವರು)

## ಹನ್ನೆರಡನೆಯ ದೃಶ್ಯ

### ರಸ್ತಾ

ರಂಗ– ಏನಾತಲ್ರಿ ದೇವರಂತಾ ಧರ್ಮಯ್ಯನವರ ಗತಿ? ಹಾಡಗಲೇ ಗುಂಡಿಟ್ಟು ಕೊಂದಾರಲ್ಲ ಚಂಡಾಲ್ರು. ಇವರೇನವ್ರಿಗೆ ಅನ್ಯಾಯ ಮಾಡಿದ್ದಾರು ಅಂತೀನಿ? ಈ ನನ್ನ ಮಕ್ಳು ಸರಳ ಸಾಯುದಿಲ್ಲ, ಕೊಳತು, ಹುಳಬಿದ್ದು, ಗಬ್ಬು ನಾತಿಟ್ಟು ಸಾಯ್ತಾರ. ಪಾಪ, ವನಜಮ್ಮನ ಗೋಳಾಟ ನೋಡಬಾರದ್ರಿ, "ತಂದಿದ್ದಂಗಿದ್ರು, ತಬ್ಲಿ ಮಾಡಿ ಹೋದ್ರು" ಅಂತ ಹೆಣದ ಮ್ಯಾಲ ಬಿದ್ದು ಒಂದ್ಸ ಸವನ ಅತ್ತುಬಿಟ್ರು. ಅವರ ಮ್ಯಾಲ ಅಷ್ಟು ಪ್ರೀತಿನು ಇದ್ರವರು. ಅಂದಲ್ಲೇ ಮಿಲ್ಲಿನ ಮುಂದ ಧರ್ಮಯ್ಯನವ ಮೂರ್ತಿ ನಿಲ್ಲಿಸಿ ಬಿಟ್ಟಾರ.

(ಆ ಕಡೆ ನೋಡಿ) ಅಪ್ಪ, ಈಗ ಈ ಕಡೆನೆ ಬರ್‍ತಾ ದಾರಲ್ಲ ಬರ್‍ಲಿ, ಬರ್‍ಲಿ (ಮರೆಯಾಗುವನು)

ವಿಕ್ರಂ– ಡ್ಯಾಡಿ ಅವತ್ತು, ನಾ ಹೇಳಿದ ವಿಷಯ ಸತ್ಯವಾಯ್ತಲ್ಲ? ನನಗೆ ಮೊದಲೇ ಗೊತ್ತಿತ್ತು. ಆ ಧರ್ಮಯ್ಯನಿಗೆ ನಮ್ಮ ವಿಷಯ ಗೊತ್ತಿದ್ದೇ, ನಮ್ಮ ನಾಶಕ್ಕೆ ಸಮಯ ಕಾಯ್ತಾಯಿದ್ದ ಅಂತ.

ಭೋಜರಾಜ– ಕರೆಕ್ಟ್ ಮೈ ಸನ್. ಅದಕ್ಕಾಗಿ ಈ ಭೂಪತಿ ಅವನನ್ನೇ ಸರ್ವನಾಶ ಮಾಡಿಬಿಟ್ಟೆ. ಈ ಭೋಜರಾಜನಿಗೆದುರಾಗಿ ನಿಂತವರು ಬಹಳ ಕಾಲ ಈ ಭೂಮಿಯ ಮೇಲೆ ಬದುಕಿರಲು ಸಾಧ್ಯವಿಲ್ಲಪ್ಪಾ.

ವಿಕ್ರಂ– ಸತ್ತವನ ಸುದ್ದಿ ಬಿಡಿ ಡ್ಯಾಡಿ. ಸಧ್ಯ ಆ ವಕೀಲಂತೂ ನಾವು ಹೇಳಿದಂತೆ ವಿಲ್ ಬರೆಯಲು ಒಪ್ಕೊಂಡ. ಆದ್ರೆ ವನಜಾಳಿಂದ ಸಹಿ ಮಾಡಿಸಿಕೊಂಡ ಖಾಲಿ ಬಾಂಡ್ ಪೇಪರಿನಲ್ಲಿ ವಿಲ್ ಬರೆಸುವಾಗ, ಆ ಅರವಿಂದನಿಗೂ ಆಸ್ತಿಯಲ್ಲಿ ಸಮಭಾಗ ಬರಸ್ತೀರೇನು?

ಭೋಜರಾಜ– ಏನಂದೆ? ಅರವಿಂದನಿಗೆ ಆಸ್ತಿಯಲ್ಲಿ ಸಮಭಾಗ? (ನಗು) ಅಯ್ಯೋ ಬೆಪ್ಪ. ನನ್ನ ಹಸಿವಿಗೇ ಸಾಲದ ಅನ್ನದಲ್ಲಿ ಭಿಕ್ಷುಕನಿಗೂ ದಾನ ಮಾಡುವ ಬುದ್ಧಿಗೇಡಿಯಲ್ಲಪ್ಪಾ ಈ ಭೋಜರಾಜ. ಆಳುವುದಾದರೆ ಚಕ್ರವರ್ತಿಯಾಗಿ ಆಳುವ ವಿಚಾರ ಮಾಡುತ್ತಾನೆಯೇ ಹೊರತು, ಸಾಮಾನ್ಯ ಸಾಮಂತ ರಾಜನಾಗಿ ಆಳುವ ಹೇಡಿ ವಿಚಾರವನ್ನು ಕನಸಿನಲ್ಲಿಯೂ ಮಾಡುವುದಿಲ್ಲ. ಬೀಜ ಸಸಿಯಾಗಿ, ಮರವಾಗಿ, ಫಲ ಬಿಡುವುದಕ್ಕಾಗಿ ನಾ ಹಾಕಿದ ಗೊಬ್ಬರವಷ್ಟೆ ಆ ಅರವಿಂದ. ಅದು ಮಣ್ಣಲ್ಲಿ ಮಣ್ಣಾಗುವುದೇ ಹೊರತು, ಹಣ್ಣು ತಿನ್ನುವ ಭಾಗ್ಯವನ್ನು ಬೇಡಿ ಬಂದಿರುವುದಿಲ್ಲ.

ವಿಕ್ರಂ– ಹಾಗಾದ್ರೆ ಅವರ ಮದುವೆ ಅವರ ಪಾಲಿಗೆ ಮಸಣವಾಗುತ್ತೆ ಅನ್ನಿ.

ಭೋಜರಾಜ– ಹೌದು. ಅವರ ಆನಂದದ ಮೊದಲ ರಾತ್ರಿ, ಅವರ ಪಾಲಿಗೆ ಜೀವನದ ಕೊನೆಯ ರಾತ್ರಿಯಾಗಬೇಕು. ಯಾರಿಗೂ ಅನುಮಾನ ಬರದಂತೆ. ಅಂದು ಅವರು ತಿನ್ನುವ ಹಣ್ಣಿನಲ್ಲಾಗಲೀ, ಕುಡಿಯುವ ಹಾಲಿನ

ಲ್ಲಾಗಲಿ ವಿಷ ಬೆರಸಿ ಅವರ ಉಸಿರನ್ನೇ ನಿಲ್ಲಿಸಬೇಕು. ಆಮೇಲೆ, ಆ ಸರ್ವ ಸಂಪತ್ತಿಗೆ ನಾನೇ ಚಕ್ರವರ್ತಿ.

ವಿಕ್ರಂ– ಡ್ಯಾಡಿ, ಇದು ರಸ್ತೆ. ಯಾರಾದ್ರೂ ಕೇಳಿಸಿಕೊಂಡಾರು ನಡಿರಿ. ಮೊದಲು ಅರವಿಂದ, ವನಜಾರ ಮದುವೆ. ಮಂತ್ರಕ್ಕೆ ನಾಂದಿ ಹಾಡೋಣ. (ಹೋಗುವಾಗ ರಂಗ ಬರುವನು) ಲೇ ರಂಗ.

ರಂಗ– ಯಾಕ್ರಿ ಸಾಹೇಬ್ರ?

ವಿಕ್ರಂ– ನಾವಿಲ್ಲಿ ನಿಂತಿದ್ದನ್ನು ನೋಡಿಸೂ, ಎದೆ ಸೆಟೆಸಿ ನಮ್ಮುಂದೆನೆ ಹೋಗ್ತಿಯಲ್ಲ. ಎಷ್ಟು ಸೊಕ್ಕಲೆ ನಿನಗೆ?

ಭೋಜರಾಜ– ಇವನಿಗೆ ಕೊಬ್ಬು ಜಾಸ್ತಿ ಆಗಿದೆ. ರಸ್ತೆಯಲ್ಲಿ ನನಗ ಸೈತ ಸಿಕ್ಕಂಗ ಮಾತಾಡಿದಾನಿವನು ಅವತ್ತೇ ಇವನ ಸೊಕ್ಕು ಮುರಿತಿದ್ದೆ...

ರಂಗ– ಧೈರ್ಯ ಬರಲಿಲ್ಲ.

ವಿಕ್ರಂ– ರ್ಯಾಸ್ಕಲ್, ನಿನ್ನಂತವನ ಕೊಬ್ಬಿಳ್ಯಾಕೆ ಧೈರ್ಯಬೇಕೇನಲೆ?

ರಂಗ– ಧೈರ್ಯ ಅಷ್ಟ ಅಲ್ಲ, ನನ್ನ ತಡವಬೇಕಾದ್ರೆ ಹಣಬರ ಗಟ್ಟಿದ್ದವರ ತಡವಬೇಕು. ಕೊಬ್ಬಿಳ್ಯಾಕ ಬಂದವರ ಮುಬ್ಬು ಬಿಡ್ಸೊ ಭೂಪತಿ ರಂಗಿವನು.

ಭೋಜರಾಜ– ನೋಡಿದೇನಪಾ ವಿಕ್ರಂ, ಈ ಮಗನ ಪೊಗರೆಷ್ಟೈತಿ?

ವಿಕ್ರಂ– ಏಸಲೇ ಬಡ್ಡಿ ಮಗನೆ ನಾವ್ಕೊಡೊ ದುಡ್ಡು, ನಾಪ್ಹಾಕೊ ಅನ್ನ ತಿಂದು ಬದುಕೋ ನಾಯಿ ನೀನು. ನಮಗ್ಹ ಮರ್ಯಾದಿ ಕೊಡದಂಗ ಮಾತಾಡ್ತಿಯಾ?

ರಂಗ– ಈ ಮಾತಿಗೆ ಈಗಲೇ ನಿಮ್ಮಪ್ಪಗ ಉತ್ರ ಕೊಟ್ಟೇನಿ ಬೇಕಾರ ಮನಿಗೆ ಹೋದಿಂದ ಕೇಳಿ ತಿಳ್ಕೊಳ್ರಿ. ಆದ್ರ ನಂದೊಂದು ಮಾತು ಕೇಳ್ರಿ ಡೂಪ್ಲಿಕೇಟ್ ಸಾವ್ಕಾರ್ರೆ..., ನನ್ನ ಕೈಯಾಗ ಕಸುವೈತಿ, ಕಸುಬೂ ಐತಿ. ದುಡಿತಿನಿ ಅನ್ನೋ ದಮ್ಮೈತಿ. ಅಡವ್ಯಾಗಿದ್ರೂ ಬದುಕ್ತೇನಿ ಅನ್ನೋ ವಿಶ್ವಾ ಸೈತಿ. ಆದ್ರ ಮತ್ತೊಬ್ಬರ ಎಂಜಲಿಗೆ ಬಾಯಿ ತೆರ್ಕೊಂಡು ಬಿದ್ದಿರೋ ನಿಮ್ಮಂ

ತವರಿಗೆ ಬರಬಾರದ ಕೆಡುಗಾಲ ಬಂತಂದ್ರ ಏನ್ಹೇಳ್ಲಿ ನಿಮ್ಮ ಫಜೀತಿನ, ತುತ್ತು ಕೂಗಿಗಾಗಿ ಕೋಳಿಗತಿ ತಿಪ್ಪಿ–ತಿಪ್ಪಿ ಕೆದರಿಕೊಂತ ತಿರುಗ್ಬೇಕಾಗುತ್ತ.

ವಿಕ್ರಂ– ಸ್ಕೌಂಡ್ರಲ್. ನಮ್ಮನ್ನ ಎಂಜಲಿಗೆ ಬಿದ್ದವರು ಅನ್ನುವಷ್ಟು ಸೊಕ್ಕು ಬಂತೇನೋ ನಿನಗ (ಹೊಡೆಯಲು ಕೈ ಎತ್ತುವನು, ರಂಗ ಕೈ ಹಿಡಿದು)

ರಂಗ– ನನ್ನ ಹೊಡಿಯಾಕೆತ್ತಿದ ಈ ಕೈ ಕತ್ತರಿಸಿ. ನಾಯಿ-ನರಿ ಬಾಯಿಗೆ ಹಾಕ್ತಿದ್ದೆ. ಆದ್ರ ನಿಮ್ಮ ಪಾಪದ ತೂಕ ಎಷ್ಟು ಕೆ. ಜಿ. ಆಗೇತೊ. ಇನ್ನೂ ಎಷ್ಟು ಕೆ. ಜಿ. ಆಗೋದೈತೊ? ಇದನ್ನ ಲೆಕ್ಕ ಹಾಕಿ ಆ ದೇವರು ನಿಮಗ ಎಷ್ಟು ಕೆ. ಜಿ. ಕೊಡಬೇಕಂತ ವಿಚಾರ ಇಟ್ಟಾನೋ ನನಗೊತ್ತಿಲ್ಲಂದಲ್ಲಿ ಅದಕ ನಿಮ್ಮನ್ನ ಸರಳ ಕೈಬಿಡ್ತೀನಿ ಏನ್ಹ ನಿಮಗ ಶಿಕ್ಷೆ ಆದ್ರೂ ಆ ದೇವರಿಂದಾನೆ ಆಗ್ಲಿ

ಭೋಜರಾಜ– ವಿಕ್ರಂ ಈ ಭಿಕಾರಿ ನನ್ನ ಮಗನ ಕೂಡ ಯಾಕ ಕೆಲ್ಸಕ ಬಾರದ ಪ್ರಯತ್ನ ನಡಸ್ತಿಯಾ? ಇವನಿಗೆ ಏನು ಮಾಡೋದು ನಾ ಮಾಡ್ತೀನಿ. ಬಾ ಹೋಗೋನ (ಹೋಗುವನು)

ವಿಕ್ರಂ– ಲೇ ರಂಗ ಇವತ್ತಿಂದ ಬಹಳ ಹುಷಾರಿಯಿಂದಿರು ಮಗನ (ಹೋಗುವನು)

ರಂಗ– ಹೋಗಲೇ ನನಗೇನು ಹುಷಾರಿಂದ ಇರಾಕ್ಹೇಳ್ತಿ? ಆ ದೇವರ ದೃಷ್ಟಿಯೊಳಗ ಹುಷಾರಿಂದ ಬದುಕ್ಬೇಕಾದವರು ನೀವು.

(ಲಿಲ್ಲಿ ಬರುವಳು)

ಲಿಲ್ಲಿ– ಆ ದೇವರಿಗೂ ಲಂಚಕೊಟ್ಟು: ಪಾಪದ ಹೊರೆ ಕಡಿಮೆ ಮಾಡ್ಕೊಳ್ಳಾಕ ಪ್ರಯತ್ನ ಪಡೋ ಭೂಪರದಾರ ವರು.

ರಂಗ– ಲಂಚಕೊಟ್ರೂ, ಇವರ ಗುಟ್ಟು ರಟ್ಟಾದ್ರ ಆ ದೇವರ ಚಟ್ಟ ಕಟ್ಟಿಸ್ತಾನ. ಈ ನನ್ನ ಮಕ್ಳು ಧರ್ಮಯ್ಯನ್ನ ಕೊಲೆ ಮಾಡಿದ್ದಲ್ದೆ, ಈಗ ವಜನಮ್ಮನ ಪ್ರಾಣ ತೆಗಿಯೋ ವಿಚಾರ ನಡಸ್ಯಾರ ಗೊತ್ತೇನು ?

ಲಿಲ್ಲಿ– ಹೌದ? ಹಂಗಾರ, ಈ ದುಷ್ಟರ ನಿರ್ನಾಮ ಮಾಡುವುದಕ್ಕಾಗಿ ನಾನು ಕಂಕಣಬದ್ಧಳಾಗಿ ನಿಲ್ಲುತ್ತೇನೆ.

ರಂಗ– ಈ ಅವತಾರ್ದಾಗ ದುಷ್ಟರನ್ನ ನಿರ್ನಾಮ ಮಾಡ್ತಿಯಾ? ನಿನಗ ಸ್ವಲ್ಪರ ಬುದ್ಧೈತೆನು?

ಲಿಲ್ಲಿ– ಯಾಕ?

ರಂಗ– ಯಾಕಂತಿಯಲ್ಲ? ಶ್ರೀಕೃಷ್ಣ ಪರಮಾತ್ಮಾ ಮೋಹಿನಿ ಅವತಾರ್ದಲ್ಲಿದ್ದಾಗ. ಆ ಪರಮೇಶ್ವರನೇ ಅವನ್ನ ಲವ್ ಮಾಡಾಕ ಹೋಗಿದ್ದ. ಇನ್ನೀ ನರಮನುಷ್ಯಾರು ಬಿಡ್ತಾರೇನು? ಹರುಕು ಸೀರಿ ಉಟ್ಟು, ಮುರುಕು ರೊಟ್ಟಿ ಬೇಡಾಕ್ಬಂದ ತಿರುಕಿನ ಸೈತ ರೇಪ್ ಮಾಡೋ ತಲೀ ಕೆಟ್ಟವರಿರ ಬೇಕಾದ್ರೆ, ಇನ್ನು ನಿನ್ನಂತ ಟಿಪ್ ಟಾಪಿರೋ ಹುಡುಗಿನ ಹರ್ಕೊಂಡು ತಿಂದ್ಹ ಬಿಡ್ತಾರ. ಹುಚ್ಚಿ. ನಡಿ ಮನಿಗೆ. ದುಷ್ಟರನ್ನ ನಿರ್ನಾಮ ಮಾಡಾಕೋಗಿ, ನೀನ್ಹ ನಿರ್ನಾಮಾದಿಯಾ.

ಲಿಲ್ಲಿ– ಹೆಣ್ಣಿಗೆ ಅಸಾಧ್ಯವಾದದ್ದು ಯಾವದೂ ಇಲ್ಲ ರಂಗು.

ರಂಗ– ಹಿಂಗಂದದ್ಹ ಬಾಳ ಜನ ಮಣ್ಣಿಗೋದ್ರು.

ಲಿಲ್ಲಿ– ಮಣ್ಣಿಗೋದ್ರೂ, ಎಂದಿಗೂ ಮರೆಯದ ಮಹಿಳೆಯರಾಗಿ ಉಳಿದಿದ್ದಾರೆ. ಇತಿಹಾಸದಲ್ಲಿ ಅವರ ಹೆಸರು ಅಜರಾಮರವಾಗಿಯೇ ಇದೆ.

ರಂಗ– ಲಿಲ್ಲಿ, ಸಧ್ಯ ನನ್ನೊಡ ಲವ್ ಮಾಡ್ತಿಯೋ? ದುಷ್ಟರನ್ನ ಹುಡುಕ್ಯಾಡಿ ಮರ್ಡರ್ ಮಾಡ್ತಿಯೋ?

ಲಿಲ್ಲಿ– ಏನು ಲವ್ ಮಾಡ್ತಿ ಬಿಡ ನಿನ್ನ, ಮೊದಲಿನ ಹುರುಪ್ಹ ಬರುವಲ್ದೀಗ.

ರಂಗ– ಕಟದಾರು ನಿನ್ನ. ಯ್ಯಾವ ಸುದ್ದಿ–ಗದ್ಲಿಲ್ಲದಂಗ ತಣ್ಣಗಿದ್ದವನಿಗೆ ಲವ್ವಿನ ಹವಾ ತುಂಬಿ, ಹುರುಪೆಬ್ಸಿ, ಈಗ ನಿಂದು ಪೌನಾಗೇತಂದ್ರ ಯನಾಕ್ಕೇಳ್ತಾರ?

ಲಿಲ್ಲಿ– ಪರವಾಯಿಲ್ಲ. ನಾ ಸ್ಟಾರ್ಟ್ ಮಾಡಿದ ಗಾಡಿ, ಅಘಾಗ್ದಂಗ ಛಾರ್ಜಿನ್ಯಾಗ ಉಳುದೈತನ್ನೋದು ಖಾತ್ರಿ ಆತು.

ರಂಗ– ಅಂದ್ರ ನೀ ಬಾಡಿ ಅನ್ನೊ ಗಾಡಿ ಪರೀಕ್ಷೆ ಮಾಡೋ ಮೆಕ್ಯಾನಿ

ಕ್ಕೇನು? ನೋಡು ಇನ್ನೊಂದು ತಿಂಗ್ಳೊಪ್ಪತ್ತು. ಕಚ್ಚಾ ರೋಡಿನ್ಯಾಗೋಡ್ಸಿ ಕೊನಿಗೊಮ್ಮೆ ಗುಡ್ಡ ಹತ್ತಿಸಿಳಿಸಿ ಖಾತ್ರಿ ಮಾಡ್ಕೊಂತಿಯೇನು?

ಲಿಲ್ಲಿ– ಬ್ಯಾಡ ಸುಮ್ನ ಗಾಡಿ ನಡೆಸಿದ್ರೆ ನನಗ ಲಾಸಾಗುತ್ತ.

ರಂಗ– ಅಷ್ಟರ ತಿಳ್ಕೊಂಡಿಯಲ್ಲ ನನ್ನ ಪುಣ್ಯ. ಅಂದಂಗ ಲಿಲ್ಲಿ ಆ ಮೂರ್ತಿನ ಈಗಗ ನಿನ್ನ ಕಾಡೋದು ಬಿಟ್ಟಾನಿಲ್ಲೊ?

ಲಿಲ್ಲಿ– ಜೀವ ಬಿಟ್ರೂ. ಅವನೇನು ಕಾಡೋದು ಬಿಡದಿಲ್ಲ.

ರಂಗ– ಪಾಪ ಅವನದೂ ವಯಸ್ಸು ಹೆಂಗ ಬಿಡ್ತಾನ? ಅದಕ ಅವನೌನ ಜೀವನ್ದಾಗ ನೆನಪಿಟಿರ್ಬೇಕು ಅಂತ ಮದವಿನ ನಾವ ಮಾಡಿ ಬಿಡಾನ.

ಲಿಲ್ಲಿ– ಹೆಣ್ಣಲ್ಲಿಂದ ತರ್ತೀಯಾ?

ರಂಗ– ಕನಸಿನ್ಯಾಗ ಸೈತ ಕಂಡಿರ್ಲಾದು ಅಂತ ಹೆಣ್ಣು ತರ್ತೀನಿ. ಬಾಯಿಲ್ಲಿ ಹೇಳ್ತೀನಿ (ಕಿವಿಯಲ್ಲಿ ಹೇಳಿ) ನೀ ಇಷ್ಟು ಮಾಡು ಮುಂದಿಂದು ನಾ ನೋಡ್ಕೊಂತೀನಿ.

ಲಿಲ್ಲಿ– ಇಷ್ಟ ಹೌದಿಲ್ಲ? ಚಿಂತಿಬಿಡು. ಮರಿಗೆ ನಿಂತು ನೋಡು.

ರಂಗ– ಬಂದ ನೋಡಲ್ಲಿ ಕೆಂಟ್ರಿ ಶೆರೆ ಕುಡ್ಡವರ್ಗತಿ, ನಾನಿಲ್ಲೆ ಮಲಗಿರ್ತೆನಿ. ನಿನ್ನ ಕೆಲ್ಸ ಶುರು ಮಾಡಿಕೊ (ಮರೆಯಾಗುವನು)

(ಮೂರ್ತಿ ಬರುವನು)

ಮೂರ್ತಿ– ಹಾಯ್ ಲಿಲ್ಲಿ.

ಲಿಲ್ಲಿ– ಹಾಯ್ ಡಿಯರ್.

ಮೂರ್ತಿ ಅಂ! ಡಿಯರ್? (ಸುತ್ಲೂ ನೋಡಿ) ಯಾರಿಗಂದಿ? ಇಲ್ಲಿಂತು ಆ ರಂಗಿಲ್ಲ.

ಲಿಲ್ಲಿ– ನೀನದಿಯಲ್ಲ. ನಿನಗ ಅಂದಿದ್ದು ನನ್ನ ರಾಜಾ.

ಮೂರ್ತಿ– ನನಗೇನ ಕೆಡುಗಾಲನ ಬಂತಿದು. ಇಕಿ ಬಾಯಾಗ ಡಿಯರ್ರು ರಾಜಾ ಅಂತ ಬರಬೇಕಾದ್ರ. ನನ್ನ ಹೆಣ ಹೊರೊ ವಿಚಾರನ ಇರ್ಬೇಕಿದು. ಮಿಸ್ ಲಿಲ್ಲಿ, ನನಗ ಮೈಯಾಗ ಆರಾಮಿಲ ದವಾಖಾನೆಗೆ ಹೋಗಿ ಬಗೀನಿ.

ಲಿಲ್ಲಿ– ಪ್ರಾಣಕಾಂತ. ನಿನ್ನ ಪ್ರಾಣವಲ್ಲಭೆಯನ್ನು ಬಿಟ್ಟೇ ಹೋಗುತ್ತಿರುವೆಯಲ್ಲ.

ಮೂರ್ತಿ– ಛಿಛೀ ಹೆಂಗಾದಿತು ? ನಿನ್ನ ಮಾತು ನಂಬಿ ಹತ್ರಕ್ಕ ಬಂದು, ಒದಿಸ್ಕೊಂಡು ಸಾಯ್ಬೇಕಿ ತಡಿ.

ಲಿಲ್ಲಿ– ಎಂಥಾ ಮಾತಾಡುತ್ತಿರುವಿ ಪ್ರಿಯ ?

ಮೂರ್ತಿ– ಪ್ರಿಯೆ ?? ದೊಡ್ಡ ಗೂಟಾನ ಜಡಿತಾಳ ಕಾಣುತ್ತ ನನಗ.

ಲಿಲ್ಲಿ– ನೀನೇ ನನ್ನ ಜೀವ. ನಿನಗೆ ಒದಿಯುತ್ತೇನೆಯೋ ?

ಮೂರ್ತಿ– ಬದಿತಿಯೋ. ಪ್ರಾಣ ತಗಿತಿಯೋ ? ಅದ್ದು ತಿಳಿದೇಗಾಗೇತೀಗ್ಯ ನನ್ನ ಮಾರಿ ನೋಡಿದ್ಕೂಡ್ಲೆ ಯಾಕಲೇ, ಬೇವಾರ್ಸಿ. ಐವಾನ ಅನ್ನೋ ಶಬ್ದಗಳು ಬರ್ಬೇಕಾದ ನಿನ್ನ ಬಾಯಲ್ಲಿ. ಡಿಯರು, ರಾಜ, ಪ್ರಿಯ ಅನ್ನೊ ಶಬ್ದಗಳು ಬರ್ತದಾವಲ್ಲ, ಏನ್ಸ ಮಾಚಾರ. ? ನನ್ನ ರಮಿಸಿ ಕರ್ಕೊಂಡ್ಹೋಗಿ, ಮರ್ಡರ್ ಮಾಡೋ ವಿಚಾರೈತೆನು ನಿನಗ ?

ಲಿಲ್ಲಿ– ಅದೇನಿಲ್ಲ. ನನಗ ನಿನ್ನ ಮ್ಯಾಲ ಮನಸ್ಸಾಗೇತಿ.

ಮೂರ್ತಿ– ನಿನಗ ನನ್ನ ಮ್ಯಾಲ ಮನಸ್ಸಾಗೇತ ? ಇದೇನಿದು. ಒಮ್ಮಿಗೆ ನಮ್ಮ ದೇಶದ ಸಂವಿಧಾನನೇ ಬದ್ಲಿ ಮಾಡಿದಂಗಾತಲ್ಲ. ಅಲ್ಲ್ಪ. ಮುಂಗ್ಸಿ ಹಾವಿನ್ಕೂಡ ಗೆಳೆತನ ಮಾಡುತ್ತಂದ್ರ ಯಾರು ನಂಬ್ತಾರ ? ಸಾಧ್ಯನ ಇಲ್ಲದು. ಇವಳೌಳ ಏನ್ಹ ಪ್ಲಾನ್ ಮಾಡ್ತ್ಯಾಳ. ಲಿಲ್ಲಿ ಖರೆ ಹೇಳು, ಆ ರಂಗ್ಯಾ ನಿನಗ ಈ ನಮೂನಿ ನಾಟಕ ಮಾಡಂತ ಹೇಳಿ ಕಳ್ಸ್ಯಾನ ಹೌದಿಲ್ಲೊ ?

ಲಿಲ್ಲಿ– ಥೂ, ಆ ಚಂಡಾಲನ ಹೆಸರೆತ್ತಬ್ಯಾಡ ನನ್ಮುಂದೆ. ನನಗವನು ಮಾಡಿರೋ ಅನ್ಯಾಯ ನೆನಸ್ಕೊಂಡ್ರೆ, ನನ್ನ ಮೈಯಲ್ಲಾ ಉರಿತೈತಿ.

ಮೂರ್ತಿ– ರಂಗ್ಯಾ, ನಿನಗನ್ಯಾಯ ಮಾಡಿದ್ನ ?

ಲಿಲ್ಲಿ– ಹೌದು. ನನ್ನ ಪ್ರೀತಿ ಮಾಡಂವಂಗ ನಾಟಕ ಮಾಡಿ, ಮದಿವ್ಯಾಗ್ತಿನಂತ ಮಾತು ಕೊಟ್ಟು, ಈಗ ಅದ್ಯಾವುದೋ ಹುಡುಗಿ ಕರ್ಕೊಂಡು ದಿನಾ ಸುಡುಗಾಡಿಗೋಕ್ಯಾನ ಲವ್ ಮಾಡಾಕ.

ಮೂರ್ತಿ– ಸುಡುಗಾಡಿಗೋಕ್ಯಾರ ? ಅಲ್ಲೇನು ಹೆಣ ಎಬ್ಬಿಸ್ತಾರೆನು ?

ಲಿಲ್ಲಿ– ಹಂಗಲ್ಲ. ಯಾರಿಗೂ ಗೊತ್ತಾಗಬಾರ್ದಂತ. ಆ ಹುಡ್ಗಿನೆ ಇವ್ನಿಗೆ ಸುಡುಗಾಡಿಗೆ ಬರಾಕೇಳ್ಯಾಳಂತ,

ಮೂರ್ತಿ– ಹೊಸಾದ್ದು ಕೇಳಿದಂಗಾತಿದು. ಸುಡುಗಾಡದಾಗ ಲವ್ ಮಾಡ್ತಾರಂದಿಂದ. ಅವರೌರ ರಾಕ್ಷಸ ವಂಶದವರಿರ್ಬೇಕು.

ಲಿಲ್ಲಿ– ಅದಕ, ಆ ರಾಕ್ಷಸ ವಂಶದವನ್ನ ಬಿಟ್ಬು. ಈ ಗಂಧರ್ವ ವಂಶದ ವನ್ನ ಲವ್ ಮಾಡ್ಬೇಕನ್ನೊ ಮಾನಸ್ಸಾಗೇತಿ.

ಮೂರ್ತಿ– ಲಿಲ್ಲಿ ನಿನ್ನ ಮಾತ್ಕೇಳಿ ನನಗ ನಡುಗ ಬರಾಕ್ಹತ್ತೇತಿ. ಮೊದಲ್ಲು ನೀನು ಬೆರಿಕಿ ಹೆಣ್ಣದಿ. ಲವ್ ಮಾಡ್ತೀನಿ ಅಂದು... (ಕೆನ್ನೆ ಮುಟ್ಟಿ ಕೊಂಡು) ಬ್ಯಾಡ ಮರಾಯುಳ ನಿನ್ನ ಸಹವಾಸನ್ನು ಬ್ಯಾಡ ನನಗ.

ಲಿಲ್ಲಿ– ಸರಿ ಬಿಡ್ರಿಂಗಾರ. ಆ ರಂಗೊಬ್ಬಾಂವ ಮೋಸ ಮಾಡಿದ. ಈಗ ನೀನೂ ನನ್ನ ಕೈ ಬಿಡಾಕ ತಯಾರಾಗಿದಿ ಅಂದಿಂದ. ನಾನ್ಯಾಕ ಬದುಕಿರ್ಲಿ? ಇಲ್ಲೇ ಯಾವ್ದರ ಮರಕ್ಕ ಉರ್ಲು ಹಾಕ್ಕೊಂತಿನಿ, ಬರ್ತೀನಿ.

ಮೂರ್ತಿ– ಸ್ವಲ್ಪ ತಡಿ. ನಾನೀಗ ಒಲ್ಲೆ ಅಂದ್ರ. ಸಾಯ್ತೀಯಾ?

ಲಿಲ್ಲಿ– ಈಗ್ಲೊಂಟಿನಲ್ಲ ಸಾಯಾಕ.

ಮೂರ್ತಿ– ಖರೇನ..ನೀ ನನ್ನ ಪ್ರೀತಿ ಮಾಡ್ತೀಯಾ?

ಲಿಲ್ಲಿ– ಮೊದಲು ಹೂಂ ಅನ್ನು. ಆವ್ಯಾಲ , ನೋಡು. ಹೆಂಗ ಮಾಡ್ತೀನಿ ಪ್ರೀತಿನ?

ಮೂರ್ತಿ– ಹೂಂ ಅಂತೀನಿ. ಆದ್ರ ನೀ ನನಗ ಮೋಸ ಮಾಡಬಾರ್ದು ನೋಡು.

ಲಿಲ್ಲಿ– ನಿನಗನುಮಾನಿದ್ರ ನಾಳಿನೆ ಮದಿವ್ಯಾಗಿ ಬಿಡನಲ್ಲ.

ಮೂರ್ತಿ– ಆಂ. ಈಗ ಪೂರಾ ಖಾತ್ರ್ಯಾತು ನನಗ. ನೀ ಯಸ್ ಅಂದ್ರೆ ಇವತ್ತ್ಲೆ ಕಟ್ತೀನಿ ತಾಳಿನ?

ಲಿಲ್ಲಿ– ಹಂಗನ್ನೋ ನನ್ನ ಚಕೋರ.

—ಪದ—

(ಪದ ಮುಗಿದ ನಂತರ)

ಮೂರ್ತಿ– ಲಿಲ್ಲಿ, ನೀನಂದಗ ನಾಳೆನೆ ಮದಿವಿ ವ್ಯವಸ್ಥ ಮಾಡ್ತೀನಿ. ಆದ್ರ ಮದವಿ ಎಲ್ಲಿಟ್ಕೊಳ್ಳೋದು?

ಲಿಲ್ಲಿ– ಸುಡುಗಾಡಿನ್ಯಾಗ.

ಮೂರ್ತಿ– ಆ? ಸುಡುಗಾಡಿನ್ಯಾಗ್ಹ? -

ಲಿಲ್ಲಿ– ಹೌದು. ಯಾಕಂದ್ರ, ಆ ರಂಗನೂ ಹುಡಿಗಿ ಕೂಡ ಅಲ್ಲಿಗ್ಬಂದಿರ್ತಾನೆ. ನಾವು ಮದುವ್ಯಾಗಿದ್ದು, ಮೊದ್ಲು ಅವರ ಕಣ್ಣಿಗ್ಬೀಳ್ಬೇಕು. ಅವರ ಹೊಟ್ಟಿ ಉರಿಬೇಕು.

ಮೂರ್ತಿ– ನಿನ್ನ ವಿಚಾರೇನೋ ಬರೊಬ್ಬರಿನೆ. ಆದ್ರ, ಸುಡುಗಾಡಿನ್ಯಾಗ ಮದಿವ್ಯಾಗೋದಂದ್ರ ನನಗ್ಯಾಕೋ ಸರಿ ಕಾಣವಲ್ದು.

ಲಿಲ್ಲಿ– ನನ್ನಾಸಿಗೆ ಒಪ್ತಿಯಿಲ್ಲೇನು?

ಮೂರ್ತಿ– ಒಪ್ತೀನಿ, ಸುಡುಗಾಡಂದ್ರೂ ಸೈ. ಗಟಾರಂದ್ರೂ ಸೈ ನಿನಗ ತಾಳಿ ಕಟ್ತೀನಿ. ಆ ರಂಗ್ಯಾನ ಸೊಕ್ಕು ಮುರಿತೆನಿ.

ಲಿಲ್ಲಿ– ಗಂಡಂದ್ರೆ ನೀನೆ. ಹಂಗಾರ ನಾಳೆ ನೀನು...

ಮೂರ್ತಿ– ಮದುಮಗನಾಗಿ. ತಾಳಿ ಸಮೇತ ಸುಡುಗಾಡಿಗ್ಬರ್ತೀನಿ ತಾಳಿ ಕಟ್ತೀನಿ, ಆ ರಂಗ್ಯಾನ ಸೊಕ್ಕು ಮುರ್ದು, ನಿನ್ನ ಅಂಡಮಾನ್ ದ್ವೀಪಕ್ಕೆ ಹನಿಮೂನಿಗೆ ಕರ್ಕೊಂಡ್ಹೋಕ್ಕೀನಿ. ಆದ್ರ, ನೀ ನನಗ ಮೋಸ ಮಾತ್ರ ಮಾಡಬ್ಯಾಡ?

ಲಿಲ್ಲಿ– ನನ್ನ ದೇವರು ನೀನು. ನಿನಗ ಮೋಸ ಮಾಡ್ತೀನಾ?

ಮೂರ್ತಿ– ನಾ ನಿನಗೇನೊ ದೇವರಾದೆ, ಆದ್ರ ನಾನು ದೆವ್ವಗಳ ಸಾಕ್ಷಿಯಾಗಿ ಮದಿವ್ಯಾಗ್ಬೇಕಾತಲ್ಲ. ಅದು ಛಲೊನ. ಯಾಕಂದ್ರ ನಮ್ಮ ಜೋಡಿ ಖಾಯಂ ಜಂಟಿಯಾಗಿರಾಕ, ಜನ ಸಾಮಾನ್ಯರ ಆಶೀರ್ವಾದಕ್ಕಿಂತ, ಭೂತ, ಪ್ರೇತಗಳ ಆಶೀರ್ವಾದನ್ಹ ಸರಿ. ಹಂಗಾರ ನಾ ಬರ್ಲಾ?

ಲಿಲ್ಲಿ– ಈಗ್ಹೋಗು, ಮರಿದೆ ನಾಳೀ...

ಮೂರ್ತಿ– ಸುಡುಗಾಡಿಗ್ಬರ್ತೀನಿ, ತಾಳಿ ಕಟ್ತೀನಿ. ಆ ರಂಗ್ಯಾನ ಸೊಕ್ಕು ಮುರಿತೆನಿ (ಹೋಗುವನು)

ಲಿಲ್ಲಿ— ಹೋಗು ಮಗನೆ ಯಾರ ಸೊಕ್ಕು ಮುರಿತೆತಿ ಅನ್ನೋದು ನಾಳೆ... (ರಂಗ ಬರುವನು)

ರಂಗ— ಸುಡುಗಾಡಿನ್ಯಾಗ ಗೊತ್ತಾಗುತ್ತ, ಅಂತೂ ಲಿಲ್ಲಿ, ಆ ಮಗನ ಮುಂದ ಚಂದ ನಾಟಕ ಮಾಡಿದೆ.

ಲಿಲ್ಲಿ— ಒಟ್ಟವನ್ನ ಸುಡುಗಾಡಿಗೆ ಬರಾಕ ವ್ಯವಸ್ಥ ಮಾಡೇನಿ ಮುಂದಿಂದು ಏನ್ಮಾಡೋದು, ಬಿಡೋದು ನಿನಗ ಕೂಡಿದ್ದು.

ರಂಗ— ಅದರ ಚಿಂತಿ ಬಿಡು ಇವನ ಮದಿವಿನ ಹೆಂಗ ಮಾಡ್ತೀನಿ ನೋಡುವಂತಿ ನಡಿ.

(ಹೋಗುವರು)

## ಹದಿಮೂರನೆಯ ದೃಶ್ಯ

## ಮಿಲ್ಲಿನ ಆವರಣ

(ವನಜ ಕಾಟನ್ ಮಿಲ್ಲಿನ ದ್ವಾರ ಬಾಗಿಲು ಅರ್ಧ ವೃತ್ತಾಕಾರದಲ್ಲಿ ಮಿಲ್ಲಿನ ಹೆಸರು. ಮಧ್ಯಭಾಗದಲ್ಲಿ ಧರ್ಮಯ್ಯನವರ ಶಿಲಾಮೂರ್ತಿಯನ್ನು ಪ್ರತಿಸ್ಥಾಪಿಸಿದೆ. ಆ ಮೂರ್ತಿಯನ್ನೇ ನೋಡುತ್ತಾ ವನಜ ಚಿಂತಾಕ್ರಾಂತಳಾಗಿ ನಿಂತಿದ್ದಾಳೆ, ಭೋಜರಾಜ ಬಂದು ಅವಳನ್ನು ನೋಡಿ)

ಭೋಜರಾಜ— ವನಜ..., (ಸುಮ್ಮನಿರಲು) ವನಜಮ್ಮ.

ವನಜ— (ಎಚ್ಚೆತ್ತು, ಕಣ್ಣೊರೆಸಿಕೊಳ್ಳುತ್ತಾ) ಓಹ್ಹ್ ಮಾವ.

ಭೋಜರಾಜ— ನೋಡಮ್ಮ ವನಜ, ಮುಗಿದು ಹೋದ ಕಥೆಯನ್ನು ಮುಂಬರುವ ಬದುಕಿಗೆ ವ್ಯಥೆಯಾಗಿ ಅರಿಸಿಕೊಳ್ಳಬಾರದು. ಪಾಪದ ಕೊಡ ತುಂಬಿದ ಮೇಲೆ ಆಯುಷ್ಯವನ್ನು ಕೈಗಡ ತರಲು ಸಾಧ್ಯವಿದೆಯೇನಮ್ಮಾ? ಖಂಡಿತಾ ಸಾಧ್ಯವಿಲ್ಲ. ಅದರಂತೆ ಆ ಧರ್ಮಯ್ಯನಿಗೂ, ಈ ಭೂಮಿಗೂ ಋಣ ತೀರ್‍ತು, ಪ್ರಾಣ ಹೋಯ್ತು. ಅದಕ್ಯಾಕಮ್ಮ ಇಷ್ಟು ಚಿಂತೆ ಮಾಡ್ತೀಯಾ?

ವನಜ– ಅವರ ಸಾವು ಸಹಜವಾಗಿದ್ದರೆ ನಾನಿಷ್ಟು ವೇದನೆ ಪಡುತ್ತಿರ ಲಿಲ್ಲ. ನೀಚರ ಗುಂಡಿಗೆ ಸಾಚಾ ಮನುಷ್ಯ ಬಲಿಯಾಗಿದ್ದನ್ನು ಕಂಡು, ನನ್ನ ಬುದ್ಧಿಗೆ ಮಂಕು ಕವಿದು ಬಿಟ್ಟಿದೆ. ನೀವೇ ಹೇಳಿ ಮಾವ, ಆ ಧರ್ಮಯ್ಯ ಧರ್ಮರಾಯನ ಗುಣದವರಲ್ಲವೆ? ಅವರನ್ನು ಈ ರೀತಿ ಕೊಲೆ ಮಾಡಿರುವುದು ಅನ್ಯಾಯವಲ್ಲವೆ?

ಭೋಜರಾಜ– ಅನ್ಯಾಯವಮ್ಮ. ಮಹಾ ಅನ್ಯಾಯ. ಅವರಾರೀತಿ ಕೊಲೆಯಾಗಿದ್ದನ್ನು ಕಂಡು ಧರ್ಮವೇ ಸತ್ತು ಹೋಯ್ತಲ್ಲಾ. ಇನ್ನು ನಾವು ಬದುಕುವುದರಲ್ಲಿ ಅರ್ಥವಿಲ್ಲಾಂತ. ನನ್ನಾತ್ಮ ನೊಂದು–ಬೆಂದು ಹೋಗಿದೆ. ಆದರೇನು ಮಾಡೋದಮ್ಮ. ನಮ್ಮ ಪಾಪದ ಕೊಡ ತುಂಬೋವರೆಗೂ. ಪಾಲಿಗೆ ಬಂದದ್ದನ್ನು ಅನುಭವಿಸ್ಲೇಬೇಕಲ್ಲ?

ವನಜ– ಆ ರೀತಿ ಅವರನ್ನು ಕೊಲೆ ಮಾಡಿದವರು ಯಾರಿರಬೇಕು ಮಾವ ?

ಭೋಜರಾಜ– ಎಂಥಾ ಪ್ರಶ್ನೆ ಕೇಳಿದೆಯಮ್ಮ ? ಕಳವು ಮಾಡೋನು ಸುಳಿವು ಕೊಟ್ಟು ಕದಿತಾನೇನಮ್ಮ ? ಧರ್ಮಯ್ಯನ ಕೊಲೆ ಯಾವ ರೀತಿ ಸಮಸ್ಯೆಯಾಗಿದೆಯೆಂದರೆ, ಕೊಟ್ಟಿಗೆಯಲ್ಲಿ ಕಟ್ಟಿದ ಹಸುವನ್ನು, ಕಾಡಿನಿಂದ ಹುಲಿ ಬಂದು ತಿಂದು ಹೋದಂತಾಗಿದೆ. ಅಂದರೆ, ಆ ಹುಲಿ, ಬಹಳ ದಿನ ತನ್ನ ಪರಿಸರದಲ್ಲಿ ಆಹಾರ ಸಿಗದೆ ಹಸಿದಿರಬೇಕು. ತಾಳ್ಮೆ ಕಳೆದುಕೊಂಡು ಊರಿಗೆ ನುಗ್ಗಿ, ಹಸುವನ್ನು ತಿಂದಿರಬೇಕು. ಕಾರಣ, ಬಗೆ ಹರಿಯದ ಸಮಸ್ಯೆಗೆ ತಲೆ ಖರ್ಚು ಮಾಡುವುದಕ್ಕಿಂತ, ಮುಂದಿನ ಆಶಾ ಜೀವನದ ಕಡೆ ಗಮನ ಹರಿಸು ವುದೇ ಒಳ್ಳೆಯದು.

ವನಜ– ದುಃಖ ವ್ಯಕ್ತವಾಗುವ ಈ ಸಮಯದಲ್ಲಿ, ಆಶಾ ಜೀವನದ ಕಡೆ ಗಮನ ಹರಿಸಲು ಮನಸ್ಸಾದರೂ ಹೇಗೆ ಬರುತ್ತದೆ ಮಾವ ?

ಭೋಜರಾಜ– ಹಾಗಂತ. ಗೊತ್ತು ಮಾಡಿರೋ ಮದುವೆಸ ತಪ್ಸೋ ದಕ್ಕೆ ಬರುತ್ತೇನಮ್ಮ ? ಈಗಾಗ್ಲೆ ವಿಕ್ರಂ, ಅರವಿಂದ ಕೂಡಿ. ಲಗ್ನಪತ್ರಿಕೆ ಹಂಚಿ, ಮದುವೆ.ಸಿದ್ಧತೆಯಲ್ಲಿದ್ದಾರೆ.

ವನಜ– ಹಾಗಾದ್ರೆ. ಮದುವೆ ಮುಂದೂಡಲು ಸಾಧ್ಯವಿಲ್ಲವೇ ?

ಭೋಜರಾಜ– ಸಾಧ್ಯವೊ. ಅಸಾಧ್ಯವೊ ನೀನೇ ವಿಚಾರಿಸಿ ನೋಡಮ್ಮ. ಮದುವೆ ದಿನ, ಮುಹೂರ್ತದ ವೇಳೆ ಎಲ್ಲ ನಿಶ್ಚಯಿಸಿ ಆಗಿದೆ. ದೂರದೂರುಗಳಿಂದ ಆಹ್ವಾನಿತರಾದ ಗಣ್ಯ ವ್ಯಕ್ತಿಗಳು ಬರುವ ನಿರೀಕ್ಷೆಯಿದೆ ಅಂದಾಗ. ಆಗಿ ಹೋದ ಅನಾಹುತಕ್ಕೆ ಅಳುತ್ತಾ ಕುಳಿತರೆ. ಮುಂದಾಗೊ ಅವಮಾನವನ್ನ ಸಹಿಸೋದು ಅಸಾಧ್ಯವಾಗೋದಿಲ್ವೇನಮ್ಮ ? ಸುಮ್ನೆ ಯಾಕಮ್ಮ ಇಲ್ಲದ ವಿಚಾರಗಳಿಗೆ ತಲೆ ಕೆಡಿಸಿಕೊಳ್ತಿಯಾ ? ನಾನು ನಿನ್ನ ಹಿತಚಿಂತಕನೇ ಹೊರತು. ಮನಸೊಯ್ಯೋ ವಂಚಕನಲ್ಲಮ್ಮ. ಎಲ್ಲಾ ಸರಿಯಾಗುತ್ತೆ ನೀನೇನೂ ಯೋಚನೆ ಮಾಡ್ಬೇಡಮ್ಮ.

ವನಜ– ಸರಿ ಮಾವ. ನಿಮ್ಮಿಷ್ಟ. ಆದರೆ. ನೀವು ನನಗೆ ಕೊಟ್ಟ ಮಾತನ್ನ ನೆರವೇರ್ಸಿ ಕೊಡ್ತೀರಲ್ವೆ?

ಭೋಜರಾಜ– ಅದೇ, ಆಸ್ತಿಯನ್ನ ಅರವಿಂದನ ಹೆಸರಿಗೆ ಮಾಡ್ಸೋದಲ್ವೆ?

ವನಜ– ಹೌದು ಮಾವ.

ಭೋಜರಾಜ– ಆ ಯೋಚನೆನೆ ಮಾಡಬೇಡಮ್ಮ. ನಿನ್ನಾಸೆ ಖಂಡಿತ ನೆರವೇರ್ಸಿ ಕೊಡ್ತೀನಿ. ಆದರೆ...

ವನಜ– ಆದರೇನು?

ಭೋಜರಾಜ– ಮದುವೆ ನೋಡಿದ್ರೆ ಮೂರ್‍ದಿನ ಉಳಿದಿದೆ. ನೀನ್ನೋಳ್ತಿಯಾ, ಆಸ್ತಿ ಅರವಿಂದನ ಹೆಸರಿಗಾದ ನಂತರವೇ ತಾಳಿ ಕಟ್ಟಿಸಿಕೊಳ್ತೀನಿ ಅಂತ. ಆದ್ರೆ, ನಮ್ಮ ಫ್ಯಾಮಿಲಿ ವಕೀಲ್ರು ಅಮೇರಿಕಾಕ್ಹೋಗಿದ್ದಾರಂತೆ. ಬರೋದು ಇನ್ನೂ ಒಂದು ತಿಂಗಳು ತಡವಾಗುತ್ತಂತೆ. ಕಾರಣ ಏನು ಮಾಡ್ಬೇಕು ಅಂತಾನೆ ನನಗೆ ತೋಚ್ತಾಯಿಲ್ಲ.

ವನಜ– ಅದಕ್ಯಾಕೆ ಯೋಚನೆ ಮಾಡ್ತೀರಿ? ಬಾಂಡ್ ಪೇಪರ್ ತರಿಸಿ, ಸಹಿ ಮಾಡಿ ಬಿಡ್ತೀನಿ. ನಂತರ ವಕೀಲ್ರು ಬಂದ ಮೇಲೆ. ವಿಲ್ ಬರೆಸಿದರಾಯ್ತು. ಒಟ್ಟಿನಲ್ಲಿ ನನ್ನ ಒಡೆಯರಾಗೋ ಅರವಿಂದರು, ನನಗೆ ತಾಳಿ ಕಟ್ಟೋ ದಿನವೇ ನನ್ನಾಸ್ತಿಗೂ ಒಡೆಯರಾದರೆನ್ನುವ ಭಾವನೆಯಾದರೂ ನನ್ನ

ಮನಕ್ಕೆ ಉಳಿಯಬೇಕು. ನಾ ಕೊಟ್ಟ ಮಾತಿಗೂ ಬೆಲೆ ಸಿಕ್ಕಂತಾಗಬೇಕು. ಅದೇ ನನ್ನ ಬಯಕೆ.

ಭೋಜರಾಜ– ಅಂತೂ ಸಮಸ್ಯೆಯನ್ನು ಸಲೀಸಾಗಿ ಬಗೆ ಹರಿಸಿದಿಯಮ್ಮ. ಒಟ್ಟು. ನಿನ್ನಾಸೆಗೆ ಆತಂಕವಾಗಬಾರದು ಅಷ್ಟೆ ಸರಿ. ನೀನು ಮನೆಗೆ ನಡಿಯಮ್ಮ. ನಾನು ಬಾಂಡ್ ಪೇಪರ್ ತಗೊಂಡು ವಿಕ್ರಂ ಹಾಗೂ ಅರವಿಂದರನ್ನ ಕರ್ಕೊಂಡು ಬರ್ತೀನಿ. (ಹೋಗುವನು)

ವನಜ– ನಿಜಕ್ಕೂ ನಮ್ಮಾವ ಮನುಷ್ಯರೂಪಕ್ಕೆ ಹೊರತಾದ ದೇವರು.

(ವಿಶಾಲ ಬರುವಳು)

ವಿಶಾಲ– ದೇವರಲ್ಲ, ದೆವ್ವ.

ವನಜ– ಯಾರ್ನೀನು?

ವಿಶಾಲ– ವಿಧಿ ಅನ್ನುವ ವ್ಯಾಧಿಗೆ ತುತ್ತಾಗಿ ಬಾಧೆ ಪಡುತ್ತಿರುವ ದುರ್ಭಾಗ್ಯಳು.

ವನಜ– ಇದ್ದಹುದು ಆದರೆ ದೇವರಂತಾ ನಮ್ಮಾವನಿಗೆ ದೆವ್ವ ಅನ್ನಲು ಕಾರಣವೇನು ?

ವಿಶಾಲ– ದೆವ್ವಕ್ಕ ದೇವರು ಅಂದೆಯಲ್ಲ, ಅದೇ ಕಾರಣ ನೋಡಮ್ಮಾ ಕಣ್ಣಿಗೆ ಕಾಣುವಂತೆ ಕೆಟ್ಟತನ ಮಾಡೋರಲ್ಲಿ ಒಂದು ಪಕ್ಷ ಮಾನವಿಯತೆ ಮನೆ ಮಾಡಿಕೊಂಡಿರಬಹುದು. ಆದರೆ ಬಾಯ್ತುಂಬ ತಂಗಿ ಅಂತ ಕರೆದು ಮನದಲ್ಲಿ ಅವಳ ಶೀಲ ಹಾಳು ಮಾಡುವ ಕೆಟ್ಟ ವಿಚಾರ ಇದ್ದವರಲ್ಲಿ ಮಾನವಿಯತೆ ಮಣ್ಣಲ್ಲಿ ಮುಚ್ಚಿದ ಹೆಣವಾಗಿ ಹೋಗಿರುತ್ತದೆ.

ವನಜ– ಅಂದ್ರೆ ?

ವಿಶಾಲ– ಅಂದ್ರೆ ಪ್ರಾಮಾಣಿಕತನ ಎದ್ದು ಕಾಣುವ ಇಂಥಾ ದೊಡ್ಡವರಲ್ಲಿ, ಆ ಪ್ರಾಮಾಣಿಕತನ ಕದ್ದು ಮನೆ ಮಾಡಿಕೊಂಡಿರುತ್ತದೆ. ತಾಯಿ ತೋರುವ ಮಮತೆಯನ್ನು ತಮ್ಮ ಕಾಮಕ್ಕಾಗಿ ಬಳಸಿಕೊಳ್ಳುವ ಇಂಥ ಕಾಮ ಪಿಶಾಚಿಗಳಿಗೆ ದೆವ್ವ ಅನ್ನದೆ ದೇವರು ಅನುವುದು ನಮ್ಮ ಮೂರ್ಖತನದ ಪರಮಾವಧಿ ಮೀರಿದಂತಾಗುವುದಿಲ್ಲವೆ?

ವನಜ– ನೀನೇನು ತಲೆಕೆಟ್ಟವಳೋ, ಹುಚ್ಚು ಹಿಡಿದವಳೋ ಅಥವಾ ಮತ್ತೊಬ್ಬರ ಮನಸ್ಸನ್ನು ಹಾಳು ಮಾಡಲು ಹೊರಟಿರುವ ಮಾಟಗಾತಿಯೋ? ದೇವರು ಕಲ್ಲಿನ ರೂಪದಲ್ಲಿದ್ದರೂ ಕರುಣೆಯುಳ್ಳವನೆನ್ನುವ ನಂಬಿಕೆ ನನ್ನದಾಗಿರುವಾಗ, ಆ ನನ್ನ ನಂಬಿಕೆಯನ್ನು ಕೊಂದು ನೀನೇನು ಸಾಧಿಸಲು ಹೊರಟಿರುವೆಯೋ ನನಗರ್ಥವಾಗುತ್ತಿಲ್ಲ.

ವಿಶಾಲ– ತಪ್ಪು ತಿಳಿಬೇಡ ತಾಯಿ ಸತ್ಯವನ್ನೇ ಹೇಳ್ತೀನಿ. ನಾನು ಸಾಧಿಸಲು ಹೊರಟಿರುವುದೇನೋ ನಿಜ. ಆದರೆ ಆ ಸಾಧನೆ ಮತ್ತೊಬ್ಬರ ಮನಸ್ಸನ್ನು ಮಲಿನ ಮಾಡುವುದಲ್ಲಮ್ಮ. ಹೆಣ್ಣು ಕುಲಕ್ಕೆ ಹುಣ್ಣಾಗಿರುವ ವಿಷಘಾತುಕ ಸೈತಾನರ ಸಂಹಾರ ಮಾಡುವುದು,

ವನಜ– ಅಂದರೆ?

ವಿಶಾಲ– (ದುಃಖ) ಮದುವೆ ಹಂದರದಲ್ಲಿ ಮಧುಮಗಳಾಗಿ ನಿಲ್ಲಬೇಕಾದ ನನ್ನನ್ನು ಮನಬಂದಂತೆ ಭೋಗಿಸಿ ಬೀದಿಯಲ್ಲಿ ನಿಲ್ಲಿಸಿರುವವರ ರಕ್ತ ದೋಕುಳಿಯಾಡುವುದು. ನನ್ನಂತೆ ನೀನೂ ಹೆಣ್ಣಲ್ಲವೆ? ಶೀಲ ಕಳೆದು ಕೊಂಡವಳ ಬದುಕು ಒಡೆದ ಮಡಿಕೆಯನ್ನುವುದರ ಅರಿವು ನಿನಗಿಲ್ಲವೆ? ಇದ್ದರೆ ನೀನೇ ಹೇಳಮ್ಮಾ ನನ್ನ ಹೆಣ್ತನವನ್ನು ಮಣ್ಣು ಗೂಡಿಸಿದವರನ್ನು ದೇವರೆಂದು ಪೂಜಿಸಲೇ ಅಥವಾ ಕಣ್ಣು ಕಿತ್ತು ಕುರುಡರನ್ನಾಗಿಸಲೆ?

ವನಜ– ಅಂಥವರನ್ನಾಗಿಸುವುದರಲ್ಲಿ ಯಾವ ಅರ್ಥವೂ ಇಲ್ಲ. ಕೆಟ್ಟತನಕ್ಕಾಗಿಯೇ ಹುಟ್ಟಿದ ಅವರು ತಡವರಿಸುತ್ತಾ ಬಂದಾದರೂ ತಮ್ಮ ಚಟ ತೀರಿಸಿಕೊಂಡು ಬಿಡುತ್ತಾರೆ. ಇಂಥವರನ್ನು ಕರುಣೆಯಿಲ್ಲದೆ ಕಡಿದು ನಾಯಿ ನರಿಗಳ ಬಾಯಿಗೆ ಚೆಲ್ಲಬೇಕು.

ವಿಶಾಲ– ಒಪ್ಪಿದೆ ತಂಗಿ... ನಿನ್ನ ಕಟು ಸತ್ಯವನ್ನು. ಕೇವಲ ನನಗಾದ ಅನ್ಯಾಯವನ್ನು ಕೇಳಿಯೇ ನಿನಗಿಷ್ಟು ರೋಷ ಉಕ್ಕಿರಬೇಕಾದ್ರೆ, ಆ ಅನ್ಯಾಯಕ್ಕೆ ಬಲಿಯಾಗಿರುವ ನನಗಿನ್ನೆಷ್ಟು ಆಕ್ರೋಶ ಕುದಿಯುತ್ತಿರಬೇಕು.

ವನಜ– ಆ ರೀತಿ ನಿನ್ನ ಬದುಕಿನೊಂದಿಗೆ ಚೆನ್ನವಾಡಿದ ತಿಳಿಗೇಡಿಗಳು ಯಾರಮ್ಮ?

(ವಕೀಲ ಬರುವನು)

ವಕೀಲ– ಒಬ್ಬರಲ್ಲ ಮೂವರಮ್ಮ.

ವನಜ– ವಕೀಲ್ರೆ ನೀವು...?

ವಕೀಲ– ಹೌದಮ್ಮ ನಾನೆ. ನಾನೀಗಾಗ್ಲೆ ಅಮೇರಿಕಾಗೆ ಹೋಗಿರುವುದಾಗಿ ನಿನ್ನ ಮಾವನವರು ತಿಳಿಸಿರಬೇಕಲ್ಲವೆ?

ವನಜ– ಹೌದು. ಆದರೆ...

ವಕೀಲ– ನಾನು ಅಮೇರಿಕಾಗೆ ಹೋಗಿಲ್ಲ. ಹೋಗುವ ಅವಶ್ಯವೂ ನನಗಿಲ್ಲ. ಇದೆಲ್ಲ ನಿಮ್ಮಾವ ಭೋಜರಾಜರ ಕಾರಸ್ಥಾನವಮ್ಮ.

ವನಜ– ಏನು ಕಾರಸ್ಥಾನವೇ?

ವಕೀಲ– ಹೌದಮ್ಮಾ. ಹೌದು. ಯಾರನ್ನು ನೀನು ದೇವರೇದು ತಿಳಿದುಕೊಂಡಿರುವೆಯೋ ಅವರ‍್ಯಾರೂ ಖಂಡಿತ ನಿನ್ನ ಪಾಲಿನ ದೇವರಲ್ಲವಮ್ಮಾ ದೆವ್ವಗಳು. ಈಗ ನಿನ್ನೆದುರು ನಿಂತಿರುವ ಈ ಹೆಣ್ಣಿನ ನೇರ ಪರಿಚಯ ನನಗಿಲ್ಲದಿದ್ದರೂ ಇವಳ ಹಿನ್ನೆಲೆಯ ವಿಷಯವೇನೆಂಬುದನ್ನು ಧರ್ಮಯ್ಯನವರಿಂದ ತಿಳಿದುಕೊಂಡಿದ್ದೇನೆ.

ವನಜ– ಹಾಗಾದರೆ ಇವಳು ಹೇಳಿದಂತೆ...

ವಕೀಲ– ಶೀಲ ಕಳೆದುಕೊಂಡವಳಮ್ಮ. ಅದು ಒಬ್ಬರಿಂದಲ್ಲ ಮೂವರಿಂದ. ಅವರ‍್ಯಾರು ಗೊತ್ತೇನಮ್ಮ? ನಂಬರ್ ಒನ್ ನಿನ್ನ ಕಣ್ಣಿಗೆ ಸಭ್ಯ ವ್ಯಕ್ತಿಯಂತೆ ಕಾಣಿಸಿಕೊಳ್ಳುತ್ತಿರುವ ವಿಕ್ರಂ, ನಂಬರ್ ಟು ನಿನ್ನ ಮೆದುಳಿನ ನಿಯಂತ್ರಣವನ್ನೇ ತನ್ನ ಕೈಯಲ್ಲಿಟ್ಟುಕೊಂಡಿರುವ ಭೋಜರಾಜ, ನಂಬರ್ ಥ್ರೀ ನಿನ್ನ ಕೊರಳಿಗೆ ತಾಳಿ ಕಟ್ಟಿ, ತನಗೆ ದಕ್ಕುವ ಸಂಪತ್ತಿನಾಶೆಗೆ ಬಾಯ್ದೆರೆದ ಹೆಬ್ಬಾವಿನಂತಿರುವ ಡಾ॥ ಅರವಿಂದ.

ವನಜ– ಸಾರ್ ನೀವ್ಹೇಳ್ತಿರೋದು...?

ವಕೀಲ– ನಿನ್ನ ಸುತ್ತ ಪ್ರೇತವಾಗಿ ತಿರುಗುತ್ತಿರುವ ಕಪಟ ಹಿತೈಷಿಗಳು. ಚಟದ ಪ್ರಿಯಕರನ ಬಗ್ಗೆ ಹೇಳುತ್ತಿದ್ದೇನೆ. ಇವರೆಲ್ಲರೂ ನಿನ್ನ ಸಂಪತ್ತನ್ನು. ತಮ್ಮ ಕೈವಶ ಮಾಡಿಕೊಳ್ಳಲು ಹೆಣಗುತ್ತಿದ್ದಾರೆ. ನಿನ ಕೈಯಿಂದ

ಖಾಲಿ ಬಾಂಡ್ ಪೇಪರಿಗೆ ಸಹಿ ಮಾಡಿಸಿಕೊಂಡು, ನಂತರ ನನ್ನಿಂದ ವಿಲ್ ಬರೆ ಸುವ ವಿಚಾರದಿಂದ ಹಣದಾಸೆ ತೋರ್‍ಸಿ,. ನನ್ನನ್ನು ಅವರ ತಾಳಕ್ಕೆ ಕುಣಿ ಯಲು ಪ್ರೇರೇಪಿಸಿದರು. ಆ ಕ್ಷಣದಲ್ಲಿ ಒಪ್ಪಿಕೊಂಡವನಂತೆ ನಾಟಕ ಮಾಡಿ. ಈಗ ನಿನ್ನೆದುರು ಸತ್ಯ ಬಿಚ್ಚಿಡಲು ಓಡಿ ಬಂದೆ. ಯಾಕಂದ್ರೆ, ನಾನು ನಿನ್ನ ತಂದೆಯವರ ಪರಮ ಸ್ನೇಹಿತನಮ್ಮ.

ವನಜ– ವಕೀಲ್ರೆ. ವಕೀಲ್ರೆ ನನಗಿದನ್ನು ನಂಬುವುದಕ್ಕೆ ಆಗ್ತಾಯಿಲ್ಲ.

(ರಂಗ ಬರುವನು)

ರಂಗ– ನಂಬ್ಲೇಬೇಕವ್ವಾ. ನಂಬ್ಲೆ ಬೇಕು. ಇಲ್ಲಿದ್ರೆ ಈ ನನ್ನ ಮಕ್ಳು ನಿಮಗೆ ಮಣ್ಣು, ಮಣ್ಣು ತಿನಿಸ್ತಾರವಾ.

ವನಜ– ರಂಗಣ್ಣ...!

ರಂಗ– ಹೌದವ್ವ. ನಿಮ್ಮ ಕೈಯಾಗಿನ ಆಳುಮಗನ ಬಾಯಿಂದ ಇಷ್ಟು ಮಾತುಗಳು ಬರ್‍ತಾವಲ್ಲ ಅಂತ ದಯ ಮಾಡಿ ನನ್ನ ಮ್ಯಾಲೆ ಬೇಸ್ರ ಮಾಡ್ಕೋ ಬ್ಯಾಡ್ರಿ, ಇಷ್ಟು ದಿನ ನಿಮ್ಮಾವನವರು ಮಾಡ್ತಿದ್ದ ಅನ್ಯಾಯಗಳನ್ನೆಲ್ಲಾ ಮನಸ್ನಲ್ಲೇ ಇಟ್ಕೊಂಡು ಮರುಗ್ತಿದ್ದೆ. ಆದ್ರೀವತ್ತು, ಅನಿವಾರ್ಯವಾಗಿ ಹೇಳ್ಬೇಕಾಗೇತಿ ವನಜವ್ವ. ನೀವು ತಂದೆ ಅಂತ ನಂಬಿರೋ ಭೋಜರಾಜರಾಗ್ಲಿ. ಸಾಧು ಹಸು ಅಂತ ತಿಳಿದಿರೋ ವಿಕ್ರಂರಾಗ್ಲಿ. ನೀವು ಪ್ರೇಮಿಸಿರೋ ಅರವಿಂದ ರಾಗ್ಲಿ ಮನುಷ್ಯ ಕುಲ್ದಾಗ ಹುಟ್ಟಬಾರ್ದಿತ್ತವಾ. ಹುಟ್ಟಿ. ಮನುಷ್ಯ ಜಾತಿಗೇ ಕಳಂಕ ಹಚ್ಚಿ ಬಿಟ್ಟಾರ. ಇವರು ಮಾಡ್ತಿರೋ ಅನ್ಯಾಯ ಒಂದಲ್ಲ ಎರಡಲ್ಲ, ನೂರಾರು, ಸಾವಿರಾರು.

ವಕೀಲ– ಈ ನೀಚರಿಂದ ಎಷ್ಟೋ ಹೆಣ್ಣುಗಳ ಶೀಲ ಮಣ್ಣು ಪಾಲಾ ಗಿವೆ.

ರಂಗ– ಅದೆಷ್ಟೋ ಹೆಣಗಳು ಕೆರೆ, ಭಾವಿಗಳಲ್ಲಿ ತೇಲಾಡಿದ್ದಾವೆ.

ವಕೀಲ– ಇದೇ ನಿಮ್ಮಾವ ಭೋಜರಾಜ. ಟೈಪಿಸ್ಟ್ ಲಿಲ್ಲಿನ ಬಲತ್ಕಾರ ಮಾಡಾಕ್ಹೋಗಿದ್ದ.

ರಂಗ– ಅಷ್ಟೇ ಅಲ್ಲವ್ವಾ, ದೇವರಂತ ಧರ್ಮಯ್ಯನವರ ಕೊಲೆ ಮಾಡಿದ ಚಂಡಾಲರೂ ಇವರೇ ಕಣವ್ವ, ಇವರೆ. (ವನಜ ತಲೆ ಸುತ್ತಿ ಬೀಳುವಳು. ಎಲ್ಲರೂ ಗಾಬರಿಯಿಂದ ಅವಳತ್ತ ಹೋಗುವಾಗ ತೆರೆ)

## ಹದಿನಾಲ್ಕನೆಯ ದೃಶ್ಯ

### ರಸ್ತ

(ಭೋಜರಾಜನಿಗೆ, ವಕೀಲ ಎದುರಾಗುವನು)

ವಕೀಲ– ನಾಶವಾಯ್ತು, ಭೋಜರಾಜರೆ, ಸರ್ವನಾಶವಾಯ್ತು.

ಭೋಜರಾಜ– ಯಾಕ್ರಿ, ಏನಾಯ್ತು?

ವಕೀಲ– ವನಜ, ನಿಮ್ಮನಿಗೆ ಬಂದಿದ್ಲು.

ಭೋಜರಾಜ– ಏನು, ವನಜ ನಿಮ್ಮನಿಗೆ ಬಂದಿದ್ಲ?... ಅಂದ್ರ, ನಿಮ್ಮನ್ನ ನೋಡೇ ಬಿಟ್ಲ?

ವಕೀಲ– ನೋಡೋದೇನು. ಮಾತೂ ಆಡ್ಸಿದ್ಲು.

ಭೋಜರಾಜ– ವಕೀಲ್ರೆ, ವಕೀಲ್ರೆ ನಾ ಹೇಳಿದ್ದೇನು? ನೀವು ಮಾಡಿದ್ದೇನು? ನೀವೀಗಾಗ್ಲೆ ಅಮೇರಿಕಾಕ್ಕೆ ಹೋಗಿದ್ದೀರಿ ಅಂತ ಅವಳಿಗೆ ಹೇಳಿ ಬಿಟ್ಟಿದ್ದೆ. ಈಗ ನೀವಿಲ್ಲಿ ಎಂಥಾ ಅನಾಹುತ ಮಾಡಿ ಬಿಟ್ಟಿದ್ದೀರಿ. ನೀವ್ಯಾಕ ಹೊರಗ ಬರಾಕ್ಹೋಗಿದ್ರಿ?

ವಕೀಲ– ನಾನ್ಯಾಕ ಹೊರಗಡೆ ಬರ್ಲಿ? ಮನಿ ಒಳಗ್ಹ ಕುಂತಿದ್ದೆ. ವನಜ ತನ್ನ ಗೆಳತಿಯೊಬ್ಬಾಕಿನ ಕರ್‍ಕೊಂಡು, ಒಮ್ಮೆಗೆ ಒಳಗ ಬಂದೇ ಬಿಟ್ಲು. ಬಂದವಳ್ಹ ಯಾಕ್ರಿ ವಕೀಲ್ರೆ ಅಮೇರಿಕಾಕ್ಕೆ ಹೋಗಿಲ್ವೆ ಅಂತ ಕೇಳಿದ್ಲು.

ಭೋಜರಾಜ– ನೀವೇನ್ಹೇಳಿದ್ರಿ?

ವಕೀಲ– ಹೊರಟಿದ್ದೆ, ಆದ್ರ ನನ್ನ ಸ್ನೇಹಿತರೊಬ್ಬರು ತೀರಿಕೊಂಡ ಕಾರಣ ತಾತ್ಕಾಲಿಕ ತಡೆ ಹಿಡಿಬೇಕಾಯ್ತು ಅಂದೆ. ಅದಕ್ಕವಳು ಹಾಗಾಗಿದ್ದೇ ಒಳ್ಳೆದಾಯ್ತು ಅನ್ನಬೇಕೆ?

ಭೋಜರಾಜ– ಅಂದ್ರೆ, ಆಸ್ತಿನ ಅರವಿಂದನ ಹೆಸರಿಗೆ ವಿಲ್ ಬರಿಯೋ ವಿಚಾರ ಹೇಳಿದ್ಲೇನು?

ವಕೀಲ– ವಿಲ್ ಬರಿಯೋ ವಿಚಾರವೇನೋ ಹೇಳಿದ್ಲು. ಆದ್ರೆ ಅರವಿಂದನ ಹೆಸರಿಗಲ್ಲ, ತನ್ನ ಗೆಳತಿ ಹೆಸ್ರಿಗೆ.

ಭೋಜರಾಜ– ಏನ್ಹೇಳ್ತಾಯಿದೀರಿ ನೀವು?

ವಕೀಲ– ಇರೋ ವಿಷಯಾನೆ ಹೇಳ್ತೀದೀನಿ. ಅಲ್ಲಮ್ಮಾ ಇವಳ್ಯಾರು? ಆಸ್ತಿನ ಇವಳೆಸ್ಟರಿಗೆ ಬರ್ಯೋದಿಕ್ಕೆ ಕಾರ್ಣೇನು? ಅಂತ ಕೇಳಿದೆ. ಅದಕ್ಕವಳು, ಆ ವಿಷಯ ಏನೂ ಕೇಳ್ಬೇಡಿ. ನಾನು ಮೇಜಾರ್ಟಿಗೆ ಬಂದಿರೋಳು, ನನ್ನಾಸ್ತಿನ ಇಷ್ಟಾ ಬಂದವರಿಗೆ ದಾನ ಮಾಡ್ತೀನಿ ಅಂತ ನನ್ನ ಬಾಯಿ ಮುಚ್ಚಿಸಿಬಿಟ್ಲು. ಹೀಗಾಗಿ, ಬೇರೆ ದಾರಿ ಇಲ್ದೆ ನಾನವಳ ಗೆಳತಿ ಹೆಸರಿಗೆ ವಿಲ್ ಬರ್ದುಬಿಟ್ಟೆ.

ಭೋಜರಾಜ– ಏನಂದ್ರಿ... ವಿಲ್ ಬರ್ದೇ ಬಿಟ್ರ್ಯಾ? ನೀವ್ಹೇಳ್ತೀರೋದು

ವಕೀಲ– ನಮ್ಮಪ್ಪನಾಣೆ ಸತ್ಯ.

ಭೋಜರಾಜ– ಥತ್ ಮೂರ್ಖ ವಕೀಲ. ವಿಲ್ ಬರೆದು ಮುಗಿಸಿ, ಆ ವಿಷಯ ನನಗ ತಿಳಿಸಿ, ನನ್ನ ಹೊಟ್ಟೆಗೆ ಕಿಚ್ಚು ಹಚ್ಚಲು ಬಂದಿದ್ದೀಯಾ? ವಕೀಲ ಇದರಲ್ಲಿ ನಿನ್ನದೇನೋ ಕೈವಾಡವಿದೆ. ಆದರಿಷ್ಟೆ, ನಾ ಪ್ರತ್ಯಕ್ಷ ಪ್ರಮಾಣಿಸಿ ನೋಡಿದ ನಂತರ, ನನ್ನ ಸ್ವಾಧೀನವಾಗಬೇಕಾದ ಆಸ್ತಿಗೆ ಯಾರೇ ಮುತ್ತಿಗೆ ಹಾಕಿರಲಿ, ಅವರ ಪ್ರಾಣ ಹೀರದಿದ್ರೆ ನಮ್ಮಪ್ಪನ ಮಗನೇ ಅಲ್ಲ. ನೆನಪಿಟ್ಕೊ ವಕೀಲ, ನೆನಪಿಟ್ಕೊ (ಹೋಗುವನು)

ವಕೀಲ– ನನಗೇನು ನೆನಪಿಟ್ಕೋ ಅಂತಿಯೋ ಅವಿವೇಕಿ. ನ್ಯಾಯಕ್ಕೆ ದುರಾಗಿ, ಅನ್ಯಾಯ ಹೋರಾಡಿ ಗೆಲ್ಲೋದು ಕಷ್ಟ. ಈ ಮಾತು ನೀ ನೆನಪಿಟ್ಕೊ. (ಹೋಗುವನು)

## ಹದಿನೈದನೆಯ ದೃಶ್ಯ
## ಸುಡುಗಾಡು ಸೀನಿನ ಪರದೆ

(ಮೂರ್ತಿ ಮದುಮಗನ ವೇಷದಲ್ಲಿ ಬರುವನು)

ಮೂರ್ತಿ– ಎಲ್ಲಿಗ್ಬಂತ್ರಿ, ನನ್ನ ಮದಿವಿ ಫಜೀತಿ? ಕೈ ತಪ್ಪಿದ ಹೆಣ್ಣು, ಮತ್ತ ದಕ್ತನ್ನೋ ಸಂತೋಷ ಒಂದು ಕಡಿಗಾದ್ರೆ, ಮದಿವಿ ಮುಹೂರ್ತ ಸುಡುಗಾಡಿನ್ಯಾಗ ಪ್ರಾರಂಭ ಆಗೋ ಹೊತ್ತು ಬಂತಲ್ಲಾ ಅನ್ನೋ ಸಂಕಟ ಮತ್ತೊಂದು ಕಡೆ. ಆಗ್ಲಿ ಸುಡುಗಾಡಿನ್ಯಾಗ್ಲೆ ಆಗ್ಲಿ. ಒಟ್ಟು ಆ ಲಿಲ್ಲಿ ಕೊಳ್ಳಿಗೆ ತಾಳಿ ಕಟ್ಟಿ ಅಕಿ ಸೊಕ್ಕು ಮುರಿತೆನಿ ತೀರ್ತು. ಹೌದು, ಇಕೇನು ಇನ್ನು ಬರ್ಲಿ ಲ್ಲಲ್ಲ? ಕೈ ಕೊಟ್ಲೇನು ಮತ್ತ? ಯಾಕಂದ್ರ ಬಲು ಚರಿಕೆ ಹೆಣ್ಣದು. (ಆ ಕಡೆ ನೋಡಿ) ಯಾರೋ ಯುಜಮಾನ್ರು ಈ ಕಡೆನೆ ಬರ್ತಿದಾರಲ್ಲ? ನನ್ನ ಮದಿ ವ್ಯಾಗೋ ಕಾಲಕ್ಕ ಯಾವ್ದರ ಹೆಣ ತರಾಕ್ಹತ್ತ್ಯಾರೇನಂತೀನಿ? (ಯುಜಮಾನನ ವೇಷದಲ್ಲಿ ಲಿಲ್ಲಿ ಬರುವಳು) ನಮಸ್ಕಾರ್ರಿ ಯುಜಮಾನ್ರೆ.

ಲಿಲ್ಲಿ– ಯಾರದು? (ನೋಡಿ) ಮದುಮಗನ ವೇಷದಾಗ ಬಂದಿದಿ ಯಂದ್ರ, ಆ ಹುಡಿಗ್ಹೇಳಿದ ಹುಡುಗ ನೀನ ಇರಬೇಕು. ನಿನ್ನ ಹೆಸರು ಮೂರ್ತೀನಪಾ?

ಮೂರ್ತಿ– ಹೌದು ಅಂದಂಗ ನೀವ್ಯಾರು? ಸುಡುಗಾಡಿಗೆ ಬಂದು ನನ್ನ ಹೆಸರು ಸೈತ ಹೇಳ್ತಿರಲ್ಲ.

ಲಿಲ್ಲಿ– ಎಂಥಾ ಹುಚ್ಚದಿಯೋ ನೀನು. ನನ್ನ ಕೈಯಾಗಿರೋ ಸಾಮಾನು ನೋಡಿದ್ರ ಗೊತ್ತಾಗುತ್ತ ನಾ ಯಾರು ಅಂತ.

ಮೂರ್ತಿ– ಗೊತ್ತಾತೇಳ್ರಿ. ಶವ ಇನ್ನೂ ದೂರೈತೇನ್ರಿ ?

ಲಿಲ್ಲಿ– ಶವ ? ಯಾವ ಶವ ? ಯಾರ ಶವ ?

ಮೂರ್ತಿ– ಸಧ್ಯ ನೀವ್ಯಾರ ಶವಕ್ಕ ಬಂದಿರಿ ?

ಲಿಲ್ಲಿ– ತಮ್ಮ, ನನ್ನ ಯಾರಂತ ತಿಳದಿ ನೀನು ?

ಮೂರ್ತಿ– ಸಮಾಧಿ ಮ್ಯಾಲ ಕುಂತು, ಮಂತ್ರ ಹೇಳೋ ಸ್ವಾಮ್ಯಾರಲ್ಲ ನೀವು ?

ಲಿಲ್ಲಿ– ತಪ್ಪು ನಿಂದಲ್ಲಪ್ಪಾ, ಆ ಹುಡುಗಿ ಮಾತು ಕೇಳಿ ಇಲ್ಲಿಗೆ ಬಂದೀನಲ್ಲ ನನ್ನ ತಪ್ಪು. ನೋಡಪಾ ನನ್ನ ಹೆಸರು ಗೋವಿಂದ ಶಾಸ್ತ್ರೀ ಅಂತ. ಸಧ್ಯ ನಿನ್ನ ಮದಿವಿ ಮಾಡಾಕ ಬಂದೀನಪ.

ಮೂರ್ತಿ– ಅಂದ್ರ ಲಿಲ್ಲಿ ಕಳಸ್ಯಾಳೇನ್ರಿ ನಿಮ್ಮನ್ನ?

ಲಿಲ್ಲಿ– ಹಂ, ಈಗ ತಿಳದಂಗಾತ ನೋಡು ನಿನಗ. ಆ ಹುಡುಗಿ ನನ್ನ ಹತ್ರ ಬಂದು ಹಿಂಗ ಸುಡುಗಾಡಿನ್ಯಾಗ ಮದಿವಿ ಇಟ್ಕೊಂಡಿವಿ. ದಯಮಾಡಿ ನೀವು ಬಂದು ನಮ್ಮ ಮದಿವಿ ಮಾಡಿ, ಆಶೀರ್ವಾದ ಮಾಡಬೇಕು ಅಂದ್ಲು. ಮದಿವಿ ಜಗಾ ಕೇಳೀ ವಿಚಾರಕ್ಕ ಬಿದ್ದಿದ್ದೆ. ಕೂಸಿಗೆ ಅಕಿನ ಎಲ್ಲಾ ತಿಳಿಸ್ಯೇಳಿ. ಇಲ್ಲಿಗೆ ಕಳಿಸಿಕೊಟ್ಟಾಳೇನಪಾ.

ಮೂರ್ತಿ– ದಯಮಾಡಿ ಕ್ಷಮಾ ಮಾಡ್ರಿ. ನಾ ಬ್ಯಾರೆ ತಿಳಿದಿದ್ದೆ ನಿಮ್ಮನ್ನ. ಈ ಸುಡುಗಾಡಿನ್ಯಾಗ ನಿಂತೀನಲ್ಲ ದಿಕ್ಕ ತಿಳಿದಂಗಾಗೇತಿ ನನಗ. ಆದ್ರ ಶಾಸ್ತ್ರಿಗಳ ಹಿಂದಕ್ಯಾವರ ಸುಡುಗಾಡಿನ್ಯಾಗ ಮದಿವ್ಯಾಗ್ಯಾವೇನ್ರಿ? ಯಾಕಂದ್ರ ನಾನ್ನೂ ಮೊದಲಿನವನಾಗಬಾರ್ದಂತ.

ಲಿಲ್ಲಿ– ರಗಡಾಗ್ಯಾವ ನೀ ಚಿಂತಿ ಬಿಡು. ಇದಕ್ಕಿಂತ ಪವಿತ್ರವಾದ ಜಗ ಮತ್ತೊಂದಿಲ್ಲೇನಪಾ. ಇಲ್ಲಿ ನಿಂತು ನೀ ಹಾಕೋ ತಾಳಿ ಗಂಟು, ಬ್ರಹ್ಮ ಗಂಟಾಗುತ್ತ.

ಮೂರ್ತಿ– ನೀವಿಷ್ಟು ಧೈರ್ಯ ಕೊಟ್ಟವ್ಯಾಲ ಮಾತ್ಯಾಕ ತಡ. ಎಲ್ಲೆದಾಳ ಕರಿರಿ ಲಿಲ್ಲಿನ ಸಟ್ನ ಕಟ್ಟೇ ಬಿಡ್ತೀನಿ ತಾಳಿನ.

ಲಿಲ್ಲಿ– ಸ್ವಲ್ಪ ತಡಿ ತಮ್ಮ ನಾನಕಿನ ಇಲ್ಲೇ ದೇವಸ್ಥಾನದಾಗ ಕುಂದ್ರಿಸಿ ಬಂದೀನಿ. ಸಧ್ಯ ಕರ್ಕೊಂಡ್ಬಂದು ಮದಿವಿನೂ ಮಾಡ್ತೀನಿ. ಆದ್ರ, ನಾನು ಆ ಹುಡುಗಿಗೆ ತಂದಿದ್ದಂಗ. ಹಿಂಗಾಗಿ ನಮ್ಮ ಸಂಪ್ರದಾಯದ ಪ್ರಕಾರ ಮದಿವಿ ಮಾಡಿ ಕೊಡ್ತೀನಿ ಅದಕ್ಕ ನೀನು ಅಡ್ಡಿ ಮಾಡಬಾರದು.

ಮೂರ್ತಿ– ಸುಡುಗಾಡಿನ್ಯಾಗ ನಿಂತೀನಿ, ಸುಡುಗಾಡು ಸಂಪ್ರದಾಯದಾಗ ಮದಿವಿ ಮಾಡಿಕೊಡ್ರಿ. ನಾ ಕಣ್ಣು ಮುಚ್ಕೊಂಡು ತಾಳಿ ಕಟ್ತೀನಿ. ಮದಲಕೀನ

ಲಿಲ್ಲಿ– ಅಷ್ಟ್ರಾಗಾರ ಸಭ್ಯ ಕರ್ಕೊಂಡು ಬರ್ತೀನಿ.

ಮೂರ್ತಿ– ಅಂತೂ ನನ್ನ ಮದಿವಿ ಗಟ್ಯಾದಂಗಾತು. ಅದ್ರೂ ಲಿಲ್ಲಿ ಕೊರಳಿಗೆ ತಾಳಿ ಕಟ್ಟಿ. ಆ ರಂಗ್ಯಾನ ಮುಂದ ಮೀಸಿ ಮುರಿ ಮಾಡಿ ನಿಂತಾಗ ನನಗ ಸಮಾಧಾನ.

(ಲಿಲ್ಲಿ ಹೆಣ್ಣಿನ ವೇಷದಲ್ಲಿರುವ ರಂಗನನ್ನು ಕರೆತರುತ್ತಾ)

ಲಿಲ್ಲಿ– ಬಾ ತಂಗಿ ಬಾ. ಈಗ್ಲೂ ಇಷ್ಟು ನಾಚಕೊಂಡ್ರ ಹೆಂಗ.

ಮೂರ್ತಿ– ಹಾಯ್ ಲಿಲ್ಲಿ...

ಲಿಲ್ಲಿ- ಅಂ...ಆ... ಸಂಪ್ರದಾಯ. ಸಂಪ್ರದಾಯ ತಾಳಿ ಕಟ್ಟೋತನ ಇಷ್ಟ ಮಾತಾಡಿಸಬಾರ್ದು. ನೋಡ್ತಾರ್ದು ತಿಳಿತಿಲ್ಲ?

ಮೂರ್ತಿ– ಹೌದ್ದು. ತಾಳಿ ತರ್ರಿಲ್ಲಿ

ಲಿಲ್ಲಿ– ಕೊಡ್ತೀನಿ ಯಾಕವಸರ ಮಾಡ್ತಿ? (ಹೂವಿನ ಹಾರ ಕೊಡುತ್ತಾ) ಮೊದ್ಲು ಹಾರ ಒಬ್ಬರಿಗೊಬ್ರು ಹಾಕ್ರಿ. (ಇಬ್ರೂ ಹಾರ ಬದಲಾಯಿಸುವರು) ತಾಳಿ ಹಿಡಕ್ಕಾ ತಪ್ಪು (ಕೊಟ್ಟು) ನಾ ಮಂತ್ರ ಅಂತೀನಿ, ನೀನು ಕಣ್ಣು ಮುಚ್ಚಿಕೊಂಡು ತಾಳಿ ಕಟ್ಬೇಕು.

ಮೂರ್ತಿ– ಕಣ್ಣು ಮುಚ್ಚಿಕೊಂಡ?

ಲಿಲ್ಲಿ– ಸಂಪ್ರದಾಯ–ಸಂಪ್ರದಾಯ.

ಮೂರ್ತಿ– ಆತು. ದೌಡು ಮಂತ್ರ ಅನ್ರಿ. ಕಣ್ಣು. ಕಿವಿ ಎಲ್ಲಾ ಮುಚ್ಕೊಂಡೇ ತಾಳೀ ಕಟ್ತೀನಿ.

ಲಿಲ್ಲಿ– ಮಂಗಾರ ಶುರು ಮಾಡ್ಲಾ ?

ಮೂರ್ತಿ– ಇನ್ನೂ ಕೇಳ್ತೀರಲ್ಲ. ತಡ ಅದ್ರ. ನಾನ್ನ ಶುರು ಮಾಡ್ತೀನಿ ಮಂತ್ರ ಅನ್ನಾಕ.

ಲಿಲ್ಲಿ– ಬ್ಯಾಡ ನಾನಂತೀನಿ (ಮಂತ್ರ ಅನ್ನುವಳು, ಮೂರ್ತಿ ತಾಳಿ **ಕಟ್ಟುವನು)** ಅಡ್ಡಿ ಇಲ್ಲ ತಾಳಿ ಚಂದ ಕಟ್ಟಿ. ಸರ್ವೀಸ್ ಬಾಳಾಗಿರ್ಬೇಕು.

ಮೂರ್ತಿ– ಅಂದ್ರ. ಒಂದ್ಸೆದಾರ್ಲೂರು ತಾಳಿ ಕಟ್ಟೇನಂತ ತಿಳಿದೀಯೇನು?

ಲಿಲ್ಲಿ– ಹಂಗಲ್ಲ. ಮದವಿ ಮನಿ ಬಾಳಡ್ಡಾ ಬಿದಿ ಅಂದೆ.

ಮೂರ್ತಿ– ಅತು, ನಮಗ ಆಶೀರ್ವಾದ ಮಾಡಿ ಜಗಾ ಬಿಡ್ರಿ. ಲಿಲ್ಲಿ ಯಜಮಾನರ ಕಾಲಿಗೆ ಬೀಳು. (ಕಾಲಿಗೆ ಬೀಳುವರು)

ಲಿಲ್ಲಿ– ವರ್ಷ ತುಂಬೋದ್ರಾಗ ಅವಳಿ-ಜವಳಿ ಪ್ರಾಣಿಗಳಿಗೆ ಜೀವ ಕೊಡ್ರಿ.

ಮೂರ್ತಿ– ಪ್ರಾಣಿಗಳಿಗಾ...?

ಲಿಲ್ಲಿ– ಅದ್ರ ನಮ್ಮ ಸಂಪ್ರದಾಯದಾಗ....

ಮೂರ್ತಿ– ಸ್ಟಾಪ್. ನಿಮ್ಮ ಸಂಪ್ರದಾಯದ ಅವಧಿ ಮುಗಿತು. ಇನ್ನು ನನ್ನ ಸಂಪ್ರದಾಯ ಪ್ರಾರಂಭಾಗುತ್ತ. ನೀವು ಮನಿಗೆ ನಡಿರಿ. ಆಮ್ಯಾಲ ಬಂದು ದಕ್ಷಿಣೆ ಕೊಡ್ತೀನಿ.

ಲಿಲ್ಲಿ– ಹಂಗ ಮಾಡು ಯಾರು ಬ್ಯಾಡಂತಾರ. (ರಂಗನಿಗೆ) ತಂಗಿ ನಾ ನಡಿಲೇನವಾ? (ರಂಗ ತಲೆಯಾಡಿಸುವನು) ಹುಡಿಗಿ ಬಾಳ ನಾಚುತ್ತ. ನಾ ನಡಿತೇನಿ. ನಿನ್ನ ರಸ ಸನ್ನಿವೇಶ ಪ್ರಾರಂಭ ಮಾಡಿಕೊ. (ಹೋಗುವಳು)

ಮೂರ್ತಿ– ಲಿಲ್ಲಿ ಕೊನಿಗೂ ನೀ ನನ್ನ ಹೆಂಡ್ತಿ ಆದೆಲ್ಲ. ನಾನೇ ಪುಣ್ಯವಂತ. ಸಧ್ಯ ಈ ಮುಸುಕು ತೆಗೆದು ನಿನ್ನ ಮುದ್ದು ಮುಖ ತೋರ್ಸು. ಸಟ್ಟು ಮುತ್ತು ಕೊಡ್ತೀನಿ. ಅದ್ನ ಮುತ್ತಿನಾಗ ಹನಿಮೂನಿಗೆ ಹೋಗೋಣಂತ.

ರಂಗ– (ಮುಸುಕು ತೆಗೆದು) ನೋಡ್ಹಂಗಾರ ನನ್ನ ಮುಸುಡಿನ. ಕೊಡು ನಿನ್ನ ಮುತ್ತನ್ನ.

ಮೂರ್ತಿ– ರಂಗ್ಯಾ...ನೀನ್ನು...? (ಓಡಿಹೋಗುವಾಗ ಹಿಡಿದು)

ರಂಗ– ಎಲ್ಲಿಗ್ಹೋಗುವೆ ಪ್ರಾಣಕಾಂತ ?

ಮೂರ್ತಿ– ಕೈ ಬಿಡಲೆ ರಂಗ, ನಿನ್ನ ಕಣ್ಣಿಗೆ ಕಾಣದಂಗ್ಹೊಕ್ಕೀನಿ.

ರಂಗ– ಇದೇನು ಪತಿದೇವಾ ? ಈಗ ತಾನೆ ಭೂತ. ಪ್ರೇತಗಳ ಸಾಕ್ಷಿಯಾಗಿ ತಾಳಿಕಟ್ಟಿ. ಈಗೊಮ್ಮಿಗೆ ಹೋಗ್ತೀನಿ ಅಂತಿರಲ್ಲ ? ಯಾಕೆ ನನ್ನ ರೂಪ ನಿಮಗೆ ಹಿಡಿಸಲಿಲ್ಲವೆ ? ನನ್ನ ಜೊತೆಗೆ ಹನಿಮೂನಿಗೆ ಬರುವುದಿಲ್ಲವೆ ?

ಮೂರ್ತಿ– (ಬಾಯಿ ಬಡಿದುಕೊಂಡು) ನಿನ್ನೊಡ ಹನಿಮೂನ? ಬ್ಯಾಡಲೆಯಪ್ಪಾ. ನನ್ನ ಕೈ ಬಿಟ್ಟುಬಿಡು.

ರಂಗ– ಹಾಗಂದ್ರೆ ಹೇಗೆ ಪ್ರಿಯ? ನಾವಿಬ್ರೂ ಹನಿಮೂನಿಗೆ ಹೋಗಬೇಕು, ಗಂಡು ಮಗನ್ನ ಹಡೆದು, ನಿಮ್ಮ ವಂಶಜ್ಯೋತಿ ಬೆಳಗಿಸಬೇಕು.

ಮೂರ್ತಿ– ಶ್ರೀಹರಿ. ಪಾಂಡುರಂಗಾ. ಕೇಳಲಾರೆ... ಕೇಳಲಾರೆ.

ರಂಗ– ಪತಿದೇವ, ವಿರಹ ವೇದನೆ ನಾ ತಾಳಲಾರೆ... ತಾಳಲಾರೆ.

ಮೂರ್ತಿ– ನಾ ನಿನ್ನ ಮುಖ ತೋರಿಸಲಾರೆ... ತೋರಿಸಲಾರೆ. (ಕೊಸರಿಕೊಂಡು ಓಡುವನು)

ರಂಗ– ಪತಿದೇವಾ... ಪ್ರಾಣಕಾಂತಾ... ನಾನೂ ಬರುತ್ತೇನೆ ತಡಿ ಪ್ರಿಯ. (ಹಿಂಬಾಲಿಸುವನು)

## ಹದಿನಾರನೆಯ ದೃಶ್ಯ

### ಮಿಲ್ಲಿನ ಆವರಣ

(ವಿಶಾಲ, ವನಜಾ, ವಕೀಲ ಇರುವರು)

ವಕೀಲ– ನೋಡಮ್ಮಾ ವನಜ ಬಹಳ ಜಾಣ್ಮೆಯಿಂದ ಆ ಮೂವರ ಅಂತರಾತ್ಮದ ಗುಟ್ಟು ತಿಳಿಯಲು ಪ್ರಯತ್ನ ಪಡು. ದುಡುಕಬೇಡ. ಅಷ್ಟರಲ್ಲಿ ನಾನು ಪೋಲೀಸರನ್ನು ಕರೆದುಕೊಂಡು ಬರ್ತೀನಿ. ನೀನು ಅಷ್ಟೆ ವಿಶಾಲಮ್ಮ. ಅವರಿಂದ ವಂಚಿತಳಾಗಿದ್ದೇನೆಂದು, ಆವೇಶದಲ್ಲಿ ಅನಾಹುತ ಮಾಡಬೇಡ. ಅವರನ್ನು ಕಾನೂನಿಗೆ ಒಪ್ಪಿಸೋಣ. ಶಿಕ್ಷೆ ನಂತರ ತೀರ್ಮಾನವಾಗಲಿ.

ವಿಶಾಲ– ವಕೀಲ್ರೆ, ಸಧ್ಯ ನಾನು ಮನುಷ್ಯಳಾಗಿ ಉಳಿದಿಲ್ಲ. ಆದ್ರೂ ಕರ್ತವ್ಯ ಮರೆಯುವುದಿಲ್ಲ. ನೀವು ಹೋಗಿ ಬನ್ನಿ (ಒಳಗ್ಹೋಗುವಳು)

ವಕೀಲ– ವನಜಮ್ಮ. ಇವಳ ಮಾತು ಕೇಳಿದ್ರೆ, ನನಗೇಕೋ ಭಯವಾಗ್ತಿದೆ. ನೀ ಸ್ವಲ್ಪ ಹುಷಾರಿಯಿಂದಿರಮ್ಮ. ನಾ ತಕ್ಷಣ ಬಂದ್ಬಿಡ್ತೀನಿ.

ವನಜ– ನನ್ನ ಮನಸ್ಸು ಸ್ಥಿಮಿತದಲ್ಲಿಲ್ಲ ವಕೀಲ್ರೆ. ಅದೇನು ಮಾಡ್ತಿರೊ ನೀವೇ ಮಾಡ್ರಿ.

ವಕೀಲ– ನೀನೇನೂ ವಿಚಾರ ಮಾಡಬೇಡಮ್ಮ. ಆ ಮೂರ್ತಿ ಹಿಂಭಾಗದಲ್ಲಿ ಟೇಪ್‌ರಿಕಾರ್ಡರ್ ಆನ್ ಮಾಡಿಟ್ಟಿದ್ದೇನೆ. ಯಾಕಂದ್ರೆ ಕೋರ್ಟಿನಲ್ಲಿ ಇವರ ವಿರುದ್ಧ ಸಾಕ್ಷಿಗೆ ಅದೇ ಆಧಾರವಾಗುತ್ತದೆ. ಧೈರ್ಯವಾಗಿರಮ್ಮ ಬರ್ತೀನಿ. (ಹೋಗುವನು)

ಭೋಜರಾಜ– ವನಜಾ...

ವನಜ– ಬರಬೇಕು ಮಾವನವರು. ಯಾಕೆ. ಬಹಳ ಖಾರವಾಗಿದ್ದೀರಲ್ಲ?

ಭೋಜರಾಜ– ಇಲ್ಲ. ಆಸ್ತಿಯನ್ನು ಕಂಡವರ ಹೆಸರಿಗೆ ಬರೆದಿರುವ ನಿನ್ನ ಮುಂದೆ ಶಿರಬಾಗಿ ನಿಲ್ತೀನಿ.

ವನಜ– ನನ್ನ ಆಸ್ತಿಯನ್ನು ಕಂಡವರ ಹೆಸರಿಗೆ ಬರೆದಿಲ್ಲ ಮಾವ. ನನ್ನ ಜೀವದ ಗೆಳತಿಗೆ ತ್ಯಾಗ ಮಾಡಿದ್ದೇನೆ.

ವಿಕ್ರಂ– ಇದು ತ್ಯಾಗವಲ್ಲ. ನಿನ್ನ ಹುಚ್ಚುತನ ಅಂತಾ. ನಿನ್ನ ಜೀವದ ಗೆಳತಿಯಾಗಿದ್ದರೆ, ಅವಳ ಮೇಲೆ ಅಷ್ಟೊಂದು ಪ್ರೀತಿಯಿದ್ದರೆ. ಅವಳನ್ನು ಮನೆಯಲ್ಲೇ ಇಟ್ಟುಕೊಂಡು ಸಾಯೋವರೆಗೂ ಹೊಟ್ಟೆ. ಬಟ್ಟೆಗೆ ಕೊರತೆಯಾಗದಂತೆ ನೋಡಿಕೊಳ್ಳಬೇಕಾಗಿತ್ತು. ಅದೆಲ್ಲ ಬಿಟ್ಟು ಇಡೀ ಆಸ್ತಿಯನ್ನು ತ್ಯಾಗದ ರೂಪದಲ್ಲಿ ಅವಳಿಗೊಪ್ಪಿಸಿರುವುದು. ನಿನ್ನ ದುಡುಕು ಬುದ್ಧಿಯ ಅತಿರೇಕತನ.

ವನಜ– ಆ ರೀತಿ ಭಾವಿಸಿದರೆ. ನನ್ನ ದುರ್ಧೈವ. ಅದೃಷ್ಟ. ನನ್ನ ಗೆಳತಿಯ ಸಮಸ್ಯೆಯೊಂದನ್ನು ಬಗೆ ಹರಿಸುವುದಕ್ಕಾಗಿ ನಾನಿಂತ ತ್ಯಾಗ ಮಾಡ್ಲೇಬೇಕಾಯ್ತು.

ಭೋಜರಾಜ– ಏನದವಳ ಅಂಥಾ ಸಮಸ್ಯೆ?

ವನಜ– ಯಾರೋ ನೀಚನೊಬ್ಬ ನನ್ನ ಗೆಳತಿಯನ್ನು ಪ್ರೀತಿಸಿ ಮದುವೆಯಾಗುವೆನೆಂದು ನಂಬಿಸಿ, ಮೈಕದ್ದು, ಈಗ ಕೈಕೊಟ್ಟಿದ್ದಾನೆ. ನನ್ನ ಗೆಳತಿ ಅವನನ್ನು ಮದುವೆಯಾಗೆಂದು ಒತ್ತಾಯಿಸಿದಾಗ. ನಿನ್ನನ್ನು ಪ್ರೀತಿಸಿದ್ದು, ಮೋಹಿಸಿದ್ದು ಮೋಜಿಗೋ ಹೊರತು. ಮದುವೆಯಾಗುವುದಕ್ಕಲ್ಲ ಅಂದನಂತೆ ಆ ವಂಚಕ. ನಿನ್ನನ್ನು ಮದುವೆಯಾದರೆ ನನಗೆ ಸಿಗುವ ಭಾಗ್ಯ

ಹೇಳು? ಬಯಸಿದವರಿಗೆ ಬಂಗಾರ ತುಂಬಿಕೊಂಡು ಹೊಸ್ತಿಲು ದಾಟಿ ಬರುವ ಹೆಣ್ಣುಗಳು ಸಾಕಷ್ಟಿದ್ದಾರೆ ಎಂದು ಬಡಾಯಿ ಕೊಚ್ಚಿಕೊಂಡಿದ್ದಾನಂತೆ. ಅಂದಾಗ, ಅವನ ಅಂತಸ್ತು ಯಾವ ಮಟ್ಟದಲ್ಲಿರಬೇಕು ನೀವೇ ಹೇಳಿ ಮಾವ.

ಭೋಜರಾಜ– ಅವನನ್ನು ನೋಡಿದ್ದರಲ್ಲವೆ ಹೇಳುವುದು.

ವನಜ– ಅಂತವರು, ನಮ್ಮಂತವರಿಗೆ ಕಾಣುವುದೂ ಕಷ್ಟ ಮಾವ. ಯಾಕಂದ್ರೆ, ಅವರ ಅಂತಸ್ತು ಕುಬೇರನ ಪ್ರತಿರೂಪದಲ್ಲಿದೆಯೋ. ತಿರಿದು ತಿನ್ನುವ ತಿರುಕನಿಗಿಂತಲೂ ಕೀಳಾಗಿದೆಯೋ ಅನ್ನುವುದು ನಮಗೆ ತಕ್ಷಣ ಗೊತ್ತಾಗಿ ಬಿಡುತ್ತದೆ. ಆದ್ರೂ ಆ ನೀಚ ಯಾವ ಕೊರತೆಯನ್ನು ಕಂಡು ನನ್ನ ಗೆಳತಿಯನ್ನು ಕೈ ಬಿಟ್ಟಿದ್ದಾನೋ, ಆ ಕೊರತೆ ನೀಗಿದವಳೆಂದು ಅರಿತು, ಮತ್ತವಳ ಸ್ಥಿ[illegible] ಎಂದು ನಾನೀ ಕೆಲಸ ಮಾಡಿದ್ದೇನೆ. ಇದನ್ನು ಒಪ್ಪುತ್ತೀರೋ, ತಪ್ಪು ಅಂತೀರೋ?

ಭೋಜರಾಜ– ತಪ್ಪೋ, ಒಪ್ಪೋ ಒಟ್ಟು ನೀನು ತಿಪ್ಪೆಯ ಪಾಲಾಗುವುದಂತು ನಿಜ. ನಿನ್ನ ಗೆಳತಿ ಕೊರಳಿಗೆ ತಾಳಿ ಕಟ್ಟುವವನ ಅಧೀನಕ್ಕೆ ಅಮಾತಿಯಾಗುವ ನಿನ್ನಾಸ್ತಿ, ಮತ್ತೆ ಬಯಸಿದರೆ ಸಿಗುವುದೆಂದು ಭಾವಿಸಿರುವಿಯೇನು?

ವನಜ– ಸಿಗಲಿ, ಬಿಡಲಿ. ನನಗಂತೂ ನೋವಿಲ್ಲ. ಜೀವದ ಗೆಳತಿಯ ಬಾಳು ಬಂಗಾರವಾಯ್ತೆನ್ನುವ ಸಂತೋಷವಾದ್ರು ಆಗುತ್ತೆ.

ಭೋಜರಾಜ– ನಿನ್ನ ಸಂತೋಷಕ್ಕೆ ಬೆಂಕಿ ಬಿತ್ತು. ಮುಂದಿನ ನಮ್ಮ ಬದುಕು. ನಿನ್ನ ಬದುಕಿನ ಬಗ್ಗೆ ವಿಚಾರ ಮಾಡಿರುವಿಯೇನು?

ವನಜ– ನನ್ನ ಬದುಕಿನ ಬಗ್ಗೆ ನಾ ವಿಚಾರ ಮಾಡಿದ್ದೇನೆ. ಆದ್ರೆ,ನಿಮ್ಮ ಬದುಕಿನ ಬಗ್ಗೆ ನಾನ್ಯಾಕ ವಿಚಾರ ಮಾಡ್ಲಿ? ನೀವು ನನ್ನಾಸ್ತಿಯನ್ನೇ ನಂಬಿ ಬದುಕುತ್ತಿಲ್ಲವಲ್ಲ? ತಂದೆ ತಾಯಿ ಕಳೆದುಕೊಂಡವಳೆಂದು ತಿಳಿದು, ನನ್ನನ್ನು, ನನ್ನಾಸ್ತಿಯನ್ನು ಸಂರಕ್ಷಿಸುವ ಹೊಣೆ ಹೊತ್ತಿದ್ದೀರಷ್ಟೆ. ಎಷ್ಟಾದ್ರೂ ನೀವು ನಿಸ್ವಾರ್ಥ ಜೀವಿಗಳು. ಮೇಲಾಗಿ ಮೀಸೆ ಹೊತ್ತ ಗಂಡಸರು. ನಿಮ್ಮ ಬದುಕನ್ನು, ನಿಮ್ಮ ಸ್ವಂತಿಕೆಯಲ್ಲಿ ರೂಪಿಸಿಕೊಳ್ಳುವ ಸ್ವಾಭಿಮಾನಿಗಳೇ ಹೊರತು, ಬಾಂಧವ್ಯ, ಸಂಬಂಧಗಳ ನೆಪದಲ್ಲಿ, ಕಂಡವರ ಆಸ್ತಿಯನ್ನು ಆಶಿಸುವ ಅಜ್ಞಾನಿಗಳಲ್ಲ ಅಂದಾಗ, ನಿಮ್ಮ ಬದುಕಿನ ಬಗ್ಗೆ ನಾನ್ಯಾಕ ವಿಚಾರ ಮಾಡ್ಲಿ? ಇನ್ನು

ನನ್ನ ಬದುಕಿನ ಬಗ್ಗೆ ನಾನಂತೂ ವಿಚಾರ ಮಾಡುವುದಿಲ್ಲ. ಯಾಕಂದ್ರೆ ಅರವಿಂದರು ನನ್ನನ್ನು ಮದುವೆಯಾಗಿ, ನನ್ನ ಬದುಕಿಗೆ ಮಾರ್ಗದರ್ಶಕರಾಗ್ತಾರೆ. ಅಲ್ಲವೆ ಅರವಿಂದ?

ಅರವಿಂದ– ಈ ನಿನ್ನ ಹುಚ್ಚುತನದ ಮಾತಿಗೆ ನಗಬೇಕೋ. ಅಳಬೇಕೋ ಗೊತ್ತಾಗುತ್ತಿಲ್ಲ. ಜಿಪುಣನ ಹತ್ತಿರ ದಾನ ಕೇಳಿದಂತಾಯ್ತು ನಿನ್ನ ಪ್ರಶ್ನೆ.

ವನಜ– ಆದರೆ, ನೀವೇನು ಜಿಪುಣರಲ್ಲವಲ್ಲ?

ಅರವಿಂದ– ಜಿಪುಣನಲ್ಲ, ಅವನಿಗಿಂತ ನಿಪುಣ, ಜಿಪುಣ. ಪೈಸಕ್ಕೆ ಪೈಸಾ ಸೇರಿಸಿ ಗಂಟು ಮಾಡ್ತಾನೆ, ನಿಪುಣ. ಕೂಡಿಟ್ಟ ಗಂಟನ್ನ ಲಪಟಾಯಿಸ್ತಾನೆ. ಅದರಂತೆ ನಾನಾದ್ರೂ ನಿನ್ನನ್ನು ಪ್ರೀತಿಸಿದ್ದು ಅಂದ ಚಂದ ನೋಡಿಯಲ್ಲ, ನಿನಗೆ ತಾಳಿ ಕಟ್ಟಿದರೆ ಸಿಗಬಹುದಾದ ಧನಕನಕಗಳ ಆಸೆಯಿಂದ.

ವನಜ– ಹಾಗಾದ್ರೆ ನಿಮ್ಮ ಪ್ರೀತಿ. ಪ್ರೇಮ, ಆದರ್ಶ ಎಲ್ಲಾ ಸುಳ್ಳೆ?

ಅರವಿಂದ– ಸುಳ್ಳಲ್ಲ ನಿಜವೆ! ಆದರೆ, ಮರಣ ಪರ್ಯಂತರ ಅಲ್ಲ, ಕಾರ್ಯ ಸಾಧಿಸುವತನಕ ಇದುವರೆಗೂ ನಿನ್ನಾಸ್ತಿಯನ್ನುವ ಸೂಜಿಗಲ್ಲು. ನನ್ನ ಮೆದುಳೆನ್ನುವ ಕಬ್ಬಿಣವನ್ನು ತನ್ನೆಡೆಗೆ ಸೆಳೆದುಕೊಂಡು ವಿಚಾರ ದೂರ ಹೋಗದಂತೆ ತಡೆ ಹಿಡಿದಿತ್ತು. ಯಾವಾಗ ನಿನ್ನಾಸ್ತಿ ಮತ್ತೊಬ್ಬರ ಸೊತ್ತಾಯಿತೋ ಆವಾಗಲೇ ಸೂಜಿಗಲ್ಲು, ಸಾಮಾನ್ಯ ಕಲ್ಲಾಗಿ ತನ್ನ ಆಕರ್ಷಣ ಶಕ್ತಿಯನ್ನ ಕಳೆದುಕೊಂಡು ವಿಚಾರ ಕವಲೊಡೆಯಲು ನನ್ನ ಮೆದುಳಿಗೆ ಪರ್ಮಿಷನ್ ಕೊಟ್ಟಂತಾಯಿತು. ಸಧ್ಯ ನನ್ನ ಮೆದುಳನ್ನು ನಿಯಂತ್ರಿಸುವ ಕೇಂದ್ರಬಿಂದು ಎಲ್ಲಿದೆಯೋ ನನಗೂ ತಿಳಿದಿಲ್ಲ.

ವನಜ– ಅರ್ಥವಾಯ್ತು ಡಾಕ್ಟ್ರೆ, ನಿಮ್ಮ ಒಳಗುಟ್ಟಿಗ ಮರ್ಮ ಅದರಂತೆ ನನ್ನಂತರಾತ್ಮದ ಗುಟ್ಟೊಂದು ನಿಮಗೂ ಅರ್ಥವಾಗಬೇಕಲ್ಲ?

ಅರವಿಂದ– ಏನದು ನಿನ್ನ ಗುಟ್ಟು?

ವನಜ– ಅಂ... ಆ..., ಹೇಳ್ತೀನಿ. ಅದಕ್ಕಿಂತ ಮೊದ್ಲು, ನಿಮ್ಮ ನಿಜ

ಗುಣಗಳ ಪರಿಚಯವನ್ನು ನೀವಾಗೇ ನನಗೆ ಮಾಡಿ ಕೊಟ್ಟಿದ್ದಕ್ಕೆ ನನ್ನ ಧನ್ಯವಾದಗಳು. ಮಿ॥ ಭೋಜರಾಜ...

ಭೋಜರಾಜ– ವನಜ ಏನಿದು?

ವನಜ– ಯಾವುದು?

ಭೋಜರಾಜ– ನೀನು ನನ್ನನ್ನು ಭೋಜರಾಜ ಎಂದು ಕರೆಯುತ್ತಿರುವುದು.

ವನಜ– ನೀನು ಭೋಜರಾಜನಲ್ಲದೆ ಮತ್ತೇನು ತ್ಯಾಗರಾಜನೆ? ಎಲ್ಲಿಯವರೆಗೆ ನಿನ್ನ ಒಳಮುಖದ ಪರಿಚಯವಿರಲಿಲ್ಲವೋ, ಅಲ್ಲಿಯವರೆಗೂ ಮಾವನಾದರೂ ತಂದೆಯ ಸ್ಥಾನದಲ್ಲಿದ್ದೆ. ಈಗ ನಿನ್ನ ವ್ಯಾಘ್ರಮುಖ ಕಂಡ ನಂತರ ತಂದೆಯಾದವರೂ ನನ್ನ ದೃಷ್ಟಿಯಲ್ಲಿ ಹಂದಿಯೇ ಹೋಗತು. ಮಹಾತ್ಮ ಗಾಂಧಿಯಾಗಲಾರೆ. ನೀವು ಮನುಷ್ಯರೂಪಕ್ಕೆ ಹೊರತಾದ ಪಶುಗಳು. ಹೆಂಡತಿ ಯಾರು? ತಾಯಿ ಯಾರು? ಮಗಳಿಗೂ ಇವರಿಗೂ ಇರುವ ವ್ಯತ್ಯಾಸವೇನು? ಯಾರೊಡನೆ ಯಾವ ರೀತಿ ವರ್ತಿಸಬೇಕೆನ್ನುವ ಪರಿಜ್ಞಾನವಿಲ್ಲದೆ, ಭಾರತ ಮಾತೆಯ ಪ್ರತಿರೂಪವಾದ ಹೆಣ್ಣಿನ ಶೀಲವನ್ನು ಹಂಚಿಕೊಂಡವರೇ.... ನೀವು ಸಾಮಾನ್ಯ ಕಾಮುಕರಲ್ಲ. ತಾಯಿಯ ಪಕ್ಕದಲ್ಲಿ ಮಲಗಿ ನಾಯಿಯಂತೆ ವರ್ತಿಸುವ ಶೌಯ್ಗ್ಗಂಡರು ನೀವು.

ವಿಕ್ರಂ– ಏನಂದೇ......?

ಭೋಜರಾಜ– ವಿಕ್ರಂ, ಯಾಕಪ್ಪಾ ಸುಮ್ಮನೆ ತ್ರಾಸು ತಗೊಂತೀಯ? ಪಾಪ, ಬಹಳ ದಿನದ ನಂತರ ನಮ್ಮ ದೊಡ್ಡಗುಣ ಅವಳಿಗೆ ಅರ್ಥವಾಗಿದೆಯೆಂದಾಗ. ಆನಂದ ಹೆಚ್ಚಾಗಿ ಆತುರದಲ್ಲಿ ಸ್ವಲ್ಪ ಅಂಕೆ ತಪ್ಪಿ ಮಾತಾಡ್ತಿದ್ದಾಳೆ ಅಷ್ಟೆ. ಇವನ್ನೆಲ್ಲಾ ತಿಳಿದವರಾದ ನಾವು ಸೀರಿಯಸ್ಸಾಗಿ ತಗೋಬಾರ್ದು. ನಮಗವಳು ತಂದೆ ಅಂದ್ರೇನು? ಹಂದಿ ಅಂದ್ರೇನು? ನಾವಂತೂ ಈ ಸಮಾಜದಲ್ಲಿ ಜೂನಿಯರ್ ಗಾಂಧಿಗಳಾಗೇ ಇರ್ತೀವಿ. ಅಂದ ಹಾಗೆ, ವನಜಾದೇವಿ..., ಈ ಆಸ್ತಿಯ ಅಧಿಕಾರಿ, ಆ ನಿನ್ನ ಗೆಳತಿ ಎಲ್ಲಿದ್ದಾಳೆ ಹೇಳ್ತೀಯೋ ನಮ್ಮಾ?

(ವಿಶಾಲ ಒಳಗಿನಿಂದ ಬರುವಳು)

ವಿಶಾಲ– ನಾನಿಲ್ಲಿ ಇದ್ದೇನೆ ಭೋಜರಾಜ.

ಭೋಜರಾಜ– ಯಾರು, ವಿಶಾಲ...?

ವನಜ– ಹೌದು ವಿಶಾಲ. ನನ್ನಾಸ್ತಿಯನ್ನು ಇವಳಿಗೇ ತ್ಯಾಗ ಮಾಡಿರುವುದು ಯಾಕೆಗೊತ್ತೇನು? ಹಣ್ಣಿನಂತೆ, ಇವಳ ಶೀಲ ಹಂಚಿ ತಿಂದಿರುವ, ನಿಮ್ಮನ್ನು ಹುರುಪುಗೊಳಿಸುವುದಕ್ಕಾಗಿ. ಯಾಕಂದ್ರೆ. ಆಸ್ತಿ ದಕ್ಕುವುದೆಂದರೆ, ಒಂದು ಹೆಣ್ಣು ಕತ್ತೆಗೂ ತಾಳಿ ಕಟ್ಟಲು ಸಿದ್ಧರಿರುವ ದೊಡ್ಡಗುಣದವರಲ್ಲವೆ ನೀವು?

ಭೋಜರಾಜ– ವೆರಿಗುಡ್ ಚನ್ನಾಗರ್ಥ ಮಾಡಿಕೊಂಡಿರುವಿ ನಮ್ಮ ಗುಣಗಳನ್ನು. ಈ ಮೊದಲು ಆಸ್ತಿಯಿಲ್ಲದ ಇವಳನ್ನು ಕೇವಲ ನಮ್ಮ ಭೋಗದ ವಸ್ತುವಾಗಿ ಬಳಸಿಕೊಂಡೆವು. ವೇಶಿಯೆಂದು ಅಪಹಾಸ್ಯ ಮಾಡಿದವು ಆದರೆ ಸಧ್ಯ ಆಸ್ತಿಯ ಒಡತಿಯಾಗಿರುವ ಇವಳೀಗ ನಮಗೆ ಮಹಾ ಪತಿವ್ರತೆಯಾಗಿ ಕಾಣುತ್ತಿದ್ದಾಳೆ.

ವಿಕ್ರಂ– ಸಧ್ಯ ಅವಳೊಪ್ಪಿದ್ರೆ ಸಾಕು. ಭಾರತದ ಯಾವ ಹೆಣ್ಣಿಗೂ ದೊರೆಯದ ಭಾಗ್ಯವೆನ್ನುವಂತೆ ಮೂರು ತಾಳಿಗಳು ಅವಳ ಕೊರಳಿಗೇರಲು ಸಿದ್ಧ ಕಾರಣ ತಾಳಿ ಕಟ್ಟಿಸಿಕೊಳ್ಳುವವಳ ವಿಚಾರವೇನಿದೆ ಕೇಳು, ನಾವು ಕಟ್ಟುವ ಮೂರು ತಾಳಿಗಳಿಗಷ್ಟೇ ಕೊರಳು ನೀಡುತ್ತಾಳೊ ಅಥವಾ...

ಅರವಿಂದ– ಹೊಸ ಇತಿಹಾಸ ಸೃಷ್ಟಿಸುವುದಕ್ಕಾಗಿ, ಒಬ್ಬರಿಂದ ಎರಡರಂತೆ ಆರು ತಾಳಿಗಳನ್ನು ಕಟ್ಟಿಸಿಕೊಳ್ಳಲು ಬಯಸುತ್ತಾಳೋ?

ವನಜ– ಛೀ... (ವನಜ ಹೋಗುವಳು)

ವಿಶಾಲ– ಭಲೇ ಗಂಡಸರೇ ಭಲೇ ನಿಮ್ಮನ್ನು ಹೊತ್ತು ನಿಂತಿರುವ ಭೂದೇವಿ ಕೂಡ ಹೆಮ್ಮೆ ಪಡಬೇಕು. ನಿಮ್ಮ ದಯಾಳು ಮಾತು ಕೇಳಿ. ಒಂದೇ ತಾಳಿಯ ಬಾಗ್ಯಕಾಗಿ ಹೆಣಗಿ ಹೆಣವಾಗುತ್ತಿರುವ ಹೆಣ್ಣುಗಳ ಸಾಲಿನಲಿ

ಆರು ತಾಳಿಗಳ ಭಾಗ್ಯ ಪಡೆದು ಬಂದಿರುವ ಪುಣ್ಯವಂತೆ ನಾನೆಂದರೆ ತಪ್ಪಾಗ ಲಾರದು. ಆದರೆ...

ವಿಕ್ರಂ– ಆದರೆ...?

ವಿಶಾಲ– ಆರು ತಾಳಿಗಳನ್ನು ಕಟ್ಟಲು ನೀವು ಸಿದ್ಧರಿದ್ದರೂ, ಕಟ್ಟಿಸಿ ಕೊಳ್ಳಲು, ಹಿಂದೂ ಸಂಸ್ಕೃತಿ ಆದರಿಸುವ ನನ್ನ ಮನಸೊಪ್ಪುತ್ತಿಲ್ಲ. ಕಾರಣ...

ಅರವಿಂದ– ಕಾರಣ...?

ವಿಶಾಲ– ನನ್ನ ಮೈ ಕದ್ದಿರುವ ಮೂವರಲ್ಲಿ ಯಾರಾದರೊಬ್ಬರು ನನಗೆ ಪತಿಯಾಗಬಹುದು. ಯಾರು ನನ್ನ ಕೊರಳಿಗೆ ತಾಳಿ ಕಟ್ಟುವರೋ ಅವರೇ ನನ್ನಾಸ್ತಿಗೆ ಒಡೆಯರಾಗುತ್ತಾರೆ. ಇದನ್ನು ಗಮನದಲ್ಲಿಟ್ಟುಕೊಂಡು. ವಿಚಾರಿಸಿ. ಯಾರು ನನ್ನ ಕೊರಳಿಗೆ ತಾಳಿ ಕಟ್ಟುವಿರೋ ಹೇಳಿ.

ಅರವಿಂದ– ಯಾರೇಕೆ? ನಾನು ನಿನ್ನ ಕೊರಳಿಗೆ ತಾಳಿ ಕಟ್ಟುತ್ತೇನೆ.

ವಿಕ್ರಂ– ಅದೆಂದಿಗೂ ಸಾಧ್ಯವಿಲ್ಲ. ಇವಳನ್ನು ಪ್ರೀತಿಸಿ, ಮದುವೆಯಾ ಗುತ್ತೇನೆಂದು ಮಾತು ಕೊಟ್ಟ ಮೊದಲಿಗ ನಾನು. ಅಂದಾಗ, ಇವಳನು ಮದುವೆಯಾಗುವ ಹಕ್ಕು ನನಗಲ್ಲದೆ ಮತ್ತಾರಿಗೂ ಇಲ್ಲ.

ಅರವಿಂದ– ಹಕ್ಕು? ಯಾವ್ದೋ ನಿನ್ನ ಹಕ್ಕು? ನೀನಿವಳನ್ನು ಪ್ರೀತಿಸಿರ ಬಹುದು, ಮದುವೆಯಾಗುತ್ತೇನೆಂದು ಮಾತೂ ಕೊಟ್ಟಿರಬಹುದು. ಅದ್ರದು, ಮುಗಿದ ಕಥೆ, ಕಾಣದ ಕೃತ್ಯ. ನಾನಿವಳನ್ನು ಭೋಗಿಸಿರುವುದನ್ನು ನೀವೇ ಸಿದ್ಧ ಮಾಡಿ ತೋರಿಸಿದ್ದೀರಿ. ಅಂದಾಗ ಇವಳನ್ನು ಮದುವೆಯಾಗುವ ಹಕ್ಕು ನನಗೆ ಮಾತ್ರ ಇರೋದು.

ವಿಕ್ರಂ– ನೆವ್ಹರ್, ಇವಳನ್ನು ಮದುವೆಯಾಗುವವನು ನಾನು.

ಅರವಿಂದ– ನೀನಲ್ಲ, ನಾನು.

ವಿಕ್ರಂ– ಬೇಡ ಅರವಿಂದ, ಸುಮ್ಮನೆ ಹಟ ಮಾಡಬೇಡ.

ಅರವಿಂದ– ನೀನೂ ಅಷ್ಟೆ. ಇವಳಾಸೆ ಬಿಟ್ಬಿ ಇಲ್ಲಿಂದ ತೊಲಗು ಇಲ್ಲಾಂದ್ರೆ...

ವಿಕ್ರಂ– ಇಲ್ಲಾಂದ್ರೆ . ? ಏನೋ ಮಾಡ್ತಿಯಾ?.

ಅರವಿಂದ– (ಪಿಸ್ತೂಲು ತೆಗೆಯುತ್ತಾ) ಏನ್ಮಾಡ್ತೀನಿ?...ನಿನ್ನ ಪ್ರಾಣ ತೆಗಿತಿನಿ. (ಭೋಜರಾಜ ಅರವಿಂದನಿಗೆ ಗುಂಡು ಹಾರಿಸುವನು. ಚೀರಿ ನೆಲಕ್ಕೆ ಕುಸಿಯುತ್ತಾ) ಭೋಜರಾಜ, ನನಗೆ ಮೋಸ ಮಾಡಿದ ನಿನ್ನನ್ನೂ... (ಗುಂಡು ಹಾರಿಸಲು ಪ್ರಯತ್ನಿಸುವಾಗ, ಭೋಜರಾಜ ಮತ್ತೆ ಗುಂಡು ಹಾರಿಸುವನು, ಅರವಿಂದ ಸಾಯುವನು)

ವಿಕ್ರಂ– ಫೆಂಟಾಸ್ಟಿಕ್ ಡ್ಯಾಡಿ ಫೆಂಟಾಸ್ಟಿಕ್. ಇವನ್ನ ಕೊಂದು ಒಳ್ಳೆ ಕೆಲ್ಸ ಮಾಡಿದ್ರಿ, ಇನ್ನಿವಳ ಕೊರಳಿಗೆ ನಾನು ಸುಲಭವಾಗಿ ತಾಳಿ ಕಟ್ಟಬಹುದು.

ವಿಶಾಲ– ಸ್ಸಾರಿ ವಿಕ್ರಂ ನಾನು ನಿನ್ನನ್ನು ಮದುವೆಯಾಗಲು ಸಾಧ್ಯವಿಲ್ಲ.

ವಿಕ್ರಂ– ಕಾರಣ?

ವಿಶಾಲ– ತಂದೆ, ಮಗ ಇಬ್ಬರೂ ನನ್ನ ಮೈ ಕದ್ದಿದ್ದೀರಿ ಅಂದಾಗ ಮದುವೆಯಾಗಿ ನಿಮ್ಮೊಬ್ಬರ ಹೆಂಡತಿಯಾಗಿರಲು ಹೇಗೆ ಸಾಧ್ಯ? ಒಂದು ವೇಳೆ ಮಗನ ಹೆಂಡತಿಯೆಂದು. ಮಗಳಂತೆ ಕಾಣುವ ದೊಡ್ಡಗುಣ ಇವರು ಮಾಡಿದರೂ. ಸ್ತ್ರೀ ಸಹಜವಾದ ಸಂಕುಚಿತ ಭಾವನೆ ಇವರನ್ನು ತಂದೆಯೆಂದು ಒಪ್ಪಿಕೊಳ್ಳಲು ಅಡ್ಡಿ ಪಡಿಸುತ್ತದೆ, ಕಾರಣ?

ವಿಕ್ರಂ– ಕಾರಣ ?

ವಿಶಾಲ– ನಿಮ್ಮಿಬ್ಬರಲ್ಲಿ ಯಾರಾದರೊಬ್ಬರು...(ನಗುವಳು)

ವಿಕ್ರಂ– ಏನು ನಿನ್ನ ಮಾತಿನ ಅರ್ಥ

ಭೋಜರಾಜ– ಅಗನು ಅವಳಿಗೆ ಕೇಳುವದು ವ್ಯರ್ಥ. ಸಧ್ಯ ನಾನು ಮಾಡ್ತೀನಿ ಇತ್ಯರ್ಥ.

ವಿಕ್ರಂ– ಡ್ಯಾಡಿ ಇವಳೇನ್ಹೇಳ್ತಿದ್ದಾಳೆ ಅಂದ್ರೆ...

ಭೋಜರಾಜ– ನಮ್ಮಿಬ್ಬರಲ್ಲಿ ಯಾರಾದರೊಬ್ಬರು ಸಾಯ್ಬೇಕು, ಅಂತಿದ್ದಾಳೆ ಅಷ್ಟೇ. ಅದರಲ್ಲಿ ಆಶ್ಚರ್ಯ ಪಡುವಂತಾದ್ದೇನಿದೆ. ನನ್ನ ಡೂಪ್ಲಿಕೇಟ್ ಮಗನೆ?

ವಿಕ್ರಂ– ಡ್ಯಾಡಿ ಏನ್ಹೇಳ್ತಾಯಿದೀರಿ?

ಭೋಜರಾಜ– ಇದ್ದ ವಿಷಯಾನೆ ಹೇಳ್ತಿದ್ದೇನೆ. ನೀನು ನನ್ನ ಹೊಟ್ಟೆಯ ಮಗನಲ್ಲ ನನ್ನಿಚ್ಛೆ ಪೂರೈಕೆಗಾಗಿ ತಂದು ಸಾಕಿದ ಡೂಪ್ಲಿಕೇಟ್ ಮಗ.

ವಿಕ್ರಂ– ಅಂದ್ರೆ

ಭೋಜರಾಜ– ಅಂದ್ರೆ ನನ್ನ ಹೆಂಡತಿ ಗಂಡು ಮಗುವಿಗೆ ಜನ್ಮ ಕೊಟ್ಟು ತಾನೂ ಸತ್ತಳು, ಹುಟ್ಟಿದ ಮಗುವನ್ನೂ ಕರೆದೊಯ್ದಳು. ಆಗ ನಾನು ದುಃಖ ಪಡಲಿಲ್ಲ. ಮುಂದಾಲೋಚನೆಗೆ ಬುದ್ಧಿ ಖರ್ಚು ಮಾಡಿದೆ. ಅಪಾರ ಸಂಪತ್ತಿನ ಒಡತಿಯಾಗಿ ನನ್ನ ತಂಗಿ ಮುಂದೊಂದು ದಿನ ಹೆಣ್ಣು ಮಗುವಿಗಾಗಲೀ ಗಂಡು ಮಗುವಿಗಾಗಲೀ ಜನ್ಮವಿತ್ತಾಗ ನನಗೆ ಮಗಳಾಗಲೀ, ಮಗನಾಗಲೀ ಇದ್ದರಲ್ಲವೆ, ಸಂಬಂಧದ ನೆಪದಲ್ಲಿ ಆಸ್ತಿಯನ್ನು ಲಪಟಾಯಿಸಲು ಸಾಧ್ಯ? ಅದಕ್ಕಾಗಿ ಡಾಕ್ಟರಿಗೆ ಹಣದಾಸೆ ತೋರಿಸಿ,ಸತ್ತ ನನ್ನ ಹೆಂಡತಿಯ ಪಕ್ಕದಲ್ಲಿದ್ದ ಸತ್ತ ಶಿಶುವಿನ ಸ್ಥಳದಲ್ಲಿ ಬೇರೊಂದು ಶಿಶುವನ್ನು ತರಿಸಿ ಹಾಕಿದೆ. ಆ ಶಿಶುವೇ ನೀನು

ವಿಕ್ರಂ– ಹಾಗಾದರೆ ನಾನು ನಿಮ್ಮ ಮಗನಲ್ಲವೆ? ನಾನು ಪರದೇಶಿಯೇ? ಡ್ಯಾಡಿ, ಇದುವರೆಗೂ ನನ್ನನ್ನು ಸಾಕಿ ಸಲುಹಿದ್ದಿರಿ, ವಿದ್ಯಾವಂತನನ್ನಾಗಿ ಮಾಡಿದ್ದೀರಿ. ಹೊಟ್ಟೆಯ ಮಗನಲ್ಲದಿದ್ದರೂ ನಿಮ್ಮ ಕೈಕೂಸಾಗಿ ಬೆಳೆದಿದ್ದೇನೆ. ತಂದೆ–ತಾಯಿ ಗೊತ್ತಿಲ್ಲದ ನನಗೆ ನೀವೇ ತಂದೆ–ತಾಯಿ ದಯವಿಟ್ಟು ಈ ಹೆಣ್ಣಿನ ಹೆಸರಿನಲ್ಲಿರುವ ಆಸ್ತಿಗಾಗಿ ನಮ್ಮಿಬ್ಬರ ಸಂಬಂಧ ಮಾತ್ರ ಕಡಿದು ಹಾಕಬೇಡಿ. ನಿಮ್ಮ ಕಾಲಿಗೆ ಬಿದ್ದು ಬೇಡಿಕೊಳ್ತೀನಿ.

ಭೋಜರಾಜ– ಹುಚ್ಚಪ್ಪಾ, ಈ ಆಸ್ತಿಗಾಗಿ ನಾ ಪಟ್ಟಿರುವ ಕಷ್ಟ ಅಷ್ಟಿಷ್ಟಲ್ಲ. ಈಗವಳು ನಿನ್ನನ್ನು ಮದುವೆಯಾಗಲೊಪ್ಪಿ, ಆಸ್ತಿಯನ್ನು ನಿನ್ನೆಸರಿಗೆ ಬರೆಯುವಂತಾಗಿದ್ದರೆ, ಖಂಡಿತ ನಾನೀ ಗುಟ್ಟನ್ನು ಬಿಚ್ಚುತ್ತಿರಲಿಲ್ಲ. ನಿನ್ನನ್ನು ದೂರ ಮಾಡುತ್ತಿರಲಿಲ್ಲ. ಆದರೀಗ ಸಂದರ್ಭವೇ ಹಾಗೆ ಬಂದು ಬಿಟ್ಟಿದೆ. ನಮ್ಮಿಬ್ಬರಲ್ಲೊಬ್ಬರು ಇಲ್ಲವಾದಾಗ ಮಾತ್ರ. ಇವಳು ತಾಳಿ ಕಟ್ಟಿಸಿಕೊಳ್ಳುತ್ತಾಳೆ. ಈ ಆಸ್ತಿಗೆ ಅಧಿಕಾರಿ ಮಾಡುತ್ತಾಳೆ. ಕಾರಣ, ಅನಿವಾರ್ಯವಾಗಿ ನಿನೆದೆಗೆ ಗುಂಡಿಡುವ ಪ್ರಸಂಗ ಬಂದು ಬಿಟ್ಟಿದೆ.

ವಿಕ್ರಂ– ಡ್ಯಾಡಿ......

ಭೋಜರಾಜ– ಆಯ್ ಆ್ಯಮ್ ಸೊ ಸ್ಸಾರಿ ಮೈ ಡೂಪ್ಲಿಕೇಟ್ ಸನ್. (ಗುರಿ)

ವಿಕ್ರಂ– ಬೇಡ ಡ್ಯಾಡಿ. ನನ್ನನ್ನು ಸಾಯಿಸ್ಬೇಡಿ.

ಭೋಜರಾಜ– ಸಾಯಿಸದೆ ಬೇರೆ ದಾರಿನೆ ಇಲ್ಲ. ದೇವರು ನಿನಗೆ ಒಳ್ಳೇದು ಮಾಡ್ಲಿ (ಗುಂಡು ಹಾರಿಸುವನು)

ವಿಕ್ರಂ– (ಚೀರಿ) ಎಂತಾ ಕೆಲ್ಸ ಮಾಡಿಬಿಟ್ರಿ ಡ್ಯಾಡಿ, ಎಂತಾ ಕೆಲ್ಸ... ಮಾಡಿಬಿಟ್ರಿ... (ಬಿದ್ದು ಸಾಯುವನು)

ವಿಶಾಲ– ಶಹಭಾಷ್ ಭೋಜರಾಜ...ಶಹಭಾಷ್, ಮೆಚ್ಚಿದೆ ನಿನ್ನ ದಿಟ್ಟತನವನ್ನು,

ಭೋಜರಾಜ– ಮೆಚ್ಚಿಕೆಯ ಮಾತಿರಲಿ, ನಿನ್ನಿಚ್ಛೆಯ ಗಂಡನಾಗಲು ನಾನೀಗ ಸಿದ್ಧನಿದ್ದೇನೆ. ಹೇಳು ಯಾವಾಗ ನಮ್ಮ ಮದುವೆ?

ವಿಶಾಲ– ಎಲ್ಲಿ, ಯಾವಾಗ ಯಾಕೆ? ಇಲ್ಲೆ, ಈಗಲೇ ಈ ಸತ್ಪುರುಷ ಧರ್ಮಯ್ಯನವರ ಪ್ರತಿಮೆಯೆದುರೆ ಆಗುವುದು...

**ಭೋಜರಾಜ**– (ನಗು) ನಮ್ಮಿಬ್ಬರ ಮದುವೆ.

ವಿಶಾಲ– ಅಲ್ಲ, ನಿನ್ನ ಮಸಣ ಯಾತ್ರೆ (ಗುಂಡು ಹಾರಿಸುವಳು)

ಭೋಜರಾಜ– (ನರಳುತ್ತಾ) **ಮೋಡಿಯ ಮಾತಾಡಿ**. ನನ್ನ ಜೀವಕ್ಕೆ ಕುತ್ತು ತಂದೆಯಾ ಮೋಸಗಾತಿ.

ವಿಶಾಲ– ನಾನು ಮೋಸಗಾತಿಯಲ್ಲ, ಛಲಗಾತಿ. ನಾ ಮಾಡಿದ ಪ್ರತಿಜ್ಞೆ ನೆರವೇರಿತು. ಧರ್ಮಯ್ಯನವರ ಆತ್ಮಕ್ಕೆ ಶಾಂತಿ ಸಿಕ್ಕಿತು, ನನ್ನ ಛಲ ತೀರಿತು. ಸ್ತ್ರೀಕುಲಕ್ಕೆ ಬಲ ಬಂದಿತು (ನಗುವಾಗ, ಭೋಜರಾಜ ಗುಂಡು ಹಾರಿಸಿ, ಬಿದ್ದು ಸಾಯುವನು) ಅಮ್ಮಾ...

(ವನಜ, ವಕೀಲ, ಪೋಲಿಸರು, ರಂಗ, ಲಿಲ್ಲಿ ಬರುವರು)

ವನಜ– ವಿಶಾಲಕ್ಕ, ಇದೇನು ಅನ್ಯಾಯ ಮಾಡಿಕೊಂಡು ಬಿಟ್ಟೆ ?

ವಕೀಲ– ವಿಶಾಲಮ್ಮ, ದುಡಿಕಿ ಅನಾಹುತ ಮಾಡಿಕೊಂಡುಬಿಟ್ಟಿರುವಿಯಲ್ಲಮ್ಮ

ವಿಶಾಲ– ನಾನೆಲ್ಲ ಸರಿ ಮಾಡಿದ್ದೇನೆ ವಕೀಲ್ರೆ...ಎಲ್ಲರಿಗೂ ನನ್ನ ಕೊನೆಯ ನಮಸ್ಕಾರಗಳು...(ಸಾಯುವಳು)

–ತೆರೆ–

**ಶುಭಂ**

# ನಮ್ಮ ಪ್ರಕಾಶನದ ಹೊಸ ನಾಟಕಗಳು

ಪ್ರೇಮ ಪಂಜರ" ಖ್ಯಾತ ನಾಟಕಕಾರ ವೀರಣ್ಣ

ಹೊಸಮನಿ ವಿರಚಿತ

## ಅಮರ ವೀರ

"ನಾಸ್ತಿಕರಲ್ಲ.. ನನ್ನ ಹಡೆದವರು" ಖ್ಯಾತಿಯ ಕೆ. ಎಸ್. ಮಹದೇವಯ್ಯ ವಿರಚಿತ ಹೊಸ ನಾಟಕ

## ಹೂವಾಗಿ ನಕ್ಕಿತು

## ಹಾವಾಗಿ ಕಚ್ಚಿತು

ಅರ್ಥಾತ್

## ಇದು ಹಿಂಗ್ಯಾಕಾತು ?

## ಯಾಕ ಹಿಂಗಾತು

ನಮ್ಮಲ್ಲಿ ದೊರೆಯುವ ಇತರ ಪುಸ್ತಕಗಳು

1) ಸತ್ಯ ಎಲ್ಲಿದೆ ಕೈಯೆತ್ತಿ ಹೇಳಿ
2) ರೈತ ನಗಲಿಲ್ಲ ಸರಕಾರ ಉಳಿಯಲಿಲ್ಲ
3) ಸೇಡು ಬಾಳಿಗೊಂದು ಕೇಡು
4) ಹುಚ್ಚರಿರುವರು ತಂಗಿ ಎಚ್ಚರಿಕೆ

---

**ಬೆಲೆ: 15-00**